ಏನು ಕಡಿಮೆ
ಬೆಲೆಯೇ
ಎಲ್ಲಾನು ನಾ?



"ಎಂದೂ ಇಲ್ಲ. ಅಮ್ಮನಾಗಿ ಮತ್ತು ಡಾಕ್ಟರಳಾಗಿ ನಾನು ನನ್ನ ಮಗುವಿಗೆ ಯಾವುದು ಒಳ್ಳೇದು ಎಂದು ಅರಿತಿದ್ದೇನೆ. ಆದ್ದರಿಂದಲೇ ನನ್ನ ಗಮನ ಮೊದಲು ಕ್ವಾಲಿಟಿ ಮತ್ತು ಶುದ್ಧತೆಯಕಡೆಗೆ ಆದರೆ ಅದೇ ಉಚ್ಚ ಕ್ವಾಲಿಟಿ ಮತ್ತು ಶುದ್ಧತೆ ಕಡಿಮೆ ಬೆಲೆಯಲ್ಲಿ ಸಿಕ್ಕರೆ ಆಗ್ಲೂ ನಾ ಜಾಸ್ತಿ ಬೆಲೆ ಕೊಡುವೆನೇ? ಎಂದೂ ಇಲ್ಲ. ಆದ್ದರಿಂದಲೇ ನಾನು ನನ್ನ ಮಗುವಿಗಾಗಿ ನನ್ನದಾಗಿಸಿ ಕೊಂಡಿದ್ದೇನೆ, ಶುದ್ಧ, ಕೋಮಲ ಮತ್ತು ಸ್ಟರ್‌ಲಾಯಿಜ್ಡ್ ವಿಪ್ರೋಬೇಬಿ ಸಾಫ್ಟ್ ಪೌಡರ್. ವಿಶೇಷ ಪ್ಲೇಟಲೆಟ್ ಗ್ರೇಡಿನ ಈ ಪೌಡರ್ ಸಾಮಾನ್ಯ ಪೌಡರ್‌ಗಳಂತೆ ಚರ್ಮದೊಳಗೆ ನುಗ್ಗಿ ಚರ್ಮದ ತೂತುಗಳನ್ನು ಮುಚ್ಚುವುದಿಲ್ಲ. ಮೇಲೆ ಮೇಲೆಯೇ ಇದ್ದು ಚರ್ಮಕ್ಕೆ ಸುಲಭವಾಗಿ ಉಸಿರಾಡುವುದಕ್ಕೆ ಅವಕಾಶ ಮಾಡಿಕೊಡುತ್ತದೆ. ಅಂದರೆ ಮಗುವಿಗೆ ಪೂರ್ಣವಾಗಿ ಸುರಕ್ಷಿತವಾದದ್ದು. ಇದೆಲ್ಲಾ ಇದ್ದರೂ ಸಹ ಬೆಲೆ ಅತಿ ಕಮ್ಮಿ. ಏನು ಈಗ್ಲೂ ಜಾಸ್ತಿ ಬೆಲೆಕೊಟ್ಟು ಬೇರೆ ಯಾವುದೇ ಪೌಡರ್ ಕೊಂಡುಕೊಳ್ಳುವಿರಾ ನೀವು?"

24 ರೂಗಳು
100 ಗ್ರಾಂಗೆ
ಎಲ್ಲಾ ತೆರಿಗೆ
ಸೇರಿ.




ವಿಪ್ರೋ
ಬೇಬಿ ಸಾಫ್ಟ್
ಪೌಡರ್

ಶುದ್ಧತೆ ಪಾಪನಿಗೆ, ಉಳಿತಾಯ ನಿಮಗೆ.

everest/92/WL/235-kn

# ನಿಮ್ಮ ಮನಮೋಹಕ ನಯನಗಳಿಗೆ
# ಮಂಗಳ ಕಾಂತಿ ನೀಡುವ ಕಾಡಿಗೆ
# ಐಟೆಕ್ಸ್

**तस्याः सुजातोत्पलपत्रकान्ते प्रसाधिकाभिर्नयने निरीक्ष्य ।**
**न चक्षुषो : कान्तिविशेषबुद्धया कालञ्जनं मङ्गलमित्युपात्तम् ।।**

**SARGA-7, SLOKA-20 (KUMARA SAMBHAVAM)**

ಪೂರ್ತಿಯಾಗಿ ಅರಳಿದ ನೀಲಿ ಬಣ್ಣದ ಕಮಲದಂತೆ ತೋರುವ
ಪಾರ್ವತಿಯ ಅಗಲವಾದ ಶ್ಯಾಮಲ ವರ್ಣದ ಅಂದದ ಕಣ್ಣುಗಳಿಗೆ
ಅವಳನ್ನು ಅಲಂಕರಿಸುವ ಸಖಿಯರು ಕಾಡಿಗೆ ಹಾಕಿದುದು ಅದು
ಸಾಂಪ್ರದಾಯಿಕ ಸ್ತ್ರೀತ್ವದ ಮಂಗಳಕರ ಚಿಹ್ನೆ ಎಂಬುದಕ್ಕಾಗಿ, ಅವಳ
ನೇತ್ರ ಸೌಂದರ್ಯವನ್ನು ಹೆಚ್ಚಿಸುವುದಕ್ಕಾಗಿ ಅಲ್ಲ.
ಸರ್ಗ-7, ಶ್ಲೋಕ-20 (ಕುಮಾರಸಂಭವಂ-ಮಹಾಕವಿ ಕಾಳಿದಾಸ)




ಕಣ್ಣುಗಳಿಗೆ ತಂಪನ್ನು ನೀಡುವ,
ಆರೋಗ್ಯಯುತವಾದ, ಶಾಸ್ತ್ರೀಯ ರೀತಿಯಲ್ಲಿ
ತಯಾರಿಸಲಾದ ಕಾಡಿಗೆ.







**ಐಟೆಕ್ಸ್** 50ಕ್ಕೂ ಹೆಚ್ಚು ವರ್ಷಗಳಿಂದ
ನಂಬಿಕೆಯ ಮಹೋನ್ನತ ಚಿಹ್ನೆ.

ಅರವಿಂದ್ ಲ್ಯಾಬೊರಟರೀಸ್, ಮದರಾಸು 600 033.

Imageads 3113 Kan

## Say No to Drugs

# ವನಿತಾ ವೇದಿಕೆ

## ಈ ಜಾಹೀರಾತುಗಳು ಬೇಕೇ?

ಜಾಹೀರಾತುಗಳು ಭಾರತದಂತಹ ಬಡ, ಅನಕ್ಷರಸ್ಥ ದೇಶಗಳಲ್ಲಿ ಪ್ರಮುಖ ಪಾತ್ರ ವಹಿಸುತ್ತಿವೆ. ಮಕ್ಕಳಿಂದ ಹಿಡಿದು ವೃದ್ಧರವರೆಗೆ ಒಂದಲ್ಲ ಒಂದು ವಿಧದಲ್ಲಿ ಈ ಜಾಹೀರಾತುಗಳಿಂದ ಪ್ರಭಾವಿತರಾದವರೇ ಹೆಚ್ಚು. ಅತೀ ಕಡಿಮೆ ಅವಧಿಯಲ್ಲಿ ಹಣ, ಹೆಸರು ಗಳಿಸುವ ಸಾಧ್ಯತೆ ಇರುವುದು ಈ ಜಾಹೀರಾತುಗಳಿಂದ ಮಾತ್ರ. ಹಾಗಾಗಿ ಈ ಜಾಹೀರಾತುಗಳು ಇಂದಿನ ಯುವ ಜನಾಂಗವನ್ನು ಭ್ರಮಾಲೋಕಕ್ಕೆ ಕೊಂಡೊಯ್ಯುತ್ತಿವೆ.

ಇಷ್ಟೇ ಅಲ್ಲ ಈ ಜಾಹೀರಾತುಗಳು ಹೆಣ್ಣನ್ನು 'ಸೆಕ್ಸ್ ಸಿಂಬಲ್' ಆಗಿ ತೋರಿಸುತ್ತಿವೆ. ಸೋಪಿನ ಜಾಹೀರಾತೇ ಆಗಿರಲಿ, ಶೇವಿಂಗ್ ಕ್ರೀಂನ ಜಾಹೀರಾತೇ ಆಗಿರಲಿ, ಸಿಗರೇಟಿನ ಜಾಹೀರಾತೇ ಆಗಿರಲಿ, ಹೆಣ್ಣಿರಲೇ ಬೇಕು. ಇಲ್ಲದಿದ್ದರೆ ಆ ಜಾಹೀರಾತು ಅಪೂರ್ಣ. ಇಲ್ಲಿ ಹೆಣ್ಣು ವಸ್ತುವಿನ ಗುಣಮಟ್ಟವನ್ನು ಹೆಚ್ಚಿಸುವ ಮಾಧ್ಯಮವಾಗುತ್ತಾಳೆಯೇ ಹೊರತು 'ಲಿವಿಂಗ್ ಬೀಯಿಂಗ್' ಎನಿಸಿಕೊಳ್ಳುವುದಿಲ್ಲ. ಪ್ರಸಿದ್ಧ ಆಲ್ವಿನ್ ವಾಚಿನ ಕಂಪೆನಿ ಜಾಹೀರಾತಿನಲ್ಲಿ ಅಶ್ಲೀಲ ಅನ್ನುವುದಕ್ಕಿಂತ ತುಸು ಹೆಚ್ಚಿನ ಮಟ್ಟದ ಭಂಗಿಯನ್ನು ಬಳಸಿಕೊಂಡಿದ್ದು ನಂತರ ದೇಶದಾದ್ಯಂತ ವಿವಿಧ ಮಹಿಳಾ ಸಂಘಗಳಿಂದ ಪ್ರತಿಭಟನೆ ಕಂಡು ಬಂದ ನಂತರ ಇದ್ದಕ್ಕಿದ್ದ ಹಾಗೆ ಆ ಜಾಹೀರಾತು ಮಾಯವಾದದ್ದು ಎಲ್ಲರಿಗೂ ಗೊತ್ತು. ದಿವಂಗತ ಪ್ರಧಾನಿ ರಾಜೀವ ಗಾಂಧಿಯವರು ಅರೆ ಬೆತ್ತಲೆ ಹೆಂಗಸರ ಸೋಪಿನ ಜಾಹೀರಾತಿನ ಬಗ್ಗೆ ಟೀಕಿಸಿದ ನಂತರ ನಾಲ್ಕು ಪ್ರಸಿದ್ಧ ಕಂಪೆನಿಗಳ ಜಾಹೀರಾತುಗಳನ್ನು ಹಿಂತೆಗೆದುಕೊಳ್ಳಲಾಯಿತು. ಇನ್ನೂ ಇಪ್ಪತ್ತನಾಲ್ಕು ಜಾಹೀರಾತುಗಳನ್ನು ಪುನರ್ವಿಮರ್ಶೆಗೆ ಸೇರಿಸಲಾಯಿತು. ಹಾಗೆಂದು ದೂರದರ್ಶನ ಸಹ ತನ್ನ ಆದಾಯವನ್ನು ಕಳೆದುಕೊಳ್ಳಲು ಸಿದ್ಧವಿಲ್ಲ. ಇಂತಹ ಜಾಹೀರಾತುಗಳಿಂದ 1988ರಲ್ಲಿ ನೂರೈವತ್ತು ಕೋಟಿಗೂ ಹೆಚ್ಚು ಆದಾಯ ಗಳಿಸಿತ್ತು. ದೂರದರ್ಶನ ಕೋಡಿನ (ವಾಣಿಜ್ಯ ಜಾಹೀರಾತು) ಅಧ್ಯಾಯII ನಿಯಮ 2 (VIII) ಹೆಣ್ಣನ್ನು ಸಮಾನತೆಯ ಹಕ್ಕಿನಿಂದ ವಂಚಿಸಿ ಅವಳನ್ನು ಕೀಳಾಗಿ ತೋರಿಸುವುದನ್ನು ನಿಷೇಧಿಸುತ್ತದೆ. ಜಾಹೀರಾತುಗಳು ಕಲಾತ್ಮಕವಾಗಿರಬೇಕೇ ಹೊರತು ಹೆಣ್ಣು ಗಂಡುಗಳ ಮಧ್ಯ ಅಗೌರವ ತರುವಂತಾಗಬಾರದೆಂದು ಹೇಳಿದ್ದರೂ ಅದನ್ನು ನೆನಪಿಟ್ಟುಕೊಳ್ಳುವವರು ಯಾರು?

ಇಷ್ಟೇ ಅಲ್ಲ ಇವು ಪ್ರತಿಬಿಂಬಿಸುವುದು ನಮ್ಮ "ಸ್ಟೀರಿಯೋ ಟೈಪ್ಡ್" ತಂದೆ ತಾಯಿಗಳ ಪಾತ್ರವನ್ನು. ತಾಯಿಗೆ ಅಡುಗೆ, ಗಂಡ ಮಕ್ಕಳ ಕೆಲಸ. ತಂದೆ ಬಂದ ತಕ್ಷಣ ಬಿಸಿ ಬಿಸಿ ಸಮೋಸಾಗಳನ್ನು ಗಗನ ಎಣ್ಣೆಯಲ್ಲಿ ಕರಿದು ಕೊಡಬೇಕು. ಈ ರೀತಿಯ ಜಾಹೀರಾತುಗಳು ಹೆಣ್ಣು ಮಕ್ಕಳಲ್ಲಿ ಕೀಳರಿಮೆ ಬೆಳೆಯಲು ಕಾರಣವಾಗಲಾರವೆ? ಅಥವಾ ತಾನೆಷ್ಟೇ ಓದಿದರೂ ಅಡುಗೆ ಮನೆ, ಮಕ್ಕಳು ಮಾತ್ರ ತನ್ನ ಪ್ರಪಂಚವೆಂದು ತಿಳಿಯುವಂತೆ ಮಾಡಿ ಪ್ರತಿಭೆಗಳನ್ನು ಮುರುಟ ಹಾಕಿದಂತಾಗುವುದಿಲ್ಲವೆ?

—ಎಸ್.ಜೆ. ಸುಜಾತ ಶೃಂಗೇರಿ

**ವನಿತಾ**

## ವಿದ್ಯಾರ್ಥಿನಿಯರ ಶೀರ್ಷಿಕೆ

'ವನಿತಾ'ದಲ್ಲಿ ವಿದ್ಯಾರ್ಥಿನಿಯರ ಶೀರ್ಷಿಕೆಯನ್ನು ಪುನಃ ಪ್ರಾರಂಭಿಸುತ್ತಿದ್ದೇವೆ ಎಂದು ತಿಳಿಸಲು ತುಂಬಾ ಹರ್ಷಿಸುತ್ತಿದ್ದೇವೆ. ಈ ಶೀರ್ಷಿಕೆಗಾಗಿ ವಿದ್ಯಾರ್ಥಿನಿಯರಿಂದ ಲೇಖನ, ಕವನ, ಕಥೆ ಹಾಸ್ಯ ಮುಂತಾದುವುಗಳನ್ನೂ ಆಹ್ವಾನಿಸುತ್ತಿದ್ದೇವೆ. ಹಾಗೆಯೇ ವಿದ್ಯಾರ್ಥಿ ಜೀವನದ ಸ್ವಾರಸ್ಯಮಯ ಘಟನೆಗಳನ್ನೂ ಬರೆದು ಕಳುಹಿಸಬಹುದು. ಆಯ್ಕೆಯಾಗಿ ಪ್ರಕಟಗೊಂಡ ಲೇಖನಗಳಿಗೆ ಸೂಕ್ತ ಸಂಭಾವನೆ ಇದೆ. ಬರೆದು ಕಳಿಸುವ ವಿಳಾಸ :

'ವನಿತಾ'
ಕಮಾಂಡರ್ಸ್ ಪ್ಲೇಸ್ (ಮಹಡಿ) ರಾಜಾರಾಮ ಮೋಹನರಾಯ್ ರಸ್ತೆ
ಬೆಂಗಳೂರು – 560 025.

## ವನಿತಾ ವಾಣಿ

ಸೆಪ್ಟೆಂಬರ್ ಸಂಚಿಕೆಯು ಶ್ರೀ ಮಹೇಶ್ ರವರ ವ್ಯಂಗ್ಯ ಚಿತ್ರಗಳಿಂದ ರಂಜಿತವಾಗಿತ್ತು. ಒಳಪುಟದಲ್ಲಿ 'ಅಡುಗೆ ಮನೆಯಲ್ಲಿ ನನ್ನ ಯಜಮಾನರು' ಲೇಖನ ದಲ್ಲಿರುವ ಶ್ರೀಮತಿ ರಮಾ ಗೋವಿಂದರಾಜುರವರ ಮನೆಯ 'ಅಡುಗೆ ಗುಟ್ಟನ್ನು' ತಿಳಿದು ನಮ್ಮ ಯಜಮಾನರು ಈ ಐಡಿಯಾ ನನಗೆ ಹೊಳೆಯಲಿಲ್ಲ ವಲ್ಲೇ ಚೆನ್ನಾ ಎಂದು ಪರಿತಪಿಸುತ್ತಿದ್ದಾರೆ.

**ಸುನೀತಿ ಸತ್ಯನಾರಾಯಣರಾವ್,**
ಕುಶಾಲ ನಗರ

ಈ ಬಾರಿಯ ವನಿತಾದಲ್ಲಿ ಮೂಡಿ ಬಂದ ಗಣೇಶನ ಬಗೆಗಿನ ಸವಿಸ್ತಾರ ಲೇಖನಗಳಿಂದ ಗಣಪನ ಬಗ್ಗೆ ಸಾಕಷ್ಟು ಮಾಹಿತಿ ದೊರೆಯಿತು. 'ಜಾಹ್ನವಿ ಜಯಪ್ರಕಾಶ್'ರ ಪರಿಚಯ ಲೇಖನ 'ರಘುಸುತ'ರ ಲೇಖನಿಯಿಂದ ಸುಂದರವಾಗಿ ಮೂಡಿ ಬಂದಿದೆ. ಆದರೆ ಕತೆಗಳ ಸಂಖ್ಯೆ ಕಡಿಮೆಯಾದಂತೆ ಎನ್ನಿಸಿತು. 'ಸಂಚು' ಕತೆ ಓದಿದ ನಂತರ ಇಂಥ ಕತೆಗಳಲ್ಲಿ ಸಾಮಾನ್ಯವಾಗಿ ಮೊದಲನೆಯ ಪತ್ನಿ ಶೋಷಣೆಗೆ ಒಳಗಾಗುತ್ತಿದ್ದುದನ್ನೇ ಓದುತ್ತಿದ್ದ ನಮಗೆ ತಾರಾಳಿಗೆ ಅಂತ್ಯದಲ್ಲಿ ದೊರಕಿದ ಅವಸ್ಥೆಯನ್ನು ಊಹಿಸಿಕೊಳ್ಳಲೂ ಅಸಾಧ್ಯವಾಯಿತು. ಮಾನವರು ಎಂಥ ಸ್ವಾರ್ಥಿಗಳು?! ಎಂದು ನಿಟ್ಟುಸಿರು ಬಿಡುವಂತಾಯಿತು. 'ಅಡಿಗೆ ಮನೆಯಲ್ಲಿ ನನ್ನ ಯಜಮಾನರು' ಹಾಸ್ಯ ಲೇಖನ ನಮ್ಮೆಲ್ಲರನ್ನೂ ನಗಿಸಿ ನಲಿಯಿತು. ವಸುಂಧರಾರವರ ಸಂದರ್ಶನ ಮನಸೆಳೆಯಿತು.

**ಸುಮತಿ ಕೃಷ್ಣರಾವ್**
ತುಮಕೂರು

'ಅಡಿಗೆ ಮನೆಯಲ್ಲಿ ನನ್ನ ಯಜಮಾನರು' ಲೇಖನದ ಹಾಸ್ಯ ಚಿತ್ರಗಳನ್ನೂ ಮುಖ ಪುಟವಾಗಿ ಹೊತ್ತು ತಂದ ಸೆಪ್ಟೆಂಬರ್ ಮಾಹೆಯ 'ವನಿತಾ' ಸೊಗಸಾಗಿದೆ.

'ಗಣೇಶ – ಒಂದು ಬೌದ್ಧಿಕ ಪ್ರತೀಕ' (ಮೀರಾ) ಲೇಖನದಲ್ಲಿ 'ವಿಘ್ನ ನಿವಾರಕ ಗಣೇಶ'ನ ಬಗ್ಗೆ ಹೆಚ್ಚಿನ ಮಾಹಿತಿಯನ್ನು ತಿಳಿಸುತ್ತದೆ.

ಪಡುಬಿದ್ರಿ ಶ್ರೀ ಮಹಾಗಣಪತಿಯ ಚಿತ್ರ ಬಹಳ ಆಕರ್ಷಕವಾಗಿ ಮೂಡಿ ಬಂದಿದೆ.

ಭರತನಾಟ್ಯ ಕಲಾವಿದೆ ಶ್ರೀಮತಿ ವಸುಂಧರಾ ದೊರೆಸ್ವಾಮಿಯವರ ಬಗ್ಗೆ ಸ್ವಲ್ಪ ಮಟ್ಟಿಗೆ ಪರಿಚಿತವಿದ್ದ ನಮಗೆ, ಅವರ ಸಂದರ್ಶನ–ಸಹಿತ ಲೇಖನದಿಂದ ಹೆಚ್ಚಿನ ವಿಷಯ ತಿಳಿಯಿತು.

ಸುಭದ್ರಾ ಡಿ. ಬಡಿಗೇರರವರ 'ಭೂಷಣ' ಹಾಗೂ 'ಮರೆವು' ಕವನಗಳು ಬಹಳ ಅರ್ಥ ಪೂರ್ಣವಾಗಿದೆ.

ಸುಲೋಚನಾ ಜಗದೀಶ ವಿರಚಿತ ಕಥೆ 'ಸಂಚು'ದಲ್ಲಿ 'ಹೆಣ್ಣಿಗೆ ಹೆಣ್ಣೇ ಶತ್ರು' ಎಂಬುದನ್ನು ವೇದಳ ಪಾತ್ರದಲ್ಲಿ ನಾವು ಕಾಣಬಹುದು.

ಗ್ರಾಮೀಣ ಮಹಿಳೆಯರ ಉದ್ಧಾರಕ್ಕಾಗಿ ಹಾಗೂ ಅವರನ್ನು ಸ್ವಾವಲಂಬಿಗಳಾಗಿ ಮಾಡುವಲ್ಲಿ ನೆರವಾಗಿರುವ ಮಂಡ್ಯ ಜಿಲ್ಲೆಯ ಸಹಕಾರಿ ಕ್ಷೇತ್ರದ ಮಹಿಳಾ ವಿವಿಧೋದ್ದೇಶ ಸಂಘದ ಕಾರ್ಯ ಸಾಧನೆ ನಿಜಕ್ಕೂ ಶ್ಲಾಘನೀಯವಾದುದಾಗಿದೆ.

### ಪ್ರತಿಭಟನೆಯ ಅಂಚೆಚೀಟಿ

ಬಾರ್ಸಿಲೋನಾ ಒಲಿಂಪಿಕ್ ಆರಂಭೋತ್ಸವದ ಸ್ಮರಣಾರ್ಥ ಬಿಡುಗಡೆಗೊಳಿಸಲಾದ ಅಂಚೆ ಚೀಟಿಯಲ್ಲಿ ಉಗ್ರ ರಾಜಕೀಯ ಪ್ರತಿಭಟನೆ ಇರುವುದಾಗಿ ಅಂಚೆಚೀಟಿ ಮಾರಾಟಗಾರರು ಹೇಳುತ್ತಿದ್ದಾರೆ.

ಅಂಚೆಚೀಟಿಯ ಮೇಲೆ ಮುದ್ರಿಸಲಾದ ಮಾರಾಥಾನ್ ಓಟಗಾರರ ಎದೆಯ ಮೇಲೆ ಮುದ್ರಿಸಲಾದ ಅಂಕೆಗಳು ತಿಯಾನ್‌ಮೆನನ್ ಚೌಕದಲ್ಲಿ ನರಹತ್ಯೆ ನಡೆದ 1989ರ ಜೂನ್ 4ನ್ನು ಸ್ಪಷ್ಟವಾಗಿ ಸೂಚಿಸುತ್ತಿದ್ದವು. ಇದನ್ನು ಭೂತಗನ್ನಡಿಯ ಸಹಾಯವಿಲ್ಲದೆ ಎದ್ದು ಕಾಣುವಂತೆ ಮುದ್ರಿಸಲಾಗಿತ್ತು.

ಇದು ಪೂರ್ವ ನಿಯೋಜಿತವೋ ಅಥವಾ ಆಕಸ್ಮಿಕವೋ ತಿಳಿಯದು. ಆದರೆ ಈ ಅಂಚೆ ಚೀಟಿಯ ಬೆಲೆ ಇದ್ದಕ್ಕಿದ್ದಂತೆ ದುಪ್ಪಟ್ಟು, ಮುಪ್ಪಟ್ಟು, ನಾಲ್ಕು ಪಟ್ಟಾಗಿ ಏರಿತು. ಮುಂದಿನ ಸಾಲಿನ ಚೀನದವನಂತೆ ಹೋಲಿಕೆ ಇರುವ ಒಬ್ಬ ಓಟಗಾರನ ಎದೆಯ ಮೇಲೆ "64" ಎಂದು ನಮೂದಿಸಲಾಗಿತ್ತು. ಅವನ ನಂತರ ಇರುವವನ ಎದೆಯ ಮೇಲೆ "17" ಎಂದು ನಮೂದಿಸಲಾಗಿತ್ತು. ಅದರ ನಂತರ ಇರುವವನ ಎದೆಯ ಮೇಲೆ "9" ಅಂಕೆಯನ್ನು ನಮೂದಿಸಲಾಗಿತ್ತು.

ಇಲ್ಲಿನೋ ವಿಶೇಷವಿದೆಯೆಂದು ಗಮನಿಸುತ್ತಿದ್ದ ಚೀನದ ಜನರಿಗೆ ತಕ್ಷಣವೇ ಮಿಂಚು ಹೊಳೆದಂತಾಯಿತು. ಈ "64" ಆರನೇ ತಿಂಗಳ ನಾಲ್ಕನೇ ದಿನ ಹಾಗೂ '17' ಅಂದರೆ 1+7 – 8 ಹಾಗೆಯೇ ಮುಂದಿನ ಅಂಕೆ 9 ಇರುವುದನ್ನು ಗಮನಿಸಿದಾಗ ಒಗಟು ಒಡೆದು ಸ್ಪಷ್ಟವಾಯಿತು. ಇದು ಬೇರೇನೂ ಅಲ್ಲ, ತಿಯಾನ್‌ಮೆನನ್ ಚೌಕದಲ್ಲಿ ಪ್ರಜಾಪ್ರಭುತ್ವದ ಪರವಾಗಿ ಚೀನದ ವಿದ್ಯಾರ್ಥಿಗಳು ಪ್ರದರ್ಶನ ನಡೆಸಿದಾಗ ಚೀನದ ಕಮ್ಯೂನಿಸ್ಟ್ ಸರಕಾರ ತನ್ನ ಪ್ರಜೆಗಳ ಮೇಲೆ ಟ್ಯಾಂಕ್ ದಾಳಿ ನಡೆಸಿ ನರಹತ್ಯೆ ಮಾಡಿದ 1989ರ ಜೂನ್ 4ನೇ ದಿನಾಂಕವನ್ನು ಸೂಚಿಸುತ್ತದೆ ಎಂದು ತಿಳಿದಾಗ ಜನರು ವಿಶೇಷವಾಗಿ ಚುರುಕುಗೊಂಡರು.

"ಇದು 1989ರ ಜೂನ್ 4ರ ಘಟನೆಯನ್ನು ನೆನಪಿಸುತ್ತದೆ. ಇದನ್ನು ಖರೀದಿಸಿ" ಎಂದು ತಿಯಾನ್‌ಮೆನನ್ ಚೌಕದ ದಕ್ಷಿಣ ಭಾಗದಲ್ಲಿರುವ ಅಂಚೆಚೀಟಿ ಮಾರಾಟಗಾರನೊಬ್ಬ ನೇರವಾಗಿ ಹೇಳಿದಾಗ ಬಾಯಿಂದ ಬಾಯಿಗೆ ಹಬ್ಬಿದ ವಿಷಯ ಎಲ್ಲೆಲ್ಲೂ ಹರಡಿ ಜನ ಈ ಅಂಚೆಚೀಟಿಗಾಗಿ ನುಗ್ಗಿಬಿದ್ದರು. ಅಂಚೆ ಕಚೇರಿಯ ಮುಂದೆ ಜನ ಸರತಿಯ ಸಾಲಿನಲ್ಲಿ ನಿಂತು ಇದನ್ನು ಖರೀದಿಸಲಾರಂಭಿಸಿದರು. 5 ಯುವಾನ್ (ಸುಮಾರು ಒಂದು ಡಾಲರ್) ಮುಖಬೆಲೆಯ ಈ ಅಂಚೆಚೀಟಿ ಬೇಡಿಕೆ ಏರಿ 20 ಯುವಾನ್ (3.7 ಡಾಲರ್)ಗಳಿಗೆ ಮಾರಾಟವಾಯಿತು. ಯಾರಾದರೂ ಇದನ್ನು "ಜನ ಮರುಳೋ, ಜಾತ್ರೆ ಮರುಳೋ" ಎನ್ನಬಹುದು. ಆದರೆ ಚೀನದ ಪ್ರಜೆಗಳಿಗೆ ವ್ಯಕ್ತಿ ಸ್ವಾತಂತ್ರ್ಯ, ಅಭಿವ್ಯಕ್ತಿ ಸ್ವಾತಂತ್ರ್ಯ, ಪ್ರಜಾಪ್ರಭುತ್ವ ಬಹುಮೂಲ್ಯ. ಅವರ ಅಭಿಪ್ರಾಯದಂತೆ ಅದಕ್ಕಾಗಿ ಜೀವ ತೆತ್ತವರ ನೆನಪಿಗೆ ಹಣದಿಂದ ಬೆಲೆ ಕಟ್ಟಲಾಗದು. ಈ ಅಂಚೆಚೀಟಿ ಚೀನ ಜನತೆಯ ಪ್ರಜಾಪ್ರಭುತ್ವದ ಬಯಕೆಗೆ ಹೊಸ ಇಂಬು ನೀಡಿದೆ.

## ಓದುಗರಿಗೆ ದಸರ ಶುಭಾಶಯಗಳು


**ವನಿತಾ**
ಮಹಿಳೆಯರ ಮಾಸಪತ್ರಿಕೆ
ಸಂಪುಟ : 15 ಸಂಚಿಕೆ : 1
ಅಕ್ಟೋಬರ್ – 1992
ಬಿಡಿಪ್ರತಿ : 6–00 ರೂಪಾಯಿ
ವಾರ್ಷಿಕ ಚಂದಾ 72/– ರೂ.

ವಿಳಾಸ
ಡಾಲ್ಟನ್ ಪಬ್ಲಿಕೇಷನ್ಸ್
ಚಂದಮಾಮ ಬಿಲ್ಡಿಂಗ್ಸ್
ಮದರಾಸು – 600 026

ಬೆಂಗಳೂರು ಕಚೇರಿ ವಿಳಾಸ
"ವನಿತಾ"
ಕಮಾಂಡರ್ಸ್ ಪ್ಲೇಸ್ (ಮಹಡಿ)
ರಾಜಾರಾಮ ಮೋಹನರಾಯ್ ರಸ್ತೆ
ಬೆಂಗಳೂರು – 560 025
ಫೋನ್ : 220912


ಸೆಪ್ಟೆಂಬರ್ ತಿಂಗಳ 'ವನಿತಾ'ದಲ್ಲಿ 'ಅಡಿಗೆ ಮನೆಯಲ್ಲಿ ನಮ್ಮ ಯಜಮಾನರು' ಈ ಶೀರ್ಷಿಕೆಯಡಿಯಲ್ಲಿ ಮೂಡಿ ಬಂದ ಲೇಖನಗಳಲ್ಲಿ ಸ್ವಾರಸ್ಯಪೂರ್ಣ ಅನುಭವಗಳನ್ನು ಮಹಿಳೆಯರು ಸೊಗಸಾಗಿ ವರ್ಣಿಸಿದ್ದಾರೆ. ಕೆಲವೊಬ್ಬರ ಅನುಭವಗಳು ತಮಾಷೆಯಾಗಿವೆ. ಅಡಿಗೆ ತಯಾರಿಸುವ ವಿಧಾನ, ತಯಾರಿಸುವಾಗ ಗಂಡಸರಿಗಾಗುವ ಫಜೀತಿ ಈ ಅಡಿಗೆ ಮನೆಯ ಅನುಭವವೇ ಒಂದು ರಸಪೂರ್ಣ ಸಾಹಿತ್ಯವಾಗಿ ಬಂದಿದೆ. ಇಂತಹ ಉತ್ತಮ ಲೇಖನಗಳು ವನಿತಾದಲ್ಲಿ ಇನ್ನೂ ಹೆಚ್ಚಾಗಿ ಮೂಡಿ ಬರಲೆಂದು ಆಶಿಸುವೆ. ಈ ಲೇಖನ ತುಂಬಾ ಮೆಚ್ಚಿಕೆಯಾಗಿದೆ.

'ಸುಲೋಚನ ಜಗದೀಶ'ರವರ 'ಸಂಚು' ಕಥೆ ಚೆನ್ನಾಗಿದೆ. ಇದರಲ್ಲಿ 'ತಾರಾ'ಳಿಗಾಗುವ ಅನ್ಯಾಯವನ್ನು ಓದಿ ಮರುಗುವಂತಾಯಿತು.

'ಗಣೇಶ ಚತುರ್ಥಿಯ ಪ್ರಯುಕ್ತ ವನಿತಾ ನೀಡಿದ ವಿಶೇಷ ಲೇಖನ ಸೊಗಸಾಗಿ ಮೂಡಿ ಬಂದಿದೆ.

"ಸಾಧನ" ಮತ್ತು "ಸಪ್ತಸ್ವರ" ಧಾರಾವಾಹಿಗಳು ತುಂಬಾ ಆಸಕ್ತಿ ಪೂರ್ಣವಾಗಿವೆ. ಮುಂದಿನ ತಿಂಗಳ ವನಿತಾಕ್ಕಾಗಿ ದಾರಿ ಕಾಯುವಂತಾಗಿದೆ.

'ಸಾಧನಾ' ಧಾರಾವಾಹಿಯು ಮುಂದಿನ ಸಂಚಿಕೆಗಾಗಿ ಕಾಯುವಂತೆ ಮಾಡುತ್ತದೆ.

**–ಕು। ಹೆಚ್. ಗೀತಾ ಮೂರ್ತಿ**
ತುಮಕೂರು




## ಚೀನಾ — ದಕ್ಷಿಣ ಕೊರಿಯ...

ಚೀನಾದ ರಾಜಧಾನಿ ಬೀಜಿಂಗ್‌ನಲ್ಲಿ ಇತ್ತೀಚೆಗೆ ಚೀನಾ ಮತ್ತು ದಕ್ಷಿಣ ಕೊರಿಯ ಸಹಿ ಹಾಕಿದ ಒಪ್ಪಂದದ ಮೇರೆಗೆ ಉಭಯ ರಾಷ್ಟ್ರಗಳು ಪೂರ್ಣ ರಾಜತಾಂತ್ರಿಕ ಸಂಬಂಧಗಳನ್ನು ಸ್ಥಾಪಿಸಲು ನಿರ್ಧರಿಸಿವೆ ಇದರೊಂದಿಗೆ ದ್ವಿತೀಯ ಪ್ರಪಂಚ ಯುದ್ಧದ ನಂತರ ಉಭಯ ರಾಷ್ಟ್ರಗಳ ನಡುವೆ ಬೆಳೆದಿದ್ದ ವಿರಸ ಕೊನೆಗೊಂಡಿದೆ. ಅಲ್ಲದೆ ಇದು ಮುಂಬರುವ ವರ್ಷಗಳಲ್ಲಿ ಪೂರ್ವ ಏಷ್ಯಾದಲ್ಲಷ್ಟೇ ಅಲ್ಲದೆ ಪ್ರಪಂಚದ ಇತರೆಡೆಗಳಲ್ಲಿ ರಾಜಕೀಯ ಸ್ಥಿರತೆಗೆ ಹಾದಿ ಮಾಡುವುದೆಂದು ರಾಜಕೀಯ ವಲಯಗಳಲ್ಲಿ ನಿರೀಕ್ಷೆ ವ್ಯಕ್ತವಾಗಿದೆ.

ಈ ಹಠಾತ್ ಬೆಳವಣಿಗೆಯಿಂದಾಗಿ ಆಶ್ಚರ್ಯ ಉಂಟಾಗಬಹುದಾದರೂ ತೆರೆಮರೆಯಲ್ಲಿ ಸಂಧಾನ ನಡೆದೇ ಇತ್ತು ಎಂಬುದು ಹೊರ ಪ್ರಪಂಚಕ್ಕೆ ತಿಳಿದಿಲ್ಲ. ಹೆಚ್ಚು ಕಡಿಮೆ ಕಳೆದ ಮೂರು ವರ್ಷಗಳಿಂದ ಉಭಯ ರಾಷ್ಟ್ರಗಳ ನಡುವೆ ಆರ್ಥಿಕ ಹಾಗೂ ವ್ಯಾಪಾರ ಸಂಬಂಧಗಳು ಸುಧಾರಿತವಾಗಿವೆ. ಎರಡೂ ರಾಷ್ಟ್ರಗಳ ನಡುವೆ ಸಣ್ಣದಾಗಿ ಪ್ರಾರಂಭವಾದ ವ್ಯಾಪಾರ ಈಗ 3 ಬಿಲಿಯನ್ ಡಾಲರ್‌ಗಳನ್ನು ಮೀರಿದೆ.

ಬಹಳ ವರ್ಷಗಳ ಕಾಲ ಚೀನಾ ಉತ್ತರ ಕೊರಿಯಾವನ್ನು ಪ್ರಬಲವಾಗಿ ಬೆಂಬಲಿಸುತ್ತಿತ್ತು. ಈಗ ಬೃಹತ್ ರಾಷ್ಟ್ರಗಳ ನಡುವಣ ಶೀತಲ ಸಮರ ಕೊನೆಗೊಂಡಿದ್ದು, ಸೋವಿಯತ್ ಒಕ್ಕೂಟದ ವಿಸರ್ಜನೆ ಹಾಗೂ ಒಂದು ಪರಿಣಾಮಕಾರೀ ರಾಜಕೀಯ ತತ್ವವಾಗಿ ಕಮ್ಯೂನಿಸಂನ ಅವಸಾನ ಚೀನೀ ಮುಖಂಡರು ತಮ್ಮ ರಾಜಕೀಯ ವಿಚಾರಗಳ ಬಗೆಗೆ ಮರುಚಿಂತನೆ ಮಾಡುವಂತೆ ಮಾಡಿವೆ. ಅಲ್ಲದೆ ಈ ಬೆಳವಣಿಗೆಯಿಂದಾಗಿ ಬೃಹತ್ ರಾಷ್ಟ್ರಗಳ ರಕ್ಷಣೆಯಲ್ಲಿದ್ದ ಅಥವಾ ಅವುಗಳ ಪ್ರಭಾವ ವಲಯಗಳಲ್ಲಿದ್ದ ರಾಷ್ಟ್ರಗಳು ತಮ್ಮ ನೆರೆಯ ರಾಷ್ಟ್ರಗಳೊಡನೆ ಸಂಬಂಧಗಳ ಬಗೆಗೆ ಪುನರ್ವಿಮರ್ಶಿಸುವ ಅಗತ್ಯ ಉಂಟಾಗಿದೆ. ಅದರ ಫಲಶ್ರುತಿಯೇ ಈಗ ಚೀನಾ ಮತ್ತು ದಕ್ಷಿಣ ಕೊರಿಯ ನಡುವಣ ಸಂಬಂಧಗಳ ಸುಧಾರಣೆ.

ದಕ್ಷಿಣ ಕೊರಿಯ ಮತ್ತು ತೈವಾನ್ ಎರಡೂ ಇದುವರೆಗೆ ಚೀನಾದ ಶತ್ರು ರಾಷ್ಟ್ರಗಳಾಗಿದ್ದುವು. ತೈವಾನ್ ಒಂದು ಸ್ವತಂತ್ರ ರಾಷ್ಟ್ರ. ಆದರೆ ಅದು ತನಗೆ ಸೇರಿದ ಭಾಗವೆಂದು ಚೀನಾ ಹೇಳುತ್ತ ಬಂದಿದೆ. ವಿಪರ್ಯಾಸವೆಂದರೆ ಚೀನಾ ಈಗಾಗಲೇ ತೈವಾನ್‌ನೊಂದಿಗೆ ಸ್ನೇಹ ಬೆಳೆಸಲು ಪ್ರಯತ್ನಿಸಿತ್ತು. ಆದುದರಿಂದ ಈಗ ದಕ್ಷಿಣ ಕೊರಿಯದೊಂದಿಗೆ ಸಂಬಂಧಗಳನ್ನು ಸುಧಾರಿಸಲು ಚೀನಾದ ನಿರ್ಧಾರವು ಕೇವಲ ಆರ್ಥಿಕ ಅಭಿವೃದ್ಧಿಗಷ್ಟೇ ಅಲ್ಲದೆ ಏಷ್ಯಾದ ಪ್ರಮುಖ ಮುಖಂಡನಾಗಿ ತನ್ನ ಪಾತ್ರವನ್ನು ನಿರ್ವಹಿಸುವ ಪ್ರಯತ್ನವೂ ಆಗಿದೆ.

## ಬ್ರಿಟನ್ನಿನಲ್ಲಿ....

ಸೂರ್ಯ ಮುಳುಗದ ರಾಷ್ಟ್ರ ಎಂದು ಕೊಚ್ಚಿಕೊಳ್ಳುತ್ತಿದ್ದ ಬ್ರಿಟನ್ನಿನಲ್ಲಿ ಇತ್ತೀಚಿನ ವಿದ್ಯಮಾನಗಳು ಆ ರಾಷ್ಟ್ರದ ರಾಜಕೀಯ ವ್ಯವಸ್ಥೆಯ ಮೇಲೆ ತೀವ್ರ ಪರಿಣಾಮ ಉಂಟು ಮಾಡುವ ಸಾಧ್ಯತೆಯಿದೆ. ಆನುವಂಶಿಕವಾಗಿ ರಾಜ ಮನೆತನದ ಮೇಲೆ ನಿಷ್ಠೆಯನ್ನುಳಿಸಿಕೊಂಡೂ ಪ್ರಜಾತಂತ್ರಾತ್ಮಕ ವ್ಯವಸ್ಥೆಯನ್ನು ಅಪ್ಪಿಕೊಂಡಿರುವ ಪುರಾತನ ಪಾರ್ಲಿಮೆಂಟರಿ ಪ್ರಭುತ್ವ ಬ್ರಿಟನ್. ಈಚೆಗೆ ರಾಜ ಕುಟುಂಬದ ವ್ಯವಹಾರಗಳು ರಾಜ ಮನೆತನದ ಮರ್ಯಾದೆಯನ್ನು ಹರಾಜಿಗೆ ಹಾಕುತ್ತಿವೆ. ಇಂಗ್ಲೆಂಡಿನ ಮುಂದಿನ ರಾಣಿ ಡಯಾನ ಹಾಗೂ ರಾಜಕುಮಾರ ಚಾರ್ಲ್ಸ್ ನಡುವಣ ವಿರಸ ಈಗ ವಿಚ್ಛೇದನ ಕೋರುವ ಮಟ್ಟಕ್ಕೆ ಮುಟ್ಟಿದೆ. ಜತೆಗೆ ಎರಡು ಮಕ್ಕಳ ತಾಯಿ ಡಯಾನ ತನ್ನ ಇನ್ನೊಬ್ಬ ಪ್ರಿಯಕರನೊಂದಿಗೆ ನಡೆಸಿದರೆಂದು ಹೇಳಲಾದ ಪ್ರೇಮ ಸಲ್ಲಾಪದ ಧ್ವನಿಮುದ್ರಿತ ಟೇಪ್ ಬಹಿರಂಗವಾಗಿದೆ. ಅದೂ ಅಲ್ಲದೆ ಚಾರ್ಲ್ಸ್‌ನ ತಮ್ಮ ರಾಜಕುಮಾರ ಆಂಡ್ರ್ಯೂನ ಪತ್ನಿ ಸಾರಾ ಅಮೆರಿಕದ ಉದ್ಯಮಿ ಮುಖ್ಯನೊಡನೆ ಸರಸವಾಡುತ್ತಿದ್ದ ಚಿತ್ರವೊಂದು ಪತ್ರಿಕೆಗಳಲ್ಲಿ ಪ್ರಕಟವಾಗಿ ಕೋಲಾಹಲ ಉಂಟು ಮಾಡಿದೆ. ಬ್ರಿಟನ್ನಿನ ರಾಣಿಯ ಒಬ್ಬ ಸೊಸೆ ಪರಪುರುಷನೊಬ್ಬನನ್ನು ಪ್ರೇಮಿಸಿದ್ದರೆ ಮತ್ತೊಬ್ಬ ಸೊಸೆ ಪರಪುರುಷನಿಗೆ ದೇಹವನ್ನೇ ಅರ್ಪಿಸಿರುವ ಸಂಗತಿ ಮತ್ತಷ್ಟು ಕೋಲಾಹಲ ಎಬ್ಬಿಸಿದೆ.

ಬಕಿಂಗ್ ಹ್ಯಾಮ್ ಅರಮನೆಯಲ್ಲಿನ ಖಾಸಗೀ ಬದುಕನ್ನು ಬ್ರಿಟಿಷ್ ಪ್ರಜೆಗಳು ತಲೆ ತಲಾಂತರದಿಂದ ಗೌರವಿಸುತ್ತಾ ಬಂದಿದ್ದಾರೆ. ಆದರೆ ರಾಜಕುಟುಂಬದ ಇತ್ತೀಚಿನ ಈ ಬೆಳವಣಿಗೆಯು ರಾಜಮನೆತನದಲ್ಲಿ ನಿಷ್ಠೆ ಹಾಗೂ ಅಭಿಮಾನವನ್ನು ವ್ಯಕ್ತಪಡಿಸುತ್ತಾ ಬಂದಿರುವವರಿಗೆ ಆಘಾತ ಉಂಟು ಮಾಡಿದೆ. ಬ್ರಿಟಿಷ್ ಅರಸೊತ್ತಿಗೆಯ ಮಾನ ಹಿಂದೆಂದೂ ಇಷ್ಟರ ಮಟ್ಟಿಗೆ ಬಹಿರಂಗವಾಗಿ ಹರಾಜಾಗಿರಲಿಲ್ಲ. ಇದು ಪ್ರಾಯಶಃ ಬ್ರಿಟನ್ನಿನಲ್ಲಿ ರಾಜ ವ್ಯವಸ್ಥೆಯ ಅಂತ್ಯಕ್ಕೆ ಹಾದಿ ಮಾಡುವುದೇನೋ ಎಂಬ ಆತಂಕವನ್ನು ಉಂಟು ಮಾಡಿದೆ. ಮುಂದಿನ ಬೆಳವಣಿಗೆಗಳನ್ನು ಪ್ರಪಂಚ ಕುತೂಹಲದಿಂದ ಎದುರು ನೋಡುತ್ತಿದೆ.




ನೀನೇ ಹೇಳಿದ್ಯಲ್ಲೇ.....
ಸೀಮೆ ಎಣ್ಣೆ ಹಾಕಲಿಕ್ಕೆ ಒಂದು
ಬಾಟ್ಲ ತನ್ನೀಂತ!

## ಅಲಿಪ್ತ ಶೃಂಗ ಸಭೆಯಲ್ಲಿ ಅಪಸ್ವರ

ಇಂಡೋನೇಸಿಯಾದ ರಾಜಧಾನಿ ಜಕಾರ್ತದಲ್ಲಿ ನಡೆದ 10ನೆಯ ಅಲಿಪ್ತ ರಾಷ್ಟ್ರಗಳ ಶೃಂಗ ಸಮಾವೇಶ ಅಲಿಪ್ತ ಆಂದೋಲನವನ್ನು ಮತ್ತಷ್ಟು ಬಲಪಡಿಸಲು ವಿಶ್ವಸಂಸ್ಥೆಯನ್ನು ಪರಿಣಾಮಕಾರೀ ಉಪಕರಣವಾಗಿ ಬಳಸಿಕೊಳ್ಳಬೇಕೆಂಬ ಕರೆಯೊಂದಿಗೆ ಮುಕ್ತಾಯಗೊಂಡಿದೆ. ಈ ದಿಶೆಯಲ್ಲಿ ಕಾರ್ಯೋನ್ಮುಖವಾಗಲು ಉನ್ನತ ಮಟ್ಟದ ಅಲಿಪ್ತ ಚಳವಳಿಯ ಕಾರ್ಯ ತಂಡವೊಂದನ್ನು ಸ್ಥಾಪಿಸುವುದಾಗಿ ಪ್ರಕಟಿಸಲಾಗಿದೆ.

ಬೊಸ್ನಿಯಾ ಸಮಸ್ಯೆ, ಇರಾಕ್ ಬಿಕ್ಕಟ್ಟು ಮುಂತಾದ ಹಲವು ಕಿರಿಕಿರಿ ಉಂಟು ಮಾಡುವ ಪ್ರಶ್ನೆಗಳು ಸಮಾವೇಶವನ್ನು ಕಾಡಿದುವಾದರೂ ಭಾರತಕ್ಕೆ ಅತ್ಯಂತ ಬೇಸರ ಉಂಟು ಮಾಡುವ ಒಂದು ಸಂಗತಿ ಎಂದರೆ ಪಾಕಿಸ್ತಾನದ ಪ್ರಧಾನಿ ನವಾಜ್ ಷರೀಫ್ ಅವರು ಈ ವೇದಿಕೆಯಲ್ಲಿ ಕಾಶ್ಮೀರ ಪ್ರಶ್ನೆಯನ್ನು ಪ್ರಸ್ತಾಪಿಸಿದ್ದು. ದ್ವಿಪಕ್ಷೀಯ ಸಮಸ್ಯೆಗಳನ್ನು ಅಂತರರಾಷ್ಟ್ರೀಯ ವೇದಿಕೆಗಳಲ್ಲಿ ಪ್ರಸ್ತಾಪಿಸಬಾರದು ಎಂದು ಒಂದು ಅಲಿಖಿತ ಸಂಹಿತೆಯೇ ಇದೆ. ಜತೆಗೆ ಈ ಸಾರಿಯ ಅಲಿಪ್ತ ಶೃಂಗಸಮಾವೇಶದ ಅಧ್ಯಕ್ಷ ರಾಷ್ಟ್ರವಾದ ಇಂಡೋನೇಷ್ಯಾ ಈ ಬಗೆಗೆ ಸ್ಪಷ್ಟವಾಗಿ ನಿರ್ದೇಶ ನೀಡಿದ್ದರೂ ಪಾಕಿಸ್ತಾನ ತನ್ನ ಉದ್ಧಟತನವನ್ನು ಪ್ರದರ್ಶಿಸಿದೆ. ಅವಕಾಶ ಸಿಕ್ಕಾಗಲೆಲ್ಲ ಕಾರಣವಿರಲಿ, ಇಲ್ಲದಿರಲಿ ಕಾಲು ಕೆರೆದುಕೊಂಡು ಜಗಳಕ್ಕೆ ಬರುವುದು ಪಾಕಿಸ್ತಾನದ ಜಾಯಮಾನ. ಇತ್ತೀಚೆಗೆ ತನಗೆ ಸಂಬಂಧವಿಲ್ಲದ ರಾಮ ಜನ್ಮ ಭೂಮಿ–ಬಾಬ್ರಿ ಮಸೀದಿವಿಷಯದಲ್ಲಿ ಮೂಗು ತೂರಿಸಿ ಅವಹೇಳನಕ್ಕೆ ಗುರಿಯಾಯಿತು. ಭಾರತೀಯ ಮುಸ್ಲಿಮರು ಪಾಕಿಸ್ತಾನಕ್ಕೆ ಸರಿಯಾದ ಜವಾಬು ನೀಡಿ ಮುಖಭಂಗ ಮಾಡಿದ್ದಾರೆ. ಈ ಎಲ್ಲ ಸಂಗತಿಗಳಿಂದಾಗಿ ಶೃಂಗ ಸಮಾವೇಶದಲ್ಲಿ ಭಾರತ–ಪಾಕಿಸ್ತಾನ ನಡುವೆ ತಿಕ್ಕಾಟ ಏರ್ಪಡುವ ಸಂಭವವಿತ್ತು. ಆದರೆ ಪ್ರಧಾನಿ ನರಸಿಂಹರಾಯರ ಮುತ್ಸದ್ದಿತನದಿಂದಾಗಿ ಅಂಥ ಘರ್ಷಣೆ ತಪ್ಪಿದ್ದಲ್ಲದೆ ಉಭಯ ರಾಷ್ಟ್ರಗಳ ಮುಖಂಡರೂ ತಮ್ಮ ದ್ವಿಪಕ್ಷೀಯ ಸಮಸ್ಯೆಗಳ ಬಗೆಗೆ ಸ್ನೇಹಯುತ ವಾತಾವರಣದಲ್ಲಿ ಚರ್ಚಿಸಿದರು. ಏನಾದರೂ ಅದು ಪಾಕಿಸ್ತಾನ ಸೆರಗಿನಲ್ಲಿ ಕಟ್ಟಿಕೊಂಡ ಕೆಂಡವೇ!

ಕಾಂಡೊಮ್-ಏ ಬೇಕು ಎಂದು ಆಕೆ ಹಟ ಹಿಡಿದರೆ ?

ಆಗ ತಿಳ್ಕೋಬೇಕು. ಅವಳು ಜೋರಿನ ಹೆಂಗಸು ಹಾಗೂ ತನ್ನ ಗಂಡನ ಬಗ್ಗೆ ಅಲಕ್ಷ್ಯ ಮಾಡೋಳು ಅಂತ.

ಮತ್ತೆ ಆಕೆ, ತನ್ನ ಗಂಡ ಸಂತಾನಹರಣ ಶಸ್ತ್ರ ಚಿಕಿತ್ಸೆ ಮಾಡಿಸ್ಕೊ ಬೇಕು ಅಂತ ಪಟ್ಟು ಹಿಡಿದರೆ ?

ಮತ್ತೆ ಅದೇ ಮಾತು ಅನ್ವಯಿಸುತ್ತದೆ.

ಒಂದೊಮ್ಮೆ ಆಕೆ ಲೂಪ್ ಅಥವಾ ಕಾಪ್ಪರ್ ಟಿ ಅಯ್ದುಕೊಂಡರೆ ?

ಹಾಗಿದ್ರೆ ಆಕೆ ಭಾಳ ಒಳ್ಳೆಯವ್ಳು, ತ್ಯಾಗಮೂರ್ತಿ.

ಒಂದೊಮ್ಮೆ ಆಕೆ ಮಾತ್ರೆ ತೆಗೆದುಕೊಂಡ್ರೆ ?

ತಪ್ಪೇನಿಲ್ಲ, ಆಕೆ ಆಶಾವಾದಿ.

# "ಸ್ತ್ರೀ ಬಳಸುವ ಗರ್ಭನಿರೋಧಕ ಸಾಧನವೇ ಆಧಾರ ಆಗುವುದು ತಿಳಿಯಲಾಕೆಯ ವ್ಯಕ್ತಿತ್ವ ವಿಚಾರ!"

ಹ್ಞಾ, ಹ್ಞಾ, ಇನ್ನು, ಒಂದೊಮ್ಮೆ ಆಕೆ 'ಟುಡೇ' ಗೆ ಒಲಿದಿದ್ದರೆ ?

ಆಕೆ ಆಧುನಿಕ, ಜಾಣ ಮಹಿಳೆ. ಸ್ವಾಭಿಮಾನವುಳ್ಳ ಆಕೆಗೆ ಪತಿಯ ಆವಶ್ಯಕತೆಗಳ ಮೇಲೆ ಆದ್ಯ ಗಮನವಿರುತ್ತೆ.

ನೀವು ಮನೋವಿಜ್ಞಾನಿಯೋ ಅಂತ ನನ್ನ ಗುಮಾನಿ.

ಹಾಗೇನಿಲ್ಲ, ನಾನು ಕೇವಲ ಆಧುನಿಕ, ಜಾಣ ಹೆಂಗಸು, ಅಷ್ಟೆ ಸ್ವಾಭಿಮಾನಿಯೂ ಹೌದು.

ಅಂತೆಯೇ ನನ್ನ ಪತಿಯ ಆವಶ್ಯಕತೆಗಳಿಗೆ ಆದ್ಯ ಗಮನ ನೀಡ್ತೀನಿ.

ಈಗ ಗೊತ್ತಾಯ್ತು .. ನೀವು 'ಟುಡೇ' ಯನ್ನ ಬಳಸ್ತೀರಿ. ಸರಿ ತಾನೆ ?

ನಿಮ್ಮದು ಬಲು ಚೆನ್ನಾದ ಊಹೆ !

ಧನ್ಯವಾದ. ಈಗ ಹೇಳಿ. ಅದು ಹೇಗೆ ಕೆಲಸ ಮಾಡುತ್ತೆ ?

ವಿಷಯ ತುಂಬ ಸರಳ. ಅದೊಂದು ಸಣ್ಣ ಟಾಬ್ಲ್ಯೂಲ್.

ನಿಮಗೆ ಸುರಕ್ಷಿತತೆ ಬೇಕೆನಿಸಿದಾಗ, ಇದನ್ನು ನಿಮ್ಮ ಶರೀರದೊಳಗೆ ತೂರಿಸಿ ಬಿಡಿ.

ಅಷ್ಟೇನಾ ?

ಅಷ್ಟೆ, ಇದು ಭಾಳ ಸುಲಭ ಹಾಗೂ ಸಂಪೂರ್ಣ ಏಕಾಂತದಲ್ಲಿ ಈ ಕೆಲಸ ಆಗುತ್ತೆ.

ಈ ಸಾಧನ ಅದೆಷ್ಟು ಪರಿಣಾಮಕಾರಿ ?

99% ಕ್ಕಿಂತಲೂ ಹೆಚ್ಚು ಪರಿಣಾಮಕಾರಿ ಎಂದು ಅಂತರರಾಷ್ಟ್ರೀಯವಾಗಿ ಪ್ರಮಾಣೀಕರಿಸಲ್ಪಟ್ಟಿದೆ. ಐದ್ಹತ್ತು ನಿಮಿಷದಲ್ಲಿ ಅದು ಪೂರ್ತಿ ಕರಗಿ ತನ್ನ ಪ್ರಭಾವೀ ವೀರ್ಯಾಣುನಾಶಕ ಕ್ರಿಯೆಗೆ ತೊಡಗುತ್ತೆ. ತನ್ನ ಇರುವಿಕೆಯ ಬಗ್ಗೆ ಯಾವುದೇ ಸುಳುಹುಕೊಡದೆ, ತನ್ನ ಕೆಲಸ ಮುಗಿಸಿದ ಬಳಿಕ, ತನ್ನಿಂದತಾನೇ ಅದು ಶರೀರದಿಂದ ಹೊರ ಹೋಗುತ್ತೆ.

ವ್ಹಾ! ಏನು ಅದ್ಭುತ ಅಂತೀನಿ. ಇರ್ಲಿ. ಅದಕ್ಕೇನಾದ್ರೂ ಸೈಡ್ ಇಫೆಕ್ಟ್ಸ್ ಇದೆಯೇ ?

ಊ್ಞ... ಕೇವಲ ಒಂದು.

ಓಹ್ದೇವ್ರೆ, ಏನದು ?

ಮೊಗದಲ್ಲಿ ನಿರಂತರ ನಗುವಿನ ಸಂಭ್ರಮ.

ಹ್ಞಾ... ಅದನ್ನ ನಾನು ನೋಡ್ತಿದ್ದೀನಲ್ಲ !




ಸಂತಾನ ನಿಯಂತ್ರಣದ ಕುರಿತಾದ ಕಿರುಪುಸ್ತಿಕೆಯ ಉಚಿತ ಪ್ರತಿಗಾಗಿ, ನಿಮ್ಮ ವಿಳಾಸವುಳ್ಳ, ಅಂಚೆಚೀಟಿ ಹತ್ತಿಸಿದ ಲಕೋಟೆಯನ್ನು ಕೆಳಗಿನ ವಿಳಾಸಕ್ಕೆ ಕಳಿಸಿರಿ:
ಬ್ಲಿಸ್ ಕೆಮಿಕಲ್ಸ್ &
ಫಾರ್ಮಸ್ಯುಟಿಕಲ್ಸ್
ಇಂಡಿಯಾ ಲಿಮಿಟೆಡ್,
ಸ್ಕೈ ಪಾಕ್ ಹೌಸ್
ಅನೆಕ್ಸ್, ಮರೋಳ್,
ಅಂಧೇರಿ (ಪೂ),
ಮುಂಬಯಿ 400 059.

ಟುಡೇ ನಾರಿಯ ತನ್ನ ಸ್ವಂತದ ಗರ್ಭ ನಿರೋಧಕ.

# ಸುಂದರ ಸೊಬಗಿನ ಇಂದ್ರಾಣಿ (ಇಂದ್ರಾಳಿ) ಕ್ಷೇತ್ರ

—ಬಿ. ಗೀತಾ ನಾಯಕ್ ಅತ್ರಾಡಿ



ಶ್ರೀ ಇಂದ್ರಾಣಿ ದೇವಿ

ವಿಶಾಲ ಭಾರತದ ಉದ್ದಗಲಗಳನ್ನು ವ್ಯಾಪಿಸಿ ನಿಂತಿರುವ ನೂರಾರು ದೇವಿಪೀಠಗಳು ಶಕ್ತಿ ದೇವತೆಗಳ ಭವ್ಯ ಪರಂಪರೆಯನ್ನು ಅನಾದಿ ಕಾಲದಿಂದಲೂ ಸಾರುತ್ತಾ ಬಂದಿವೆ. ಇಂತಹವುಗಳಲ್ಲಿ ಇಂದ್ರಾಣೀ ಕ್ಷೇತ್ರವೂ ಒಂದು. "ಇಂದ್ರಾಳಿ" ಯೆಂದೇ ಜನರಿಂದ ಕರೆಯಲ್ಪಡುವ ಇಂದ್ರಾಣಿ ಕ್ಷೇತ್ರವು ಭಾರತದ ಪ್ರಸಿದ್ಧ ಪುಣ್ಯಕ್ಷೇತ್ರಗಳಲ್ಲೊಂದಾದ ಉಡುಪಿ, ಶೈಕ್ಷಣಿಕ ಹಾಗೂ ವಾಣಿಜ್ಯೋದ್ಯಮ ಕೇಂದ್ರವಾಗಿ ಜಗತ್ಪ್ರಸಿದ್ಧವಾಗಿರುವ ಮಣಿಪಾಲ ಇವೆರಡರ ನಡುವೆ ನಯನ ಮನೋಹರವಾಗಿ ಕಂಗೊಳಿಸುತ್ತಿರುವ ಅತಿ ಪುರಾತನ ಹಾಗೂ ಪಾವನ ಕ್ಷೇತ್ರವಾಗಿದೆ. ಉಡುಪಿ-ಕಾರ್ಕಳ ಹೆದ್ದಾರಿಯಲ್ಲಿ ಉಡುಪಿ–ಮಣಿಪಾಲ ನಡುವೆ ಈ ಕ್ಷೇತ್ರಕ್ಕೆ ಹೋಗಲು ದಾರಿಯೊಂದು. ದೂರ ನಡೆದ ನಂತರ ದೇವಾಲಯದ ಪ್ರವೇಶ ದ್ವಾರದ ವರೆಗೆ ಇರುವ ಹತ್ತಾರು ಮೆಟ್ಟಲುಗಳನ್ನು ಏರಿ ಒಂದರೆಕ್ಷಣ ಹಿಂತಿರುಗಿ ಸುತ್ತಲೂ ನಮ್ಮ ದೃಷ್ಟಿಯನ್ನು ಹಾಯಿಸಿದಾಗ ನಮಗಾಗುವ ಅನುಭವ ಅವರ್ಣನೀಯ ! ಒಂದೆಡೆ ಸೂರ್ಯನಿಗೆ ಪ್ರವೇಶವಿಲ್ಲದಂತೆ ಹಬ್ಬಿಕೊಂಡಿರುವ ದಟ್ಟವಾದ ಕಾನನ, ಇನ್ನೊಂದೆಡೆ ಹಚ್ಚಹಸುರಿನ ಸುಂದರ ಸಸ್ಯಶ್ಯಾಮಲೆ, ಮಗದೊಂದೆಡೆ ಆಧುನೀಕತೆಯ ಕುರುಹಾಗಿ ಎದ್ದು ನಿಂತಿರುವ ಬೃಹತ್ ತಾರಸಿ ಮನೆಗಳು–ಇಂತಹ ರಮ್ಯ ಪ್ರಕೃತಿಯ ಮಡಿಲಲ್ಲಿ, ಪ್ರಶಾಂತ ಪರಿಸರದಲ್ಲಿ ತಲೆ ಎತ್ತಿ ನಿಂತಿರುವ ಪುರಾತನ ದೇವಾಲಯ–ಒಟ್ಟಿನಲ್ಲಿ ಒಂದು ಕ್ಷಣ ನಿಂತಲ್ಲಿ ಮೈ ಮರೆಸುವ ರಮಣೀಯ ನೋಟ ! ಪುರಾಣಗಳಲ್ಲಿ ವೇದಾಚಲ, ವೇದಾದ್ರಿ, ವೇದಗಿರಿ ಮುಂತಾದ ಹೆಸರುಗಳಿಂದ ಕರೆಯಲ್ಪಡುತ್ತಿದ್ದ ಇಂದ್ರಾಳಿಯು ಒಂದು ಪವಿತ್ರ ತಪೋಭೂಮಿ ಎನ್ನುವುದನ್ನು ಇಲ್ಲಿನ ಪ್ರಶಾಂತ ಪರಿಸರವೇ ಸಾರುತ್ತದೆ ಮಾತ್ರವಲ್ಲ ಇಲ್ಲಿನ ಇತಿಹಾಸವೂ ಇದನ್ನೇ ಶ್ರುತಿಪಡಿಸುತ್ತದೆ.

ಅನಾರೋಗ್ಯದಿಂದ ಚ್ಯವನ ಮಹರ್ಷಿಗಳು ತಮ್ಮ ರೋಗ ನಿವಾರಣೆಗಾಗಿ ತಪೋನಿರತರಾಗಿದ್ದು, ಶ್ರೀಮನ್ನಾರಾಯಣನು ಪ್ರತ್ಯಕ್ಷವಾಗಿ ಚ್ಯವನ ಮಹರ್ಷಿಗಳನ್ನು ರೋಗಮುಕ್ತರನ್ನಾಗಿ ಮಾಡಿ ಅನುಗ್ರಹಿಸಿದ್ದು ಇಂದ್ರಾಣಿ ಕ್ಷೇತ್ರದಲ್ಲಿಯೇ ಎನ್ನುವ ಪ್ರತೀತಿ ಇದೆ.

## ಸ್ಥಳ ಪುರಾಣ

ಸ್ವರ್ಗಲೋಕದ ಅಧಿಪತಿಯಾದ ದೇವೇಂದ್ರನು ಒಂದು ದಿನ ತನ್ನ ಪತ್ನಿ ಶಚೀದೇವಿಯೊಡನೆ ಸಿಂಹಾಸನಾ-ರೂಢನಾಗಿದ್ದಾಗ ಊರ್ವಶಿ, ಮೇನಕೆ, ರಂಭೆ ಮೊದಲಾದ ಅಪ್ಸರೆಯರು ನೃತ್ಯವನ್ನು ಪ್ರಾರಂಭಿಸಿದ್ದರು. ಅವರಲ್ಲಿ ಊರ್ವಶಿಯು ಕಿರುನಗೆಯಿಂದ ಕೂಡಿದ ಕಣ್ಣೋಟದಿಂದ ಪುರುಷರನ್ನೆಲ್ಲಾ ಮೋಹಗೊಳಿಸುತ್ತಾ ನರ್ತಿಸುತ್ತಿದ್ದಳು. ಆಗ ದೇವೇಂದ್ರನು ಶಚೀದೇವಿಯ ಸಮೀಪದಲ್ಲಿ ಕುಳಿತಿದ್ದರೂ ಊರ್ವಶಿಯ ವಿಲಾಸಕ್ಕೆ ಸೋತು ಮನಸ್ಸಿನಲ್ಲಿಯೇ ಮೋಹಗೊಂಡನು. ಊರ್ವಶಿಯ ತನ್ನ ಗಂಡನನ್ನು ಮೋಸಗೊಳಿಸುತ್ತಿರುವುದನ್ನೂ, ದೇವೇಂದ್ರನು ಆಕೆಯ ವಶವಾಗುತ್ತಿರುವುದನ್ನೂ ಪತಿವ್ರತೆಯಾದ ಶಚೀದೇವಿಯು ಕಂಡು, ಸಿಟ್ಟಿನಿಂದ ಮುಖ ಕೆಂಪೇರಿ, ಊರ್ವಶಿಯ ದರ್ಪವನ್ನು ಕಳೆಯುವುದಕ್ಕೂ, ತನ್ನ ಪ್ರೀತಿಯನ್ನು ಬೆಳೆಸುವುದಕ್ಕೂ ಲಕ್ಷ್ಮೀದೇವಿಯಿಂದೊಡಗೂಡಿದ ಆ ನಾರಾಯಣನನ್ನು ತಪಸ್ಸಿನಿಂದ ಪೂಜಿಸುವೆನೆಂದು ನಿಶ್ಚಯಿಸಿ, ದೇವೇಂದ್ರನ ಸಭೆಯಿಂದ ಹೊರಟು ಭರತಖಂಡಕ್ಕಿಳಿದು ಅಲ್ಲಿ ಪುಣ್ಯ ಕ್ಷೇತ್ರಗಳಲ್ಲಿ ತನ್ನ ಮನಸ್ಸಿಗೆ ಯಾವುದುತ್ತಮವು ? ಭೂಮಿಯಲ್ಲಿ ಎಲ್ಲಿ ಬೇಗನೇ ಹರಿಯು ಪ್ರಸನ್ನನಾದಾನೆಂದು ವಿಚಾರ ಮಾಡತೊಡಗಿದಳು. ಇದೇ ಸಮಯಕ್ಕೆ ನಾರದ ಮಹರ್ಷಿಗಳು ಅಲ್ಲಿಗೆ ಆಗಮಿಸಿದರು.



ಶ್ರೀ ಇಂದ್ರಾಣಿ ಪಂಚದುರ್ಗಾ ಪರಮೇಶ್ವರಿ ದೇವಾಲಯ

ಶಚೀದೇವಿಯು ನಾರದರಿಗೆ ನಮಿಸಿ ತನ್ನ ಮನಸ್ಸಿನ ಚಿಂತೆಯನ್ನು ಅರುಹಿದಳು. ಆಕೆಯ ಚಿಂತೆಯನ್ನು ಆಲಿಸಿದ ನಾರದರು "ದೇವೀ, ಪರಶುರಾಮ ಕ್ಷೇತ್ರದಲ್ಲಿ ಸಹ್ಯ ಪರ್ವತದ ಪಡುದಿಕ್ಕಿನಲ್ಲಿ ವೇದಾಚಲದ ಶಿಖರದ ಪಡುಭಾಗದ ತಪ್ಪಲಲ್ಲಿ ಪುಣ್ಯ ವೃಕ್ಷಗಳುಳ್ಳ ಚ್ಯವನ ಮಹರ್ಷಿಯ ಆಶ್ರಮವಿದೆ. ಅದು ತಪಸ್ಸುಗಳಿಗೆ ಕ್ಷಿಪ್ರಸಿದ್ಧಿಕರವು. ಅಲ್ಲಿ 'ವೇದ ಸರಸ್ಸು'



ದೇವಾಲಯದ ಪ್ರವೇಶ ದ್ವಾರ

ಎಂಬ ಲೋಕ ಪವಿತ್ರವಾದ ಪುಣ್ಯತೀರ್ಥವಿದೆ. ಅಲ್ಲಿ ಸ್ನಾನಮಾಡಿದರೆಂದರೆ ತಮ್ಮ ಇಷ್ಟಾರ್ಥವನ್ನೇ ಹೊಂದುವ ನೀನು ಅಲ್ಲಿಗೆ ಹೋಗಿ ಆ ತೀರ್ಥದಲ್ಲಿ ಮಿಂದು ಪಂಚರೂಪವನ್ನು ಹೊತ್ತ ಲಕ್ಷ್ಮಿಯಿಂದೊಡಗೂಡಿದ ನಾರಾಯಣಾದಿ ಐದು ರೂಪವನ್ನು ಧರಿಸಿದ ಭಕ್ತವತ್ಸಲನನ್ನು ಭಜಿಸು. ನಿನ್ನ ಇಚ್ಛೆ ನೆರವೇರುವುದು" ಎಂದು ಹೇಳಿ ಶ್ರೀಮನ್ನಾರಾಯಣನನ್ನು, ಧ್ಯಾನಿಸುತ್ತಾ ಇಂದ್ರಲೋಕಕ್ಕೆ ತೆರಳಿದನು. ಆಮೇಲೆ ಶಚೀದೇವಿಯು ನಾರದರ ಮಾತು ಕೇಳಿ, ಬೇಗನೇ ಚ್ಯವನಾಶ್ರಮವಿರುವ ವೇದಾಚಲಕ್ಕೆ ಹೋದಳು. ಅಲ್ಲಿನ ಮಹತ್ವಾದ ಅರಣ್ಯವನ್ನು ಕಂಡು, ಸಂಚರಿಸುತ್ತಾ ಪಡುದಿಕ್ಕಿನಲ್ಲಿ ಚ್ಯವನಾಶ್ರಮವನ್ನೂ, ವೇದಮಯವಾದ ಉದಕದಿಂದ ಕೂಡಿದ ವೇದಸರೋವರವನ್ನೂ ಕಂಡು ಮನಸ್ಸಿನಲ್ಲಿಯೇ ಸಂತಸಗೊಂಡಳು.

ಆ ಮೇಲೆ ಲಕ್ಷ್ಮೀದೇವಿಯಿಂದೊಡಗೂಡಿದ ಶ್ರೀಮನ್ನಾರಾಯಣನನ್ನು ಕಂಡು, ವರುಣಮಂತ್ರವನ್ನು ಜಪಿಸಿ, ಆ ತೀರ್ಥದಲ್ಲಿ ಮಿಂದು, ಪತಿವ್ರತೆಯು ಸವತಿಯ ಬುದ್ಧಿಯನ್ನೇ ಮೋಹಗೊಳಿಸುವ ಈ ಮಂತ್ರವನ್ನು ಜಪಿಸಿದಳು. "ಸವತಿಯನ್ನು ಪರಾಜಯಗೊಳಿಸು. ನನ್ನ ಪತಿಯು ನನ್ನಲ್ಲಿ ಮಾತ್ರವೇ ಸ್ನೇಹವುಳ್ಳವನಾಗುವಂತೆ ಮಾಡು" ಎಂಬ ಈ ವೇದಮಂತ್ರ ಶ್ರೇಷ್ಠವನ್ನು ಜಪಿಸುತ್ತಾ ಶಚೀದೇವಿಯು ಐದು ವರ್ಷಗಳಲ್ಲಿ ಲಕ್ಷ್ಮೀ ಸಮೇತನಾದ ಶ್ರೀ ವಿಷ್ಣುವನ್ನು ಭಕ್ತಿಯಿಂದ ಪೂಜಿಸುತ್ತಿದ್ದಳು. ಆಗ ಜಗತ್ಪತಿಯೂದ ನಾರಾಯಣನು ಲಕ್ಷ್ಮೀ ಸಮೇತನಾಗಿ ಆಕೆಗೆ ಪ್ರತ್ಯಕ್ಷನಾದನು. ನಾರಾಯಣಿ–ಮಹಾಮಾಯೂ– ಮಹಾಲಕ್ಷ್ಮೀ– ಮಹೇಶ್ವರಿ– ಮಹಾದೇವೀ–ಎಂಬ ಪಂಚ ಸ್ವರೂಪಗಳನ್ನು ಧರಿಸಿದ ಮಹಾಲಕ್ಷ್ಮೀದೇವಿಯೊಡನೆ ಪ್ರತ್ಯಕ್ಷನಾದ ನಾರಾಯಣ – ವಾಸುದೇವ – ಸಂಕರ್ಷಣ – ಪ್ರದ್ಯುಮ್ನ– ಅನಿರುದ್ಧ ನೆಂಬ ಪಂಚರೂಪಗಳನ್ನು ಧರಿಸಿದ ಶ್ರೀಮನ್ನಾರಾಯಣನನ್ನು ಕಂಡು ನಮಸ್ಕರಿಸಿ ಸ್ತುತಿಸಿದ ಶಚೀದೇವಿಯು ತನ್ನ ಇಷ್ಟಾರ್ಥಕ್ಕಾಗಿ ಪ್ರಾರ್ಥಿಸಿದ ಕೂಡಲೇ ಪ್ರಸನ್ನರಾದ ಲಕ್ಷ್ಮೀ



ಶ್ರೀ ಆಂಜನೇಯ

ನಾರಾಯಣರು "ಹಾಗೆಯೇ ಆಗಲಿ" ಎಂದು ವರವನ್ನಿತ್ತು ಅಲ್ಲೇ ಅದೃಶ್ಯರಾದರು. ನಿತ್ಯದಲ್ಲೂ ಪರಸ್ಪರ ಅಗಲದೇ ಇರುವ ಮನೋಹರರಾದ ಆ ದಂಪತಿಗಳನ್ನೇ ಧ್ಯಾನಮಾಡುತ್ತಾ ಶಚಿದೇವಿ ಕೆಲವು ದಿನ ಅಲ್ಲೇ ವಾಸಮಾಡಿದಳು. ಶಚಿದೇವಿಯು ತನ್ನನ್ನಗಲಿ ಹೋದ ಮೇಲೆ ಇಂದ್ರನು ಶಚೀಯನ್ನು ಕಾಣದೇ ದುಃಖಿಪಟ್ಟು ಹುಡುಕಲು ಹೊರಟಾಗ ದಾರಿಯಲ್ಲಿ ಕಂಡ ನಾರದರಿಂದ ಶಚೀದೇವಿಯ ವಿಷಯವನ್ನೆಲ್ಲಾ ತಿಳಿದು ವೇದಾಚಲಕ್ಕೆ ಬಂದನು. ಬಂದು ನಿಂತ ಪತಿಯನ್ನು ಕಂಡ ಶಚೀದೇವಿ ಎದ್ದುನಿಂತು ನಮಸ್ಕರಿಸಿದಳು. ಇಂದ್ರನು ಸಂತೋಷದಿಂದ "ದೇವೀ, ನನ್ನ ಮನಸ್ಸು ನಿನ್ನಲ್ಲೇ ನೆಟ್ಟಿದೆ. ಸಂಶಯಬೇಡ. ನೀನಿಲ್ಲದೇ ನನಗೆ ಸ್ವರ್ಗವೂ ಸುಖವನ್ನುಂಟುಮಾಡುವುದಿಲ್ಲ. ತಪಸ್ಸಿನಿಂದ ಶ್ರೀ ವಿಷ್ಣುವನ್ನು ನೀನು ಈ ಅರಣ್ಯದಲ್ಲಿಯೇ ಒಲಿಸಿಕೊಂಡಿದ್ದರಿಂದ ಈ ಭರತಖಂಡದಲ್ಲಿಯೇ ಈ ಕ್ಷೇತ್ರವು ಅತ್ಯಂತ ಪವಿತ್ರವಾದುದು. ಮನುಷ್ಯರಿಗೆ ಕಲಿಯುಗದಲ್ಲಿ ಕ್ಷಿಪ್ರಸಿದ್ಧತೆ ಕೊಡತಕ್ಕುದು. ನಾನು ಕೂಡಾ ನಿನ್ನ ಮೇಲಿನ ಪ್ರೀತಿಯಿಂದ, ಪ್ರೀತಿಗಾಗಿ ಯಜ್ಞಫಲಭೋಕ್ತನೂ, ಯಜ್ಞಗಳ ಅಧಿಪತಿಯೂ ಆದ ಶ್ರೀ ವಿಷ್ಣುವನ್ನು ಈ ತೀರ್ಥ ಸಮೀಪದಲ್ಲಿ ಯಜ್ಞದಿಂದ ಪೂಜಿಸುವೆನು" ಹೀಗೆ ಹೇಳಿ ಇಂದ್ರನು ಯಜ್ಞಪತ್ನಿಯಾದ ಶಚೀದೇವಿಯೊಡನೆ ಹರಿಯನ್ನು ಯಜ್ಞದಿಂದ ಪೂಜಿಸತೊಡಗಿದನು. ಆಗ ಆತನ ಅಪ್ಪಣೆಯಿಂದ ಇಂದ್ರಾಣಿ ದೇವಿಯು ಯಾಗಾವಸಾನದಲ್ಲಿ ಜಲರೂಪವನ್ನು ತಾಳಿ ನದೀರೂಪದಿಂದ ಯಜ್ಞಕುಂಡದಿಂದ ಸರ್ವಪಾಪವನ್ನೂ ಪರಿಹರಿಸತಕ್ಕವಳಾಗಿ ಹೊರಟು ಹರಿದು ಹೋದಳು. ತನ್ನ ಆ ಶಚಿರೂಪದಿಂದ ಪತಿಯಾದ ಇಂದ್ರನನ್ನನುಸರಿಸಿ ಸ್ವರ್ಗಕ್ಕೆ ತೆರಳಿದಳು. ಶಚಿದೇವಿಯ ಅದ್ಭುತ ಮಹಿಮೆಯನ್ನು ಕಂಡು ದೇವಶ್ರೇಷ್ಠರೂ, ಮುನಿಗಳೂ ಪುಷ್ಪವೃಷ್ಟಿಯನ್ನು ಮಾಡಿದರು. ಈ ಕ್ಷೇತ್ರವನ್ನು "ಇಂದ್ರಾಣಿ ಕ್ಷೇತ್ರ"ವೆಂದೂ ನದಿಯನ್ನು "ಇಂದ್ರಾಣಿ ನದಿ" ಯೆಂದೂ ಶಚೀದೇವಿಯ ಕೀರ್ತಿಯನ್ನು ವೃದ್ಧಿಗೊಳಿಸುವ ಹೆಸರನ್ನಿಟ್ಟರು. ಇಂದ್ರನು ನಿರ್ಮಿಸಿದ ಯಜ್ಞಕುಂಡಕ್ಕೆ "ಇಂದ್ರಾಣೀ ಕುಂಡಿಕೆ" ಯೆಂದೂ ಹೆಸರಿಟ್ಟರು. ಆ ಸರೋವರದಲ್ಲೂ, ಕುಂಡಿಕೆಯಲ್ಲೂ ನಿತ್ಯವೂ ಉದಕವು ಅತೀ ನಿರ್ಮಲವಾಗಿ ಇರುತ್ತದೆ. ಆ ಜಲಪ್ರವಾಹವು ಕುಂಡಿಕೆಯಿಂದ ಕೆರೆಗೂ, ಕೆರೆಯಿಂದ ಕೆರೆಗೂ ಹರಿದು ಮಹಾನದಿಯಾಗಿ ಪ್ರವಹಿಸಿ ಪಶ್ಚಿಮ ಸಮುದ್ರವನ್ನು ಸೇರುತ್ತದೆ.

ಇಷ್ಟೊಂದು ಅದ್ಭುತ ಮಹಿಮೆಯನ್ನು ಹೊಂದಿರುವ "ಇಂದ್ರಾಣೀ ಕ್ಷೇತ್ರವು" ಕ್ರಮೇಣ 'ಇಂದ್ರಾಳಿ' ಎನ್ನುವ ಹೆಸರಿನಿಂದಲೇ ಪ್ರಸಿದ್ಧವಾಯಿತು. ಇಲ್ಲಿರುವ 'ಇಂದ್ರಾಣಿ' ನದಿ ಜಲದಲ್ಲಿ ಮಿಂದು, ಮಹಾಲಕ್ಷ್ಮಿಯನ್ನು ಭಜಿಸಿದರೆ, 'ಶತ್ರುವೂ ಮಿತ್ರನಾಗುವನು, ದಂಪತಿಗಳೂ ಪರಸ್ಪರ ಪ್ರೀತಿಬದ್ಧವಾಗುವರು. ಪಿಶಾಚಾದಿಗಳೂ ಪೀಡಿಸಲಾರವು, ದುಃಸ್ವಪ್ನಗಳೂ ಸಂದೇಹವಿಲ್ಲದೇ ಪರಿಹಾರವಾಗುವವು" ಎನ್ನುವ ನಂಬಿಕೆ ಪ್ರಚಲಿತವಾಗಿವೆ. ಇಂದ್ರಾಣಿ ಕುಂಡದ ಪಕ್ಕದಲ್ಲಿಯೇ ಆಂಜನೇಯ ದೇವಾಲಯವೂ ಇದೆ. ಇಂದ್ರಾಣಿ ದೇವಾಲಯವನ್ನು ಸಂದರ್ಶಿಸಲು ಹೋದವರಿಗೆ 'ಇಂದ್ರಾಣಿ' ಕುಂಡಿಕೆಯಾಗಲೀ, ಇಂದ್ರಾಣಿ ಸರೋವರವಾಗಲಿ ದೇವಾಲಯದ ಪಕ್ಕದಲ್ಲಿಯೇ ಕಾಣುವುದಿಲ್ಲ. ಅವುಗಳನ್ನು ಕಾಣಬೇಕೆಂದಾದಲ್ಲಿ ದೇವಾಲಯದ ಪಶ್ಚಿಮ ದಿಕ್ಕಿನಲ್ಲಿರುವ ಅರಣ್ಯದೊಳಗೆ ಇರುವ ದಾರಿಯಿಂದ ಸುಮಾರು ಇಪ್ಪತ್ತು ಹೆಜ್ಜೆ ನಡೆದರೆ ಅರಣ್ಯದ ನಡುವೆ ಇವುಗಳನ್ನು ಕಾಣಬಹುದು. ಸದಾ

ಒಂದೇ ಮಟ್ಟದಲ್ಲಿ ಹರಿದು ಬರುತ್ತಿರುವ ಶುದ್ಧೋದಕವನ್ನೂ, ಅಲ್ಲಿನ ಪ್ರಶಾಂತ ಪರಿಸರವನ್ನೂ ನೋಡುವ ಯಾರೇ ಆಗಲಿ ಇಂದ್ರಾಣಿ ಕ್ಷೇತ್ರದ ಪುರಾಣವನ್ನು ಸತ್ಯವೆಂದು ಒಪ್ಪಿಕೊಳ್ಳುವರು. ನಾಸ್ತಿಕರನ್ನೂ ಆಸ್ತಿಕರನ್ನಾಗಿ ಮಾಡಬಲ್ಲ ಈ ಕ್ಷೇತ್ರವು, ಅರ್ಥಾತ್ ದೇವಾಲಯವು ಇದೀಗ ಶಿಥಿಲಾವಸ್ಥೆಯಲ್ಲಿರುವುದನ್ನು ಮನಗಂಡ ಊರ ಭಕ್ತಾದಿಗಳು ದೇವಾಲಯವನ್ನು ಸಂಪೂರ್ಣ ನವೀಕರಿಸಿ, ನೂತನ ಶಿಲಾಪ್ರತಿಮೆಯನ್ನು ಪ್ರತಿಷ್ಠಾಪಿಸುವ ಯೋಜನೆ ಹಾಕಿಕೊಂಡಿದ್ದಾರೆ. ಅಲ್ಲದೇ 1989 ರ ಮಾರ್ಚ್ ತಿಂಗಳಲ್ಲಿ ದೇವಸ್ಥಾನದಲ್ಲಿ ನಡೆದ ಅಷ್ಟಮಂಗಲ ಪ್ರಶ್ನೆಯಲ್ಲೂ ಇದೇ ರೀತಿಯ ಆದೇಶವಾಗಿದೆ. ಆ ಪ್ರಕಾರ ಗರ್ಭಗೃಹವನ್ನು ಸಂಪೂರ್ಣ ಶಿಲಾಮಯವನ್ನಾಗಿ ಮಾಡಬೇಕೆಂಬ ಇಚ್ಛೆಯಿಂದ ನೇಪಾಳದ ಪಶುಪತಿ ದೇವಾಲಯದ ಪ್ರಧಾನ ಅರ್ಚಕರಾಗಿರುವ ಶ್ರೀ ರಾವಲ್ ಪದ್ಮನಾಭಶಾಸ್ತ್ರಿ ಅಡಿಗರು ತಮ್ಮ ದೇಣಿಗೆಯಾಗಿ ರೂಪಾಯಿ 50 ಸಾವಿರದ ಇನ್ನೂರನ್ನೂ ನೀಡಿರುತ್ತಾರೆ.

ಇಂದ್ರಾಣೀ ದೇವಿಯ ಸನ್ನಿಧಿಯಲ್ಲಿ ಪ್ರತಿವರ್ಷ ನವರಾತ್ರಿಯಲ್ಲಿ ವಿಶೇಷಪೂಜೆ, ಚಂಡಿಕಾ ಹೋಮಗಳು ಬಹಳ ವಿಜೃಂಭಣೆಯಿಂದ ಜರಗುತ್ತವೆ. ಅಕ್ಷಯ ತೃತೀಯಾ ಸಂದರ್ಭದಲ್ಲಿ ದೇವಿ ಸನ್ನಿಧಿಯಲ್ಲಿ ನಡೆಯುವ ರಥೋತ್ಸವಕ್ಕೆ ಬೆಟ್ಟದ ಮೇಲೆ ಭಕ್ತಾದಿಗಳು ಸಾಲುಸಾಲಾಗಿ, ತಂಡೋಪತಂಡವಾಗಿ ಏರುವುದೇ ಒಂದು ಸೊಗಸಾದ ನೋಟ. ನವೆಂಬರ್ ತಿಂಗಳಲ್ಲಿ ದೀಪೋತ್ಸವವೂ ನಡೆಯುತ್ತದೆ. ಇದೀಗ ಭಕ್ತಾದಿಗಳ ನೆರವಿನಿಂದ ಸುಮಾರು 12 ಲಕ್ಷ ರೂಪಾಯಿ ಯೋಜನೆಯ ಜೀರ್ಣೋದ್ಧಾರ ಕೆಲಸಗಳು ದೇವಾಲಯದಲ್ಲಿ ಪ್ರಾರಂಭವಾಗಿವೆ. ಶಿಲಾಮಯ ಗರ್ಭಗೃಹ, ತೀರ್ಥ ಮಂಟಪ, ಸುತ್ತಪೌಳಿ, ಗಣೇಶಗುಡಿ, ಅಗ್ರಶಾಲೆ, ಉಗ್ರಾಣ, ಭದ್ರಕೋಣೆ, ಗೋಪುರ, ಭೋಜನ ಗೃಹ, ಸಭಾಭವನ, ಓಲಗಮಂಟಪ, ರಥದ ಕೊಟ್ಟಿಗೆ, ವಸತಿಗೃಹ, ಮೂಲಸ್ಥಳ ನವೀಕರಣ ಇತ್ಯಾದಿ ಕೆಲಸಗಳು ಈ ಯೋಜನೆಯಡಿ ಆಗಬೇಕಾಗಿದೆ.

ಇಷ್ಟೆಲ್ಲಾ ಜನಪ್ರಿಯವಾಗಿರುವ, ಪುರಾತನ ಇತಿಹಾಸವುಳ್ಳ, ಇಂದ್ರಾಣಿಯಲ್ಲಿಯೇ ಉಡುಪಿಯ ರೈಲು ನಿಲ್ದಾಣವೂ ಕೆಲವೇ ವರ್ಷಗಳಲ್ಲಿ ಕಾರ್ಯಾರಂಭವಾಗಲಿರುವುದರಿಂದ ಈ ಕ್ಷೇತ್ರದ ಜನಪ್ರಿಯತೆ ಇನ್ನೂ ಹೆಚ್ಚಬಹುದು. ಯಾತ್ರಾರ್ಥಿಗಳ ಸಂಖ್ಯೆಯೂ ವೃದ್ಧಿಸುವುದರಲ್ಲಿ ಸಂದೇಹವಿಲ್ಲ. ಈ ಕ್ಷೇತ್ರವೂ ಮುಂದೆಯೂ ಇದೇ ರೀತಿಯ ಪ್ರಕೃತಿ ಸೌಂದರ್ಯವನ್ನುಳಿಸಿಕೊಂಡು, ಭಕ್ತಾದಿಗಳಲ್ಲಿ ಮನಃಶಾಂತಿಯನ್ನುಂಟು ಮಾಡುವಲ್ಲಿ ಪ್ರಮುಖ ಪಾತ್ರವನ್ನು ವಹಿಸಬೇಕಾಗಿದೆ. ಮಾತ್ರವಲ್ಲ ಈ ಕ್ಷೇತ್ರಕ್ಕೆ ಬರುವ ಯಾತ್ರಾರ್ಥಿಗಳಿಗೆ ಬಸ್ಸು ಸೌಕರ್ಯವನ್ನು ಒದಗಿಸುವಲ್ಲಿ ಸಂಬಂಧಪಟ್ಟವರು ಮನಸ್ಸು ಮಾಡಬೇಕಾಗಿದೆ. ಸರಕಾರ ಮತ್ತು ಧಾರ್ಮಿಕ ದತ್ತಿ ಸಂಸ್ಥೆಗಳು ಈ ಕ್ಷೇತ್ರದ ಸರ್ವತೋಮುಖ ಏಳಿಗೆಗಾಗಿ ಮುಂದೆ ಬರುವುದರ ಮೂಲಕ ಈ ಕ್ಷೇತ್ರಕ್ಕೆ ಅತ್ಯಧಿಕ ಸಂಖ್ಯೆಯಲ್ಲಿ ಯಾತ್ರಾರ್ಥಿಗಳು ಆಗಮಿಸಿ, ದೇವಳದ ಸಂಪತ್ತು ಹೆಚ್ಚುವಂತಾಗ ಬೇಕು. ಯಾವುದೇ ಉಂಬಳಿ, ಉತ್ಪತ್ತಿಯಿಲ್ಲದ ಈ ಹಳ್ಳಿಗಾಡಿನ ಪವಿತ್ರ ಕ್ಷೇತ್ರದತ್ತ ಎಲ್ಲರ ಗಮನ ಹರಿಯ ಬೇಕಾಗಿದೆ.

**

# "ಉಧೋ ಉಧೋ ಉಚ್ಚಂಗೆಲ್ಲಮ್ಮ"

ಶ್ರೀ ಉಚ್ಚಂಗಿ ಎಲ್ಲಮ್ಮ ಉಚ್ಚಂಗಮ್ಮ ಉತ್ಸವಾಂಬೆ ಹೀಗೆ ಹಲವು ಹೆಸರುಗಳಿಂದ ಪ್ರಖ್ಯಾತಿಯಾದ ಶ್ರೀ ದೇವಿ ಉಚ್ಚಂಗಮ್ಮ ನೆಲೆಸಿರುವ ಉಚ್ಚಂಗಿ ದುರ್ಗವು, ಕರ್ನಾಟಕದ ಸುಪ್ರಸಿದ್ಧ ಎಲ್ಲಮ್ಮ ದೇವರ ನಾಲ್ಕು ಯಾತ್ರಾಸ್ಥಳಗಳಲ್ಲಿ ಒಂದಾಗಿದ್ದು, ಎರಡನೇ ಸ್ಥಾನವನ್ನೂ ಗಳಿಸಿದೆ. ಇದು ಬಳ್ಳಾರಿ ಜಿಲ್ಲೆಯ ಹರಪನ ಹಳ್ಳಿ ತಾಲ್ಲೂಕಿನಲ್ಲಿದೆ. ಚಿತ್ರದುರ್ಗ ಜಿಲ್ಲೆಯ ಕೇಂದ್ರಬಿಂದು ದಾವಣಗೆರೆ, ಹಾಗೂ ಹರಪನ ಹಳ್ಳಿಯ ಮಧ್ಯ ಭಾಗದಲ್ಲಿ ಗಿರಿಗಳ ಸಮೂಹದಲ್ಲಿ ಶ್ರೀ ಕ್ಷೇತ್ರ ಗಿರಿಯು ಎದ್ದು ಕಾಣುತ್ತದೆ. ಶ್ರೀ ದೇವಿ ಉಚ್ಚಂಗೆಲ್ಲಮ್ಮ ನೆಲೆಸಿರುವ ಈ ಗ್ರಾಮವೂ ಕೂಡ "ಉಚ್ಚಂಗಿ ದುರ್ಗ'ವೆಂದೇ ಕರೆಯಲ್ಪಡುತ್ತದೆ. ದಾವಣಗೆರೆಯಿಂದ 28 ಕಿ.ಮೀ. ದೂರವಿರುವ ಈ ಕ್ಷೇತ್ರಕ್ಕೆ ಎಲ್ಲಾ ಕಡೆಯಿಂದ ಯಾತ್ರಾರ್ಥಿಗಳು ಭಕ್ತರು ಆಗಮಿಸಲು ಸಾಕಷ್ಟು ವಾಹನ ಸೌಕರ್ಯಗಳಿವೆ.

ಶ್ರೀ ಕ್ಷೇತ್ರಕ್ಕೆ ಆಗಮಿಸುವ ಭಕ್ತರನ್ನು ಸ್ವಾಗತಿಸಲು ಹಸ್ತಗಳನ್ನು ಚಾಚಿದೆಯೋ ಎಂಬ ರೀತಿಯಲ್ಲಿ ಕಾಣುವ ಗುಡ್ಡಗಳು, ಹಾಸುಬಂಡೆಗಳು, ಶ್ರೀ ಕ್ಷೇತ್ರ ಇನ್ನೂ ಎರಡು ಕಿ.ಮೀ. ದೂರದಿರುವಂತೆಯೇ ಕೈ ಬೀಸಿ ಸ್ವಾಗತಿಸುತ್ತವೆ. ಅಲ್ಲಿಂದಲೇ ಭಕ್ತರ ಮನಸ್ಸು ಅಲೆ ಅಲೆಯಾಗಿ ಮುದಗೊಳ್ಳುತ್ತ ಹೋಗುತ್ತದೆ. ಭಕ್ತರ 'ಉಧೋ ಉಧೋ' ಎನ್ನುವ ದೇವಿ ಜಯಕಾರ ಪರವಶರನ್ನಾಗಿಸುತ್ತದೆ. ಶ್ರೀ ದೇವಿಯ ದರ್ಶನದ ಕಾತುರತೆಯನ್ನು ಹೆಚ್ಚಿಸುತ್ತದೆ.

ಸ್ವಲ್ಪ ಏರುಭಾಗದಲ್ಲಿರುವ ಗ್ರಾಮವನ್ನು ಬಳಸಿ ಕೋಟೆ ಪ್ರವೇಶಕ್ಕೆ ಬಂದರೆ 'ಮುಳಿ ಬಾಗಿಲು' ಭಕ್ತರನ್ನು ಸ್ವಾಗತಿಸುತ್ತದೆ. ಬೃಹದಾಕಾರದಲ್ಲಿರುವ ಬಾಗಿಲುಗಳಿರುವ ಕೋಟೆಯ ಮೊದಲ ಮಹಾದ್ವಾರ ನೋಡುವವರಿಗೆ ಚಿತ್ತಾಕರ್ಷಕವಾಗಿದೆ. ಅದನ್ನು ದಾಟಿ ಮುಂದೆ ಹೋದರೆ 'ಜೀಬಿ' ಹೆಸರಿನ ದಕ್ಷಿಣ ದಿಕ್ಕಿನ ಕೋಟೆಯ ಮಹಾದ್ವಾರ ಸಿಕ್ಕುತ್ತದೆ. ದಾರಿಯಲ್ಲಿ 'ಕುಷ್ಠದ ಎಲ್ಲಮ್ಮ'ನ ದೇವಸ್ಥಾನವಿದೆ. ಅಲ್ಲಿ ಭಕ್ತಿಯಿಂದ ಪೂಜೆಯನ್ನು ಕೈಗೊಂಡರೆ ಕುಷ್ಠರೋಗ ನಿವಾರಣೆಯಾಗುತ್ತದೆಂದು ಭಕ್ತ ಜನರು ಪೂರ್ವ ಕಾಲದಿಂದಲೂ ಬಂದಿರುವ ನಂಬಿಕೆ. ಮುಂದೆ ಹೋದಾಗ ಈ ಮಹಾದ್ವಾರದ ಮುಂಭಾಗದಲ್ಲಿ 'ಶ್ರೀ ಆಂಜನೇಯ ಸ್ವಾಮಿಯ' ಆವಿರ್ಭವಿಸಿರುವ ಮೂರ್ತಿಯ ದೇವಾಲಯವಿದೆ. ಈ ಆಂಜನೇಯ ಸ್ವಾಮಿಯು ಜನರ ಕಠಿಣ ಸಮಸ್ಯೆಗಳನ್ನು ಪರಿಹರಿಸುವ ಮೂಲಕ ಪ್ರಸಿದ್ಧನಾಗಿದ್ದಾನೆ.

ಹೀಗೆ ಮುಂದೆ ಬೃಹದಾಕಾರದ ಗೋಡೆಗಳ ಮಧ್ಯ ನಡೆದು ಹೋದಾಗ ಬಸವಣ್ಣ ದೇವರ ದೇವಾಲಯವಿದೆ. ಭಕ್ತರು ಬಸವಣ್ಣನ ಪೂಜೆ ಮಾಡಿಯೇ ಮುಂದುವರಿಯುತ್ತಾರೆ. ಮುಂದೆ ನಡೆದಾಗ ಎಂತಹ ಬೇಸಿಗೆಯಲ್ಲೂ ತಂಪನ್ನೆರೆಯುವ ತಂಗುದಾಣವಿದೆ. ಎಷ್ಟು ದಣಿವಾಗಿದ್ದರೂ ಮನಸ್ಸಿಗೆ, ದೇಹಕ್ಕೆ ಆಹ್ಲಾದಕರವಾಗುತ್ತದೆ. ಅಲ್ಲಿ ಬಲಕ್ಕೆ ತಿರುಗಿದಾಗ ಮೈದಾನದಲ್ಲಿ ತುಂಬ ದೊಡ್ಡದಾದ ಆಲ, ಅರಳಿ ಮರಗಳ ತೋಪಿದೆ. ನಡುವೆ ತುಂಬಾ ಹಳೆಯದಾದ ಬನ್ನಿ ಮರವಿದೆ. ಅಲ್ಲೊಂದು ಮಂಟಪವಿದೆ. ಇದಕ್ಕೆ 'ಬನ್ನಿ ಮಂಟಪ' ವೆನ್ನುವರು. ಈ ಮಂಟಪದ ಎದುರಿಗೆ ಅತಿ ಬೃಹದಾಕಾರದ ಅದ್ಭುತವಾದ ಒಂದೇ ಶಿಲೆಯ ಒಂದು ಸುಂದರವಾದ ಜಲಪಾತವಿದೆ. ಮಳೆಗಾಲದಲ್ಲಿ ಮೇಲಿನಿಂದ ಬೀಳುವ ನೀರು ಜೋಗದ ಜಲಪಾತದ ನೆನಪನ್ನು ತರುತ್ತದೆ. ಇನ್ನುಳಿದ ದಿನಗಳಲ್ಲಿ ನೋಡುವವರ ಎದೆಯಲ್ಲಿ ಭಯದ ನೆರಳನ್ನು ಮೂಡಿಸುವ ರುದ್ರ ಮನೋಹರ ನೋಟ ಆಕರ್ಷಕವಾಗಿದೆ. ಇದಕ್ಕೆ 'ಹೊನ್ನರುಳಿ' ಎಂದು ಕರೆಯುತ್ತಾರೆ. ಇದಕ್ಕೂ ಚಾರಿತ್ರಿಕ ಮಹತ್ವವಿದೆ. ಅದರ ತಳಭಾಗಕ್ಕೂ ಬನ್ನಿ ಮಂಟಪಕ್ಕೂ ಮಧ್ಯ ಕಂದರದಲ್ಲಿ ಒಂದು ಸರೋವರ ನಿರ್ಮಾಣವಾಗಿದೆ.

ಮುಂದೆ ನಡೆದಾಗ ರಾಜ ಬೀದಿ ಕಾಣುತ್ತದೆ. ಎಡಗಡೆ ಒಂದು ಮದ್ದಿನ ಮನೆಯಿದೆ. ಮತ್ತು ಕಲ್ಲಿನ ಸುಂದರವಾದ ಚಚ್ಚೌಕಾರದ ಬಾವಿಯೊಂದು ಸಿಗುತ್ತದೆ. ಆ ಬಾವಿಗೆ ಕಲ್ಲುಗಳನ್ನು ಹೊಂದಿಸಿರುವ ರೀತಿ ಎಂಥವರನ್ನೂ ಆಶ್ಚರ್ಯಗೊಳಿಸುತ್ತದೆ. ನಂತರ ಅಲ್ಲೊಂದು ಗಣಪತಿ ದೇವಾಲಯವಿದೆ. ಅಲ್ಲಿಂದ ಬಲಕ್ಕೆ ಕೋಟೆಯ ರಾಜಮಾರ್ಗ, ನೇರವಾಗಿ ಹೋದರೆ 'ಹುಲಿಹರದ ಬಾಗಿಲು' ಎಂಬ ಹೆಸರಿನ ಕೋಟೆಯ ಪಶ್ಚಿಮ ದಿಕ್ಕಿನ ಹೆಬ್ಬಾಗಿಲು, ಇದರ ಹಿಂಭಾಗದಲ್ಲಿ 'ಹಿರೇ ಹೊಂಡ' ಎಂಬ ಹೊಂಡವಿದೆ. ಬಲಕ್ಕೆ ರಾಜಮಾರ್ಗದಲ್ಲಿ ನಡೆದರೆ ಬಾಳೆಹಣ್ಣಿನ ಬಾಗಿಲನ್ನೂ ಹೊಂದಿರುವ ಇನ್ನೊಂದು ತಂಪಾದ ತಂಗುದಾಣವಿದೆ. ಭಕ್ತ ಜನರು ಈ ಬಾಗಿಲಿಗೆ ಬಾಳೆಹಣ್ಣನ್ನು ತಿಕ್ಕುವ ಪದ್ಧತಿ ಬಹಳ ಪೂರ್ವಕಾಲದಿಂದಲೂ ನಡೆದು ಬಂದಿದೆ. ಏಕೆ ಈ ಪದ್ಧತಿ ಬಂತು ಎಂದು ಯಾರಿಗೂ ತಿಳಿಯದ ವಿಚಾರವಾಗಿದೆ.

ಮೇಲ್ಭಾಗಕ್ಕೆ ಹೋದಂತೆ ಇನ್ನೊಂದು ಕೋಟೆ ಬಾಗಿಲನ್ನು ದಾಟಿ ಮುಂದುವರೆದಾಗ ವಿಶಾಲವಾದ ಹಾಸುಬಂಡೆ ಆಕರ್ಷಕವಾಗಿ ಕಾಣುತ್ತದೆ. ಬಲಕ್ಕೆ 'ಬಟ್ಟಲು ಬಾವಿ' 'ತೊಟ್ಟಿಲು ಬಾವಿ'ಗಳಿವೆ. ಹಾಸುಬಂಡೆಯಲ್ಲಿ ಕೊರೆದು ಮಾಡಿರುವ ಈ ಸುಂದರ ಬಾವಿಗಳು ನೋಡುಗರಿಗೆ ಅಚ್ಚರಿಯನ್ನುಂಟು ಮಾಡುತ್ತವೆ. ಬಾವಿ ಒಳಗಡೆ ಹಿಡಿಯಲು ಏನೂ ಆಧಾರಗಳೇ ಇಲ್ಲ. ಬಾವಿಯ ಪಕ್ಕದಲ್ಲಿರುವ 'ಬಂಡೆ ಶಾಸನ' ಇಂದಿಗೂ ಇದೆ. ಇಲ್ಲಿಯೇ ಶ್ರೀ ವಿರೂಪಾಕ್ಷೇಶ್ವರನು ಲಿಂಗರೂಪಿಯಾಗಿ ಕಂಗೊಳಿಸುವ ದೇವಾಲಯವಿದೆ. ಅದರ ಪಕ್ಕದಲ್ಲಿಯೇ 'ಆನೆಹೊಂಡ' [illegible] ನಡುವೆ ಇರುವ ಈ ಹೊಂಡ ಆಕರ್ಷಕವಾಗಿದೆ. ಈ ಹೊಂಡಕ್ಕೂ ದೈವೀಕ ಮಹತ್ವವಿದೆ. ಪ್ರತಿ ಹುಣ್ಣಿಮೆಯ ದಿನ ರಾತ್ರಿ ದೇವಿಯು ಈ ಹೊಂಡದ ಮೇಲ್ಭಾಗ ಪಟ್ಟಿರುವ [illegible] ಕಟ್ಟೆಯ ಮೇಲೆ ಬಂದು ಕುಳಿತು ಕೊಳ್ಳುತ್ತಾಳೆ. ಭಕ್ತವೃಂದದ ನಡುವೆ ದೇವಿಗೆ ಅಮೃತ ಸ್ನಾನವಾಗುತ್ತದೆ. ನಂತರ ಇನ್ನೂ ಮೇಲ್ಭಾಗದಲ್ಲಿರುವ ಆಕೆಯ ತವರು ಮನೆ ಕಟ್ಟೆಗೆ ಧಾಪಿಸಿ ಬರುವ ದೃಶ್ಯ ನೋಡಲು ಒಂದು ಆನಂದ.

ಆ ತವರು ಮನೆ ಕಟ್ಟೆಯ ಪಕ್ಕದಲ್ಲಿ ರಾಣಿಯ ಅರಮನೆ ಇದೆ. ಅರಮನೆಯ ಸುತ್ತಲಿನ ಗೋಡೆ ಮಾತ್ರ ಉಳಿದುಕೊಂಡಿದೆ. ಅರಮನೆಯ ಪಳೆಯುಳಿಕೆಗಳು ಇಂದಿಗೂ ಸುಂದರವಾಗಿವೆ. ಅರಮನೆಯ ಒಳಭಾಗದ ಎಲ್ಲಾ ಭಾಗವೂ ಅಳಿದು ಹೋಗಿ ಕೇವಲ ಸುತ್ತಲಿನ ಗೋಡೆಗಳು ಮಾತ್ರ ಇವೆ. ಆದರೆ ನೋಡುಗರಿಗೆ ಹೊರಗಿನಿಂದ ಅದು ಹಾಳಾದ ಅರಮನೆ ಎಂದು ಅನಿಸುವುದೇ ಇಲ್ಲ. ಒಂದೊಂದು ಗೋಡೆಯು ಸುಮಾರು 4ರಿಂದ 5 ಅಡಿ ದಪ್ಪವಾಗಿರಬಹುದು. ಸುತ್ತಲೂ ಕಾವಲಿನವರ ಗೋಪುರಗಳೂ ಇವೆ. ಅರಮನೆಯ ಮೇಲ್ಭಾಗದಲ್ಲಿ ರಕ್ಷಣೆಗೋಸ್ಕರ ಬಂದೂಕಗಳನ್ನು ಹೊರಚಾಚಿ, ಹೊರಗಿನ ಶತ್ರುವನ್ನು ನಾಶಪಡಿಸಲು ತಾಂತ್ರಿಕವಾಗಿ ಮಾಡಿರುವ ಏರ್ಪಾಟಿನ ಕುರುಹಾಗಿ ಒಳಗಿನಿಂದ ಹೊರಗೆ ಗೋಡೆಯಲ್ಲಿ ಖಾನೆ ಖಾನೆಯಾಗಿ ಸ್ಥಳಾವಕಾಶವನ್ನು ಕಲ್ಪಿಸಲಾಗಿದೆ. ಆದರೆ ಹೊರಗಿನಿಂದ ನೋಡಿದಾಗ ಏನೂ ಕಾಣುವುದೇ ಇಲ್ಲ. ಅರಮನೆಯ ಹೆಬ್ಬಾಗಿಲ ಮುಂಭಾಗದಲ್ಲಿ ಭಾರತ ಹುಣ್ಣಿಮೆಯ ಕಟ್ಟೆಯಿದೆ. ಪ್ರತಿವರ್ಷ ಭಾರತ ಹುಣ್ಣಿಮೆಯ ಹಿಂದಿನ ದಿನ ರಾತ್ರಿ ಮುತ್ತೈದೆಯರು ಬೆಳೆ ತುಂಬಿದ ತಟ್ಟೆಗಳಿಂದಲೂ, ಕಳಶ ಕನ್ನಡಿಯಿಂದಲೂ ಆರತಿ ಮಾಡಿ ದೇವಿಯನ್ನೂ ಸ್ವಾಗತಿಸುವ ಪದ್ಧತಿ ಇಂದಿಗೂ ಇದೆ. ಪಕ್ಕದಲ್ಲಿ ವೀರಭದ್ರ ಸ್ವಾಮಿಯ ಮೂರ್ತಿಯಿದೆ.

ಮುಂದಿನದೇ ಉಚ್ಚಂಗಿ ದುರ್ಗ. ಕ್ಷೇತ್ರದ ಕಡೆಯ ಘಟ್ಟ. ಗಿರಿಯ ತುಟ್ಟ ತುದಿಯಲ್ಲಿ, ಮಹಾತಾಯಿ, ಜಗದ್ರಕ್ಷಕಿ, ಆದಿಶಕ್ತಿರೂಪಿಣಿ, ಮಹಾಮಾಯೆ ಉತ್ಸವಾಂಬೆಯ ಮೂರ್ತಿ ಭಕ್ತ ಜನರಿಗೆ ಅಭಯ ನೀಡಿ ಆಶೀರ್ವದಿಸುವ ಭಂಗಿಯಲ್ಲಿ ಗೋಚರಿಸುತ್ತದೆ. ಈ ಮೂರ್ತಿಯು ದುರ್ವಾಸ ಮಹಾಮುನಿಗಳಿಂದ ಸ್ಥಾಪಿತವಾದದ್ದು ಎಂದು ಹಿರಿಯರ ಅಭಿಪ್ರಾಯ. ಮತ್ತೆ ಅದಕ್ಕೆ ಶಾಸನಗಳಿವೆ. ಮೂರ್ತಿಯು 4 ಕೈಗಳಿಂದ ಕೂಡಿದ್ದು ಸುಂದರ ಮುಖಮುದ್ರೆಯಿಂದ ಕೂಡಿದೆ. ನೋಡುವವರಿಗೆ ಹಸನ್ಮುಖಿಯಿರುವ ಶ್ರೀ ಉತ್ಸವಾಂಬೆ ಭಕ್ತರನ್ನು ತುಂಬು ಹೃದಯದಿಂದ, ತುಂಬು ವಾತ್ಸಲ್ಯದಿಂದ ಆಶೀರ್ವಾದಿಸುತ್ತಾಳೇನೋ

ಎಂದು ಅನ್ನಿಸುತ್ತದೆ. ಹೀಗೆ ದೇವಿಯ ದರ್ಶನದಿಂದ ಪುನೀತರಾದ ಭಕ್ತ ವೃಂದದ ಆನಂದ ಅವರ್ಣನೀಯ.

ದೇವಸ್ಥಾನದ ಮುಂಭಾಗದಲ್ಲಿ ಸುಮಾರು 100 ಅಡಿಗಳ ತುಂಬ ಕಡಿದಾದ ಇಕ್ಕೆಲಗಳಲ್ಲಿ ದೇವಿ ಅರ್ಚಕರ ಹಾಗು ದೇವಸ್ಥಾನಕ್ಕೆ ಸಂಬಂಧಪಟ್ಟ

ಉಚ್ಚಂಗಿ ಎಲ್ಲಮ್ಮ ದೇವಿ ದೇವಸ್ಥಾನ





ಕೋಟೆಯ ಒಂದು ನೋಟ ಕೆಳಗಡೆ 'ಬಸಹೊಂಡ' ಎಂಬ ಒಂದು ಹೊಂಡ

ಪರಿಸರದ ಬಾಗಿಲು ಎಂಬ ಹೆಸರಿನ ಕೋಟೆಯ ಪಕ್ಕದ ದ್ವಾರ ಬಾಗಿಲು



ಗಿರಿಯ ಮೇಲಿರುವ ದೇವಸ್ಥಾನದ ಅತಿ ಚಿಕ್ಕದಾದ ದಾರಿ



ಶ್ರೀ ಉಚ್ಚಂಗಿ ಎಲ್ಲಮ್ಮ ನೆಲೆಸಿದ ಗಿರಿ



ಉಚ್ಚಂಗಿ ಎಲ್ಲಮ್ಮ ದೇವಿ



ಚಿತ್ರ: ಅಶೋಕ್ ಸ್ಟುಡಿಯೋ

ಅರಮನೆಯ ಹೊರನೋಟ





ಮನೆಗಳಿರಬಹುದು. ದೇವಸ್ಥಾನದ ಮುಂಭಾಗದಲ್ಲಿ ತಾಯಿಯ ಪಾದುಕೆಗಳು, ಹೆಬ್ಬಾಗಿಲ ಮುಂಭಾಗದಲ್ಲಿ

ಸಂಸ್ಥಾನದ ಆದಿಯಿಂದ ಬಂದ ದೇವರ ಸೇವೆ ಕೈಗೊಂಡಿರುವ ಜನರ ವಾಸದ ಸುಮಾರು 70

'ಅರಿಶಿನ ಹೊಂಡ' ಎಂಬ ಪ್ರಖ್ಯಾತ ಹೊಂಡ



ರಿಶಿನ ಕುಂಕುಮದ
ಂಗಡಿ ಸಾಲುಗಳು



ಜೋಗತಿಯರು



ಕೋಟೆ ಮಹಾದ್ವಾರ

52 ಅಡಿ ಎತ್ತರದ ಏಕಶಿಲಾ ಗರುಡಗಂಬ (ಇದು ಬೆಟ್ಟದ ಕೆಳಗಡೆ ಇದೆ)



ಬೆಟ್ಟದ ಮೇಲಿನಿಂದ ಕೆಳಗಡೆ ನೋಡಿದಾಗ ಕಾಣುವ ಉಚ್ಚಂಗಿ ದುರ್ಗದ ಒಂದು ಸುಂದರ ನೋಟ

ತಾಯಿಯ ಪಾದುಕೆಗಳು. ಎಡಭಾಗದ ಕಟ್ಟೆಯ ಮೇಲೆ 'ಸಿಡಿಗಂಬ'ವಿದೆ. ಹಲವಾರು ವರ್ಷಗಳ ಹಿಂದೆ ಭಕ್ತರು ತಮ್ಮ ಕಷ್ಟದ ಸಮಯದಲ್ಲಿ ದೇವರನ್ನು ಒಲಿಸಿಕೊಳ್ಳುವ ಮಾರ್ಗವಾಗಿ ಹರಕೆ ಹೊರುತ್ತಿದ್ದರು. ಹೀಗೆ ಹರಕೆ ಹೊತ್ತವರು ಈ ಕಂಬದಲ್ಲಿ ದೇವಿಯ ಸಮ್ಮುಖದಲ್ಲಿಯೇ ಸಿಡಿಯಾಗುತ್ತಿದ್ದರೆಂದು ಕೇಳಿರುವ ವಿಷಯ.

ಅರಮನೆಯ ಬಳಿ ಪಾಳೆಯಗಾರರು ಮದ್ದು ತಯಾರಿಸಲು ಸಹಾಯಕವಾಗುವ ತುಪ್ಪ ಹಾಗು ಎಣ್ಣೆ ಸಂಗ್ರಹಿಸಿಡುವ ಕೊಳಗಳು ಕಾಣುತ್ತವೆ. ತಲೆಯೆತ್ತಿ ನೋಡುವಂತಹ ಬೃಹದಾಕಾರದ ಅರಮನೆಯ ಕಲ್ಲಿನ ಗೋಡೆಗಳು, ಬಲಕ್ಕೆ ಸುಮಾರು 50 ಅಡಿ ಆಳದ ಕಂದರದಲ್ಲಿ 'ಅರಿಶಿಣ ಹೊಂಡ' ಎಂಬ ಹೊಂಡ ಗಮನ ಸೆಳೆಯುತ್ತದೆ. ಈ ಹೊಂಡದ ನೀರು ಪ್ರತಿನಿತ್ಯ ಶ್ರೀದೇವಿಯ ಅಭಿಷೇಕಕ್ಕೆ ಬೇಕೇಬೇಕು. ಯಾವಾಗಲೂ ಹಸಿರು-ಹಳದಿ ಮಿಶ್ರ ಬಣ್ಣದ ನೀರು ತುಂಬಿರುತ್ತದೆ. ಎಂತಹ ಬರಗಾಲದಲ್ಲೂ ಹೊಂಡದ ನೀರು ಬತ್ತಿದ ದಾಖಲೆಗಳಿಲ್ಲ. ಬೆಟ್ಟದ ಮೇಲೆಯೇ ಜೀವನ ನಡೆಸುವ, ಶ್ರೀ ದೇವಿಯ ಕೈಂಕರ್ಯ ಕೈಗೊಳ್ಳುವ ಜನರ ವಸತಿಗೆ, ಹುಣ್ಣಿಮೆ, ಹಬ್ಬ ಹರಿದಿನಗಳಲ್ಲಿ ಬೇರೆ ಊರಿನಿಂದ ಬರುವ ಭಕ್ತರಿಗೂ ಗಿರಿಯ ಮೇಲ್ಭಾಗದ ಈ ಹೊಂಡದ ನೀರೇ ಆಧಾರ. ಈ ಹೊಂಡ ಕೆಲವು ಜೀವಗಳನ್ನೂ ಬಲಿ ತೆಗೆದುಕೊಂಡಿದೆ.

ಶ್ರೀ ಉತ್ಸವಾಂಬೆಯು ಮೂಲಕಟ್ಟಡದ ಹಜಾರದಲ್ಲಿ ಪೂರ್ವ, ದಕ್ಷಿಣ, ಹಾಗು ಉತ್ತರ ದಿಕ್ಕಿನಲ್ಲಿ ಬಾಗಿಲುಗಳಿವೆ. ಶ್ರೀ ದೇವಿಯು ದೇವಸ್ಥಾನದ ಪಶ್ಚಿಮ ಭಾಗದಲ್ಲಿ ಪೂರ್ವಾಭಿಮುಖವಾಗಿ ಕುಳಿತಿದ್ದಾಳೆ. ದೇವಿಯನ್ನು ನೋಡುತ್ತಿದ್ದಂತೆ ತಾನಾಗಿಯೇ ಭಯ, ಭಕ್ತಿ ಭಾವನೆ ಎಂತಹ ನಾಸ್ತಿಕನ ಮನಸ್ಸಿನಲ್ಲಿಯೂ ಬರುತ್ತದೆ.

ಶ್ರೀ ದೇವಿಯ ದೇವಸ್ಥಾನದ ಗರ್ಭಗುಡಿಯಲ್ಲಿ ದೇವಿಯ ಮೂರ್ತಿ ಪೂರ್ವಕಾಲದ ದೇವಿಯ ಉತ್ಸವ ಮೂರ್ತಿ ಮಾತ್ರ ಎಂಬ ಪ್ರತೀತಿ ಇದೆ. ಈಗ ಎದುರಿನಲ್ಲಿ ನಮ್ಮ ಕಣ್ಣಿಗೆ ಕಾಣುತ್ತಿರುವ ದೇವಿಯ ಮೂರ್ತಿಯ ಹಿಂಭಾಗದಲ್ಲಿ ಬಟ್ಟೆಯ ಪರದೆ ಕಟ್ಟಿರುವುದು ಗೋಚರಿಸುತ್ತದೆ. ಆ ಪರದೆಯ ಹಿಂಭಾಗದಲ್ಲಿ ಚಿಕ್ಕದೊಂದು ಮೂಲ ಗರ್ಭಗುಡಿ ಸೂಕ್ಷ್ಮವಾಗಿ ಪರಿಶೀಲಿಸಿದಾಗ ಗೋಚರಿಸುತ್ತದೆ. ಆ ಗರ್ಭಗುಡಿಯಲ್ಲಿಯೇ ಶ್ರೀ ಉತ್ಸವಾಂಬೆಯ ಮೂಲವಿಗ್ರಹವಿರುವುದು ಎಂದು ಎಲ್ಲರ ನಂಬಿಕೆ: ಅದು ಚಾರಿತ್ರಿಕವಾಗಿಯೂ ಕೆಲವೆಡೆ ಉಲ್ಲೇಖವಿದೆ. ಆದರೆ ಅದನ್ನು ಪರೀಕ್ಷಿಸುವ ಎದೆಗಾರಿಕೆ ಯಾರೂ ತೋರಿಸಿಲ್ಲ. ಆ ಮೂಲವಿಗ್ರಹ ಭಿನ್ನವಾಗಿದೆ, ಅದಕ್ಕಾಗಿಯೇ ಆಕೆಯ ದರ್ಶನ ಜನರಿಗೆ ಇಲ್ಲ ಎಂದು ಕೆಲವರ ವಾದವಾದರೆ, ಇನ್ನೂ ಕೆಲವರು 'ಮೂಲವಿಗ್ರಹ ತುಂಬಾ ರೌದ್ರರೂಪದಿಂದಿದ್ದು ನೋಡಲು ಅತ್ಯಂತ ಭಯಂಕರವಾಗಿದೆ' ಎನ್ನುತ್ತಾರೆ. ಆದ್ದರಿಂದಲೇ ಬಹಳ ಪೂರ್ವದಲ್ಲಿಯೇ ಮೂಲ ಗರ್ಭಗುಡಿಗೆ ಪರದೆ ಕಟ್ಟಿರುತ್ತಾರೆ ಎಂದು ಅಭಿಪ್ರಾಯ ಪಟ್ಟಿದ್ದಾರೆ. ಒಟ್ಟಿನಲ್ಲಿ ಮೂಲವಿಗ್ರಹವನ್ನು ನೋಡಿದವರ‍್ಯಾರೂ ಇಲ್ಲ. ಯಾರಿಗೂ ದರ್ಶನವೂ ಇಲ್ಲ. ದರ್ಶನ ಮಾಡುವ ಎದೆಗಾರಿಕೆ ತೋರಿಸುವ ಗಂಡೆದೆಯ ಸಾಹಸಕ್ಕೆ ಯಾರೂ ಕೈ ಹಾಕಿಲ್ಲ. ಇದಕ್ಕೆ ಒಂದು ದಂತ ಕಥೆಯೂ ಉಂಟು.

'ಪೂರ್ವದಲ್ಲಿ ಮೂಲ ಗರ್ಭಗುಡಿಯಲ್ಲಿರುವ ಮೂರ್ತಿಗೇ ಪೂಜೆ ನಡೆಯುತ್ತಿತ್ತು. ಒಂದು ದಿನ ಅರ್ಚಕನು ನಿತ್ಯ ಪದ್ಧತಿಯಂತೆ ಪೂಜೆಗೆಂದು ದೇವಿಯ ಆಲಯಕ್ಕೆ ತೆರಳಿದ್ದಾನೆ. ಅವನ ಏಕೈಕ ವಂಶೋದ್ಧಾರಕನಾದ ಪುಟ್ಟ ಮಗನನ್ನು ಎತ್ತಿಕೊಂಡು ದೇವಸ್ಥಾನಕ್ಕೆ ಹೋದನು. ದುರಾದೃಷ್ಟ, ಆ ದಿನ ಅರ್ಚಕನು ನೈವೇದ್ಯವನ್ನು ಮರೆತು ಬಿಟ್ಟು ಬಂದಿದ್ದಾನೆ. ತಕ್ಷಣವೇ ತನ್ನ ಮರೆವಿಗೆ ಶಪಿಸಿಕೊಳ್ಳುತ್ತ, ತಾನೆಂಥ ತಪ್ಪು ಮಾಡಿದೆ ಎಂದುಕೊಂಡು, ದೇವಿಗೆ ತೃಪ್ತಿಯಾಗುವಂತೆ ಮೃಷ್ಟಾನ್ನ ಭೋಜನದ ನೈವೇದ್ಯ ತರಬೇಕೆಂದು ಮನೆಗೆ ಬಂದು ಅವಸರವಸರವಾಗಿ ದೇವಾಲಯಕ್ಕೆ ಹಿಂದಿರುಗಿದ್ದಾನೆ. ಒಳಗೆ ನಡೆದಾಗ ಕಂಡದ್ದೇನು? ಅಲ್ಲಿನ ಭಯಂಕರ ರೂಪ ನೋಡಲಾರದೆ ತತ್ತರಿಸಿದ್ದಾನೆ. ಅವನ ಕಣ್ಣುಗಳನ್ನು ಅವನೇ ನಂಬಲಾರ 'ಉಗ್ರ ರೂಪಿಣಿಯಾದ ದೇವಿ ಕಣ್ಣುಗಳನ್ನು ಕೆಂಡದುಂಡೆ ಮಾಡಿಕೊಂಡು ಅವನ ಚಿಕ್ಕ ಮಗುವನ್ನು ನುಂಗುತ್ತಿದ್ದಾಳೆ. (ಅವಸರದಲ್ಲಿ ನೈವೇದ್ಯ ತರಲು ಮನೆಗೆ ಹೋದಾಗ ಮಗುವನ್ನು ಅಲ್ಲೇ ಬಿಟ್ಟು ಹೋಗಿರುತ್ತಾನೆ) ಅರ್ಚಕನ ಆಗಮನದಿಂದ ಅಲ್ಲಿಗೆ ನಿಲ್ಲಿಸಿದ್ದಾಳೆ. ಆ ಮಗುವಿನ ಕಾಲುಗಳು ಮಾತ್ರ ಉಳಿದಿವೆ. ಉಳಿದ ಪೂರ್ತಿ ದೇಹವನ್ನು ಆಹಾರವನ್ನಾಗಿಸಿಕೊಂಡಿದ್ದಾಳೆ. ಮತ್ತು ತಕ್ಷಣವೇ 'ಕಲ್ಲಾದ'ಳೆಂದು ಹೇಳುತ್ತಾರೆ. ಅರ್ಚಕನು ಎಚ್ಚರ ತಪ್ಪಿದನು. ಆ ದಿನ ರಾತ್ರಿಯೇ ಅವನ ಕನಸಿನಲ್ಲಿ ಕಾಳಿಕಾ ದೇವಿ ಬಂದು 'ಇನ್ನು ಮೇಲೆ ನನ್ನ ಈ ಉಗ್ರರೂಪ ಯಾರಿಗೂ ಕಾಣುವುದು ಬೇಡ, ಪರದೆ ಕಟ್ಟಿಬಿಡು, ನನ್ನ ಉತ್ಸವ ಮೂರ್ತಿಗೇ ಪೂಜೆ ನಡೆಯಲಿ' ಎಂದು ಆದೇಶಿಸಿದ್ದಾಳೆ. ಅಂದಿನಿಂದ ಇಂದಿನವರೆಗೆ ಶ್ರೀ ಉತ್ಸವಾಂಬೆಯ ಮೂಲ ಮೂರ್ತಿಗೇ ಪರದೆ ಹಿಂದೆಯೇ ಪೂಜೆ ನಡೆಯುತ್ತದೆ" ಎಂದು ಈ ದಂತ ಕಥೆ ನಂಬಿದವರ ಅಭಿಪ್ರಾಯ.

ಬೆಟ್ಟದ ಎಡಭಾಗದಲ್ಲಿ ಕಣಿವೆ ಕೆರೆ (ಕನ್ನಿಕೆಯರ ಕೆರೆ) ಎಂಬ ಕೆರೆಯ ಭಾಗವನ್ನೂ ಬಳಸಿ ಬೆಟ್ಟದ ಪಶ್ಚಿಮ ತಪ್ಪಲನ್ನು ತಲುಪಿದರೆ ಅಲ್ಲಿ ಹಾಲಮ್ಮನವರ ದೇವಾಲಯವಿದೆ. ಇಲ್ಲಿಯೇ ವರ್ಷಕ್ಕೊಂದು ಬಾರಿ ಯುಗಾದಿಯಲ್ಲಿ ಶ್ರೀ ಉತ್ಸವಾಂಬೆಯ ಜಾತ್ರೆ ನಡೆಯುತ್ತದೆ. ಇದು ಅತ್ಯಂತ ವೈಭವವಾಗಿ, ವಿಜೃಂಭಣೆಯಿಂದ ಆಚರಿಸಲ್ಪಡುತ್ತದೆ. ಇದು ಮುಖ್ಯ ಬೆಟ್ಟದ ಹಾಗೂ ಎಡೂ ಪಕ್ಕಗಳಲ್ಲಿ ಆವೃತವಾಗಿರುವ ಚಿಕ್ಕ ಚಿಕ್ಕ ಗುಡ್ಡಗಳ ನಡುವೆ ಇರುವ ಸಮತಳವಾದ ಸ್ಥಳ. ಸುತ್ತಲೂ ಪ್ರಕೃತಿಯ ಸೌಂದರ್ಯದ ಪ್ರಭಾವದಿಂದಲೂ, ದೇವಿಯ ಪ್ರಭಾವದಿಂದಲೂ ಹೆಚ್ಚು ಜನರು ಈ ಸ್ಥಳಕ್ಕೆ ಆಕರ್ಷಿಸಲ್ಪಡುತ್ತಾರೆ. ಹೀಗೆ ಈ ಸ್ಥಳ 'ಹಾಲಮ್ಮನ ತೋಪು' ಎಂದೇ ಹೆಸರಾಗಿದ್ದು ಶ್ರೀ ಕ್ಷೇತ್ರದ ಒಂದು ಅವಿಭಾಜ್ಯ ಅಂಗವಾಗಿ ಪ್ರಸಿದ್ಧಿಯಾಗಿದೆ.

ಇಷ್ಟೇ ಅಲ್ಲದೆ 'ಕರಡಿ ದುರ್ಗದ ಆಂಜನೇಯ', ಚೌಡಾಂಬಿಕ ದೇವಾಲಯಗಳೂ ಇವೆ. ಗಿರಿಯ ಮೇಲಲ್ಲದೆ, ಗಿರಿಯ ಕೆಳಗಡೆಯೂ, 'ಜೋಡಿ ದುರ್ಗಮ್ಮ', 'ವೀರಭದ್ರ ದೇವಾಲಯ', 'ಬನಶಂಕರಿ' ಮುಂತಾದ ದೇವಾಲಯಗಳಿವೆ.

ಶ್ರೀ ಕ್ಷೇತ್ರದಲ್ಲಿಯೂ ಕೆಲವು ಧಾರ್ಮಿಕ ವೈಶಿಷ್ಟ್ಯಗಳು ಮತ್ತು ಉತ್ಸವಗಳು ನಡೆಯುತ್ತವೆ. ಅವುಗಳಲ್ಲಿ 'ಯುಗಾದಿ ಜಾತ್ರೆ' ಅತಿ ವೈಶಿಷ್ಟ್ಯಪೂರ್ಣವಾಗಿ ನಡೆಯುತ್ತದೆ. ಶ್ರೀ ಉತ್ಸವಾಂಬೆಗೆ ಯಾವುದೇ ಜಾತಿಯ ಕಟ್ಟು ನಿಟ್ಟಿಲ್ಲದೆ ಎಲ್ಲಾ ಜನರೂ ಕರ್ನಾಟಕದಾದ್ಯಂತ ಮತ್ತು ಕರ್ನಾಟಕದ ಹೊರಗಿನಿಂದಲೂ ಭಕ್ತರು ಬರುತ್ತಾರೆ. ಇದು ಹಾಲಮ್ಮನ ತೋಪಿನಲ್ಲಿ ಜರುಗುತ್ತದೆ. ಈ ಸಮಯದಲ್ಲಿ ಭಕ್ತರು 'ಬೇವಿನ ಉಡುಗೆ' ಮುಂತಾದ ತಮ್ಮ ಹರಕೆಗಳನ್ನು ಒಪ್ಪಿಸುತ್ತಾರೆ. ಲಕ್ಷಗಟ್ಟಲೆ ಜನರು ಸೇರಿರುತ್ತಾರೆ. ದೇವಿಗೆ ವಿಶೇಷ ಅಲಂಕಾರವಾಗಿರುತ್ತದೆ. 'ಬೆಲ್ಲದ ಬಂಡಿ', 'ಓಕುಳಿ' ಮುಂತಾದ ಕಾರ್ಯಕ್ರಮ ಜರುಗಿಸುತ್ತಾರೆ. ಈ ಹಬ್ಬದ ವಿಶೇಷವೆಂದರೆ, ಈ ಸಮಯದಲ್ಲಿ ಮಾತ್ರ, ಅಂದರೆ ಯುಗಾದಿ ಪಾಡ್ಯದ ದಿನ ದೇವಿಯು ಗಿರಿಯ ಕೆಳಗೆ ಇಳಿದು ಬಂದು ಹೋಗುತ್ತಾಳೆ.

ಮತ್ತೊಂದು ವೈಶಿಷ್ಟ್ಯಪೂರ್ಣವಾದುದು ದಸರಾ ಉತ್ಸವ. ಈ ನವರಾತ್ರಿಯಲ್ಲಿ ಶ್ರೀ ಉತ್ಸವಾಂಬೆ 9 ದಿನ ಪಟ್ಟಕ್ಕೆ ಕೂಡುತ್ತಾಳೆ. ವಿಜಯದಶಮಿಯಂದು ಸಾಯಂಕಾಲ ಬನ್ನಿ ಮಂಟಪಕ್ಕೆ ಸಕಲ ಮರ‍್ಯಾದೆಗಳೊಂದಿಗೆ ಭಕ್ತ ಜನರ ಸಮೂಹದ ಮಧ್ಯೆ ಬಂದು ಕೂಡುತ್ತಾಳೆ. ಆಗ ದೇವಿಯ ಮತ್ತು ಸಹಸ್ರ ಸಹಸ್ರ ಭಕ್ತಾದಿಗಳ ಸಮ್ಮುಖದಲ್ಲಿ ದೇವಿಯ ಪ್ರತಿನಿಧಿ ಅರ್ಚಕನು 'ದೇವಿಯ ಬಿಲ್ಲ'ನ್ನು ಹೆದೆಯೇರಿಸಿ ಕಟ್ಟಿ

### ಜೋಗತಿಯರು ಹಾಡುವ ಚೌಡಿಕೆ ಪದಗಳು

1. ಎಲ್ಲಮ್ಮ ಜಗದಂಬಾ ನೀನು ನಮ್ಮ
ಮನೆಗೆ ದೇವಿ ಬಾರಮ್ಮ। ಬಾ
ನನ್ನ ತಾಯೀ ನಿನಗೆ ಬಂಗಾರ ನೀಡ್ಯಾರೆ
ಮಂಗಳಾರತಿ ಮಾಡ್ಯಾರೆ। ।

ಹೊತ್ತಾಲೆ ಹಾಡ್ಯಾನೆ। ಹಗಲೆಲ್ಲಾ ಹಾಡ್ಯಾನೆ
ಗ್ಯಾನಾಲೆ ನಿನ್ನ ಮೇಲೇನೇ। ಗ್ಯಾನ
ಬಿದ್ದಾವೆ ನಿನ ಮೇಲೆ।

ಉಚ್ಚಂಗಿ ಗುಡ್ಡದಾಗೆ। ಒಬ್ಬಾಕೆ ನನ್ನ
ಕರಿಯಲ್ಲೇ ಕಬ್ಬಿನ ಡೇರೆ ಹೊಡೆವಾಳೆ।
ರೇಣುಕಾ ಜಗದಂಬಾ ನೀನು।

ಅಲ್ಲಿಗೆ ಅದು ಮೇಲೆ। ಇಲ್ಲಿಗೆ ಇದು ಮೇಲೆ
ಎಲ್ಲದಕ್ಕೂ ಮೇಲೆ ಏಳುಕೊಳ್ಳ। ಬಾವೀನ
ಕಂಡಲ್ಲೇ ಜಳಕ ನೇಮವ ಮಾಡಿ । ಊರ
ಕಂಡಲ್ಲೇ ಉಧೋ ಎಂದಲ್ಲೇ।

2. ಹುಟ್ಟಿ ಬಂದೆ ಎಲ್ಲಮ್ಮನಾಗಿ । ನಿನ್ನ
ಮದುವೆ ಮಾಡಿಕೊಟ್ಟಾರಪ್ಪಾ ಜಮದಗ್ನಿಗೆ।
ತಾಯಿ ಭೋಗವತಿ । ತಂದೆ ರೇಣುಕರಾಜ
ಅವರ ಹೊಟ್ಟೇಲಿ ಹುಟ್ಟಿ ಬಂದೆ। ಎಲ್ಲಮ್ಮ
ನಾಗಿ ನಮ್ಮವ್ವ ನೀನು।

ಮಳಲ ಕೊಡವ ಮಾಡಿ। ಸರ್ಪವ ಸಿಂಬೆಯ
ಮಾಡಿ। ಹೊತ್ತು ನಿಂತಳಪ್ಪಾ ಎಲ್ಲಮ್ಮ ದೇವಿ।
ಬಂದೆ ಬಾ ನನ್ನ ಸಂಪಿಗೆ ತಂದೆ ತಾಯಿ

ಬಲವಾಗಿ ಎಳೆದು 2 ಬಾಣಗಳನ್ನು ಬಿಡುತ್ತಾನೆ. ಆ ಬಾಣಗಳು ದೂರ ಹೋದಷ್ಟು ಆ ವರ್ಷ ಮಳೆ ಬೆಳೆ ಚೆನ್ನಾಗಿ ಆಗುತ್ತದೆಂದು ಜನರ ನಂಬಿಕೆ. ಈ ರೀತಿ ದೇವಿಯು ವೈಶಿಷ್ಟ್ಯಪೂರ್ಣವಾಗಿ 'ಬನ್ನಿ' ಮುಡಿಯುತ್ತಾಳೆ. 'ಉಧೋ ಉಧೋ' ಜೈಕಾರ, 'ಚೌಟಕಿ' ನಾದ, 'ನಗಾರಿ' ಶಬ್ದ ನಭೋಮಂಡಲವನ್ನು ತಲುಪುತ್ತವೆ. ಎಲ್ಲರೂ 'ಬನ್ನಿ'ಯನ್ನು ಬಂಗಾರವೆಂದು ಶುಭಾಶಯಗಳೊಡನೆ ವಿನಿಮಯ ಮಾಡಿಕೊಳ್ಳುತ್ತಾರೆ.

ನಂತರ ಪ್ರತಿ ಹುಣ್ಣಿಮೆಯ ದಿನಗಳಲ್ಲಿ ವಿಶೇಷ ಪೂಜೆಗಳು ನಡೆಯುತ್ತವೆ. ಪ್ರತಿ ಹುಣ್ಣಿಮೆಯು

ನೀನೇ ಗತಿ' ಬಂದ ಮಾರಿಯಾ ಬಯಲ
ಮಾಡೆ। ಭಾಗ್ಯದ ಕಿರಿ ಎಲ್ಲವ್ವ ಜಗದಂಬ

ಇಂಬ ನೋಡಿ ಮೂರುತಿಯಾದಾಳೆ, ಉಚ್ಚಂಗಿ
ಗುಡ್ಡದಾಗೆ। ಬಾಲಪ್ರಾಯದ ಜೋಗತಿ
ಯರು ವಾಲಗ ನಿನ ಮುಂದೆ। ಜಗದಂಬೆ
ನಡುಮುಡಿಗೆ ಉಧೋ ಎಂಬ ಶಬ್ದ
ನೂತನ ಬಾಳೇಳ ಮಾರಿ। ಬಂದ ಮಾರಿಯ
ಬಯಲ ಮಾಡೆ।

3. ಎಲ್ಲಿ ಕಾಣೆ ಎಲ್ಲಿ ಕಾಣೆ ಎಲ್ಲಮ್ಮನಂತಾಕೀನ
ಎಲ್ಲಿ ಕಾಣೆ ಎಲ್ಲಿ ಕಾಣೆ ಬಾಳ ಮಂದಿ ಅವ್ವಾ
ಬಾಳಮಂದಿ ಬತ್ತಲೆ ಮಾಡಿದೆ। ಎಲ್ಲಮ್ಮ
ನೀನು ಸೀರೆ ಉಡಿಸಿ ಮೋಜು ನೋಡಿದೆ।

ಉಚ್ಚಂಗಿ ಗುಡ್ಡಕ್ಕೆ ನಾವು ಹೋಗೋನು ಬಾ
ತಾಯಿ ಎಲ್ಲವ್ವನ ನೋಡೋಣ ಬಾ। ಕಾಯಿ
ಕರ್ಪೂರ ಕೊಳ್ಳೋಣ ಬಾ। ತಾಯಿ
ಉಚ್ಚಂಗಮ್ಮಗೆ ಪೂಜೆ ಮಾಡಿಸೋಣ ಬಾ। ಕೈ
ಎತ್ತಿ

ನಾವು ಮುಗಿಯೋಣ ಬಾ। ತಾಯಿ ಎಲ್ಲಮ್ಮಗೆ
ಕೈ ಎತ್ತಿ ಮುಗಿಯೋಣ ಬಾ। ಉಧೋ
ಉಧೋ

ಎನ್ನುಮತೆ ಹಾರೋಣ ಬಾ। ಉಚ್ಚಂಗಿ ದುರ್ಗದ
ಎಲ್ಲಮ್ಮನ ಜಾತ್ರೆಯ ನೋಡೋಣ ಬಾ।
ಉಧೋ ಉಧೋ ಎನ್ನುತ್ತ ಹಾಡೋಣ ಬಾ।

(ಸಂಗ್ರಹ)

ವಿಶೇಷ ದೊಡ್ಡ ಹಬ್ಬದಂತೆ ನಡೆಯುತ್ತದೆ. 'ಭಾರತ ಹುಣ್ಣಿಮೆ'; 'ಕಾರ್ತಿಕ ಹುಣ್ಣಿಮೆ'; 'ನೂಲು ಹುಣ್ಣಿಮೆ'; ಈ ದಿನಗಳಲ್ಲಿ ಚಿಕ್ಕ ಜಾತ್ರೆಗಳಂತೆ ನಡೆಯುತ್ತದೆ. ಮತ್ತೊಂದು ಹಬ್ಬವೆಂದರೆ 'ಹಿರೇ ಹಬ್ಬ'ವೆಂದು ಆಚರಿಸುತ್ತಾರೆ. ಇದು ತುಂಬಾ ನೇಮಗಳನ್ನು ಒಳಗೊಂಡ ಹಬ್ಬ. ಈ ಹಬ್ಬವನ್ನು ಆಚರಿಸಿದರೆ ಗ್ರಾಮವು ತುಂಬಾ ಸುಭಿಕ್ಷವಾಗಿರುತ್ತದೆಂದು ಪೂರ್ವದಿಂದಲೂ ಜನರಿಗೆ ಬಂದ ನಂಬಿಕೆ. ಇದೊಂದು ಅಪರೂಪವಾದ ಹಬ್ಬವಾಗಿದೆ.

ಈ ಗಿರಿಯ ಚಾರಿತ್ರಿಕ ಹಿನ್ನೆಲೆಯಾಗಿ ಹೇಳಬೇಕೆಂದರೆ ಈ ಗಿರಿಯು ದಕ್ಷಿಣೋತ್ತರವಾಗಿ ಉದ್ದಗಲಕ್ಕೂ ಹಬ್ಬಿಕೊಂಡಿದೆ. ಈ ಪ್ರದೇಶವನ್ನು ಹಿಂದೆ ಕದಂಬರು, ಪಾಂಡ್ಯರು, ಚೋಳರು, ಚಾಲುಕ್ಯರು, ಮೌರ್ಯರು, ಹೊಯ್ಸಳರು ಮುಂತಾದ ಪ್ರಖ್ಯಾತ ರಾಜರು ಆಳಿದ ದಾಖಲೆಗಳಿವೆ. ಪಾಂಡ್ಯರು ಈ ದುರ್ಗವನ್ನು 'ಉಚ್ಚ ಶೃಂಗ ಗಿರಿ' ಎಂದು ಕರೆದಿದ್ದಾರೆ. ಕದಂಬರು 'ಉಚ್ಚಂಗಿ ಪರ್ವತ'ವೆಂದೂ, ಚಾಲುಕ್ಯರು 'ಉತ್ತುಂಗ ಪರ್ವತ'ವೆಂದೂ, ಚೋಳರು 'ಕನಕ ಗಿರಿ' ಎಂದೂ ಕರೆದಿದ್ದಾರೆ. ತುಂಬಾ ದುರ್ಗಮವಾಗಿದ್ದ ಈ ದುರ್ಗವು ಕದಂಬರ ರಾಜಧಾನಿಗಳಲ್ಲಿ ಒಂದಾಗಿತ್ತೆಂದು ದಾವಣಗೆರೆ, ಶಿಕಾರಿಪುರ, ಕಡೂರಿನಲ್ಲಿ ಸಿಕ್ಕಿರುವ ಶಾಸನಗಳಿಂದ ತಿಳಿಯುತ್ತದೆ.

ಇಲ್ಲಿ ಪಾಳೆಗಾರರು ಆಳ್ವಿಕೆ ನಡೆಸಿದ್ದಾರೆ. ವಿಜಯನಗರ ಸಾಮ್ರಾಜ್ಯ ಪತನಾನಂತರ ಚಿಕ್ಕ ಪುಟ್ಟ ಪಾಳೆಗಾರರು ಸ್ವತಂತ್ರರಾದರು. ಅವರಲ್ಲಿ ಹರಪನಹಳ್ಳಿಯ ಪಾಳೆಯಗಾರರು ಒಬ್ಬರು. ಇವರಲ್ಲಿ 'ದಾದಯ್ಯ ನಾಯಕ'ನೆಂಬವನು ಮುಖ್ಯ ದಂಡನಾಯಕನಾಗಿದ್ದನು. ಈತನು ಎದೆ ನಡುಗಿಸುವ ಧೀಮಂತನೂ, ಅಷ್ಟೇ ಮಹಾ ದೈವಭಕ್ತನೂ ಆಗಿದ್ದನು. ಒಂದು ದಿನ ನಾಯಕನ ಕನಸಿನಲ್ಲಿ ತಾಯಿ ಶ್ರೀ ಉತ್ಸವಾಂಬೆ ಪ್ರತ್ಯಕ್ಷಳಾಗಿದ್ದಾಳೆ. ಮುಗುಳ್ನಗುತ್ತ ಅಪ್ಪಣೆ ಕೊಡಿಸಿದ್ದಾಳೆ. 'ನಾಯಕ. ನಿನ್ನಿಂದ ಒಂದು ಮಹತ್ತರ ಕಾರ್ಯವಾಗಬೇಕಾಗಿದೆ. ಇಲ್ಲಿಂದ ದಕ್ಷಿಣಕ್ಕೆ 'ಉಚ್ಚಂಗಿ ದುರ್ಗ' ಎಂಬ ಬೆಟ್ಟದ ಮೇಲೆ ನಾನು ನೆಲೆಸಿದ್ದೇನೆ. ನೀನು ಆ ಕೋಟೆಯಲ್ಲಿ ನೆಲೆಸು. ನನ್ನ ಸಂಪೂರ್ಣ ಆಶೀರ್ವಾದ, ಅನುಗ್ರಹ ನಿನಗಿದೆ. ನೀನು ಸ್ವತಂತ್ರವಾಗಿ ಆ ದುರ್ಗದ ನಾಯಕನಾಗು. ನನ್ನ ಈ ಮಾತಿಗೆ ಕುರುಹಾಗಿ ಮನೆಯ ಮುಂದಿರುವ ಮರವು ಬೇರು ಸಹಿತ ಬೀಳುತ್ತದೆ' ಎಂದು ಆದೇಶಿಸಿದಳು. ಅದರಂತೆ ನಾಯಕನು ಎಚ್ಚರಗೊಂಡು ರೋಮಾಂಚನದಿಂದ ಹೊರಗೆ ಬಂದು ನೋಡುತ್ತಿದ್ದಂತೆಯೇ ಮನೆಯ ಮುಂದಿನ ಮರವು ಬುಡ ಸಮೇತ ಬಿದ್ದಿತು. ಇದನ್ನು ಕಂಡು ನಾಯಕನು ಪುಳಕಿತನಾದನು. ನವಚೇತನ ಪಡೆದವನಾಗಿ, ಧನ್ಯತೆಯ ಭಾವದಿಂದ ಕೂಡಿದವನಾಗಿ ತಕ್ಷಣವೇ ತನ್ನ ಅನುಚರರೊಂದಿಗೆ ಈ ದುರ್ಗಕ್ಕೆ ಬಂದು ನೆಲೆಸಿದನು. ಆದರೆ ಅವನು ಇನ್ನೂ ಸ್ವತಂತ್ರನಾಗಿರಲಿಲ್ಲ. ಹರಪನ ಹಳ್ಳಿಯ ಪಾಳೆಗಾರರ ದಂಡನಾಯಕನಾಗಿದ್ದುಕೊಂಡೇ ಇಷ್ಟು ಕಾರ್ಯ ಸಾಧಿಸಿದ್ದನು.

ಒಮ್ಮೆ ಚಿತ್ರದುರ್ಗದ ಪಾಳೆಯಗಾರರಾದ ಮದಕರಿ ನಾಯಕನ ಜೊತೆ ಒಂದು ಯುದ್ಧದ ಸಂದರ್ಭದಲ್ಲಿ ಹರಪನ ಹಳ್ಳಿಯ ಪಾಳೆಯಗಾರರು ತಮ್ಮ ಪ್ರಮುಖ ದಂಡನಾಯಕನಾದ ದಾದಯ್ಯ ನಾಯಕನ ನೇತೃತ್ವದಲ್ಲಿ ಸೈನ್ಯವನ್ನು ಕಳುಹಿಸುತ್ತಾರೆ. ದಾದಯ್ಯ ನಾಯಕನಾದರೋ ತನ್ನ ಸ್ವಭಾವಕ್ಕೆ ತಕ್ಕಂತೆ ಶೌರ್ಯದಿಂದ ಹೋರಾಡಿ ಶತ್ರುಗಳನ್ನು ಹಿಮ್ಮೆಟ್ಟಿಸಿದ್ದಾನೆ. ಇದರಿಂದ ಸಂತೋಷ ಗೊಂಡ ಮದಕರಿ ನಾಯಕನು ದಾದಯ್ಯ ನಾಯಕನನ್ನು ಗೌರವಿಸಿ ತನ್ನ ಮಗಳಾದ 'ಹೊನ್ನಾಯಿಕಿ ನಾಯಕಿ' ಯನ್ನು ಕೊಟ್ಟು ವಿಜೃಂಭಣೆಯಿಂದ ಮದುವೆ ಮಾಡುತ್ತಾನೆ. ನಂತರ ದಾದಯ್ಯ ನಾಯಕನು ಸ್ವತಂತ್ರ ಪಾಳೆಗಾರನಾಗಿ ಹೆಂಡತಿಯಾದ ಹೊನ್ನಾಯಿಕಿ ನಾಯಕಿಯೊಂದಿಗೆ 'ಉಚ್ಚಂಗಿ ದುರ್ಗ' ಸಂಸ್ಥಾನದ ಮೊದಲನೆ ಪಾಳೆಯಗಾರನಾದನು. ಇದರಿಂದ ಉಚ್ಚಂಗಿ ದುರ್ಗದ ಪಾಳೆಯಗಾರರಲ್ಲಿ 'ಮೂಲ ಪುರುಷ' ಎನಿಸಿದನು. ಸ್ವಲ್ಪ ಕಾಲದಲ್ಲಿಯೇ ಅತ್ಯಂತ ಪ್ರಸಿದ್ಧ ನಾಯಕನಾದನು.

ಅವನ ಉನ್ನತಿ ಕಾಲದಲ್ಲಿ ಬೇರೆ ಪಾಳೆಯಗಾರರು ತಮ್ಮ ಮಕ್ಕಳನ್ನು ಧಾರೆ ಎರೆದು ಕೊಡಲು ಮುಂದಾದರು. ಆಗ ಬಹುಪತ್ನಿತ್ವ ಪದ್ಧತಿಯಿತ್ತು. ಸವತಿಯರ ಬರುವಿಕೆಯನ್ನು ಸಹಿಸದ ಪಟ್ಟದರಸಿ ಹೊನ್ನಾಯಿಕಿ ನಾಯಕಿ ಗಂಡನ ಮರುಮದುವೆಗೆ ಒಪ್ಪದೆ, ಅವನನ್ನು ಮತ್ತೆ ಮದುವೆಯಾಗದಂತಿರಲು ಬೇಡಿಕೊಳ್ಳುತ್ತಾಳೆ. ನಾಯಕ ಅವಳ ಮಾತಿಗೆ ಕಿವಿಗೊಡಲಿಲ್ಲ. ಇದರಿಂದ ರಾಣಿಯ (ನಾಯಕಿ) ಸ್ವಾಭಿಮಾನಕ್ಕೆ ಪೆಟ್ಟು ಬಿದ್ದಂತಾಯಿತು. ಇದರಿಂದ ಕೆರಳಿದ ನಾಯಕಿ ತವರೂರಿಗೆ ತನ್ನ ಅಳಲನ್ನು ತೋಡಿಕೊಂಡು ಪತ್ರವನ್ನು ಬರೆದು ಕಳಿಸಿದಳು. ಕಾಗದ ಕಂಡು ಮದಕರಿನಾಯಕ ಕೋಪದಿಂದ ಹಿಂದು ಮುಂದಿನ ಯೋಚನೆಯಿಲ್ಲದೆ, ದಾದಯ್ಯ ನಾಯಕನಿಗೆ "ತಕ್ಷಣ, ನೀನು ಬೇರೆ ಹೆಣ್ಣುಗಳನ್ನು ಮದುವೆಯಾಗುವ ಯೋಚನೆ ಬಿಟ್ಟು ಬಿಡಬೇಕೆಂದು, ಇಲ್ಲವಾದರೆ ಪರಿಣಾಮ ಸರಿಯಿರುವುದಿಲ್ಲವೆಂದೂ, ನಮ್ಮ ಮಗಳನ್ನು ನೀನು ಮದುವೆಯಾಗಿರುವುದರಿಂದಲೇ ನಿನಗೆ ಎಲ್ಲೆಡೆ ಮಹತ್ವವಿರುವುದನ್ನು ನೆನಪಿನಲ್ಲಿಟ್ಟುಕೋ'' ಎಂದು ಗರ್ವಯುತವಾದ ಭಾಷಾ ವೈಖರಿಯಲ್ಲಿ ಪತ್ರವನ್ನು ಕಳುಹಿಸಿದನು. ಆ ಪತ್ರದ ಸಾರಾಂಶವನ್ನು ಗ್ರಹಿಸಿದ ದಾದಯ್ಯ ನಾಯಕನು ಕಿಡಿಕಿಡಿಯಾದನು. ತಕ್ಷಣವೇ ಚಿತ್ರದುರ್ಗದ ನಾಯಕನಿಗೆ "ನಾನು ದೇವಿಯ ಕೃಪೆಯಿಂದ, ನನ್ನ ಶೌರ್ಯ ಸಾಹಸಗಳಿಂದ ಮುಂದೆ ಬಂದೆ. ಅದಕ್ಕೆ ಮೆಚ್ಚಿ ನಿಮ್ಮ ಮಗಳನ್ನು ನನಗೆ ಧಾರೆ ಎರೆದು ಕೊಟ್ಟಿರೇ ಹೊರತು, ಅವಳನ್ನು ಮದುವೆಯಾದ ಮೇಲೆ ನನಗೆ ಶೌರ್ಯ ಸಾಹಸಗಳು ಬಂದಿಲ್ಲ. ನನ್ನ ಮದುವೆ ವಿಚಾರ ಸ್ವಂತವಾಗಿ ನನಗೇ ಸೇರಿದ್ದು, ಇದರಲ್ಲಿ ನಿಮಗೆ ತಲೆಹಾಕಲು ಯಾವ ಅಧಿಕಾರವೂ ಇಲ್ಲ, ಆದ್ದರಿಂದ ನೀವು ತಟಸ್ಥರಾಗಿರುವುದೇ ಒಳಿತು'' ಎಂದು ತನ್ನ ಸಹಜ ಸ್ವಭಾವದ ಸ್ವಾಭಿಮಾನವನ್ನು ಪ್ರಕಟಿಸಿ ಉತ್ತರಿಸಿದನು.

ಪರಿಣಾಮವಾಗಿ ಕೆರಳಿದ ಚಿತ್ರದುರ್ಗದ ನಾಯಕನು ಉಚ್ಚಂಗಿ ದುರ್ಗದ ಕೋಟೆಯ ಮೇಲೆ ಲಗ್ಗೆ ಹಾಕಿದನು. ಅಷ್ಟರಲ್ಲಿ ದಾದಯ್ಯ ನಾಯಕ ಕೋಟೆಯ ಬಾಗಿಲುಗಳನ್ನೆಲ್ಲ ಹಾಕಿಸಿ.ಭದ್ರ ಪಡಿಸಿ ಕೊಟೆಯ ರಕ್ಷಣೆಯನ್ನು ಬಲಪಡಿಸಿದನು. ಹಲವಾರು ದಿನಗಳು ಕಳೆದರೂ ಕೋಟೆಯ ಬಾಗಿಲನ್ನು ಒಡೆಯುವಲ್ಲಿ ಚಿತ್ರದುರ್ಗದ ಸೈನ್ಯ ವಿಫಲವಾಯಿತು. ಪರಿಸ್ಥಿತಿಯನ್ನು ಸರಿಯಾಗಿ ಅರ್ಥ ಮಾಡಿಕೊಳ್ಳಲಾರದ ಹೊನ್ನಾಯಿಕಿ ನಾಯಕಿ ತನ್ನ ತವರೂರಿನ ಮೇಲಿನ ಅಭಿಮಾನದಿಂದ, ತಂದೆಗೆ ಸಹಾಯ ಮಾಡುವ ಭರದಲ್ಲಿ ತಾನು ತನ್ನ ಗಂಡ, ತನ್ನ ನೆಲ, ತನ್ನ ದೇಶಕ್ಕೆ ದ್ರೋಹ ಮಾಡುತ್ತಿರುವುದನ್ನೂ ಮರೆತು ತನ್ನ ತಂದೆಯೊಡನೆ ಪಿತೂರಿ ನಡೆಸಿದಳು. ಒಬ್ಬ ನಂಬಿಕೆಯ ಸೈನಿಕನ ಮೂಲಕ ದಾದಯ್ಯ ನಾಯಕನ ಮುದ್ರೆಯುಂಗುರವನ್ನು ಕೋಟೆಯ ದಕ್ಷಿಣ ದಿಕ್ಕಿನ 'ಜೇಬಿ' ಬಾಗಿಲಲ್ಲಿರುವ ಸೈನಿಕರಿಗೆ ತೋರಿಸಿ 'ರಾಜಾಜ್ಞೆ' ಎಂದು ತಿಳಿಸಿ ಬಾಗಿಲು ತೆರೆಸಲು ಹೇಳಿದಳು. ಆ ನಂಬಿಕೆಯ ಸೈನಿಕ ತನ್ನ ಒಡತಿಯ ಆದೇಶವನ್ನು ನಿಷ್ಠೆಯಿಂದ ನಿರ್ವಹಿಸಿದನು. ಆದರೆ ದುರಾದೃಷ್ಟವಶಾತ್ ನಾಯಕನ

"ಅತ್ತಿಗೆ ಮಾಡಿದ ಉಪಕಾರ ನಾನೆಂದೂ ಮರೀಲಿಕ್ಕಿಲ್ಲ. ಅದ್ಭುತವಾದ್ದನ್ನೇ ತೋರಿಸಿದ್ರುವ್ರು. ವ್ಹಿಸ್ಪರ್ ತಂದಂದಿಂದ ಇನ್ನೀಗ ಒದ್ದೆಯಾಗುವ ಬಟ್ಟೆಯ ನಾಪ್ಕಿನ್‌ನಿಂದ ಪಾಡು ಪಡ್ಬೇಗಿಲ್ಲ ನಾನು."



"ಮೊದಲ ಬಾರಿ ಅತ್ತಿಗೆ ವ್ಹಿಸ್ಪರ್ ಬಗ್ಗೆ ಹೇಳಿದ್ದು ನಂಗಿನ್ನೂ ಚೆನ್ನಾಗಿ ನೆನ್ಪಿದೆ. ಆದೊಮ್ಮೆ ಅಣ್ಣನ ಮನೆಗ್ಹೋದಾಗ ನಾನು ಹೊರಗಾದೆ. ಬಟ್ಟೆ



ಬೇಕೆಂದು ಅತ್ತೀಗೆನ್ನ ಕೇಳ್ದೆ. ಅವ್ರ ಆಶ್ಚರ್ಯಕ್ಕೆ ಮೇರೆ ಇರ್ಲಿಲ್ಲ". ಬೆರಗಾಗಿ ಕೇಳಿದ್ರು, "ಏನಂತೀಯಾ ಶೀಲಾ ನೀನು! ಬಟ್ಟೆ ಉಪಯೋಗಿಸೋದೆ! ಹೇಗಪ್ಪಾ ನೀನು ತೇವವನ್ನು ಸಹಿಸ್ತಿ?"

"ಆದ್ರೆ ಅತ್ತಿಗೆ. ರೆಡಿಮೇಡ್ ನ್ಯಾಪ್‌ಕಿನ್‌ನಿಂದ್ಲೂ ತೇವ ಇದ್ದದ್ದೇ ಅಲ್ವೇ" ನಾನು ಕೇಳಿದೆ. ಅತ್ತಿಗೆ ಹೇಳಿದರು. "ಈಗ ತಿಳೀತು ನೀನೀವರ್ಗೆ ವ್ಹಿಸ್ಪರ್ ಟ್ರೈಮಾಡಿಲ್ಲ.

"ಅತ್ತಿಗೆ. ವ್ಹಿಸ್ಪರ್‌ನಲ್ಲಿ ಅದೇನಿದೆ ವಿಶೇಷ?" ನಾನೂ ಕೇಳಿಯೇ ಬಿಟ್ಟೆ.

"ಅದ್ವೇಗೆ ವ್ಹಿಸ್ಪರ್‌ನ ವಿಶೇಷ ಹೊರ ಆವರಣ ಡ್ರೈ-ವೀವ್ ತೇವವನ್ನು ಹೀರಿಕೊಳ್ತದೆ ಮತ್ತು ಆ ತೇವವನ್ನು ಮೈಗೆ ತಗಲದಂತಿರಿಸ್ತದೆ. ಆದ್ರಿಂದ್ಲೇ ಅಷ್ಟು ಶುಷ್ಕ ಅನುಭವ ಆಗ್ತದೇಂತ ಅತ್ತಿಗೆ ವಿವರಿಸಿ ಹೇಳಿದ್ರು."



ಡ್ರೈ-ವೀವ್



"ಒಂದು ಪ್ಯಾಕನ್ನಿತ್ತು ವ್ಹಿಸ್ಪರ್ ಅಂದೇ ಬಳಸಿ ನೋಡುವಂತೆ ಅತ್ತಿಗೆ ಒತ್ತಾಯಿಸಿದ್ರು. ನಾನೂ ಖುಷಿಯಿಂದ ತಗೊಂಡು ನೋಡಿಯೇ ಬಿಟ್ಟೆ. ಭಾರೀ ವ್ಯತ್ಯಾಸವನ್ನೇ ಕಂಡುಕೊಂಡೆ."

ರೆಗ್ಯುಲರ್ ಎಕ್ಸ್‌ಟ್ರಾ ಲಾಂಗ್




**ಶುಷ್ಕ ಆರಾಮ ಪಡೆಯಿರಿ, ತೇವವೆಂದರೇನೆಂದೇ ಮರೆಯುವಿರಿ.**

ವ್ಹಿಸ್ಪರ್ ಅಥವಾ ನಾರಿ ಆರೋಗ್ಯದ ವಿಷಯದಲ್ಲಿ ಹೆಚ್ಚಿನ ಮಾಹಿತಿಗಾಗಿ ಬರೆಯಿರಿ:
ಮಿಸ್ ವ್ಹಿಸ್ಪರ್ ಸರ್ವಿಸ್, ಜಿ.ಪಿ.ಒ. ಬಾಕ್ಸ್ ನಂ. 1919. ಮುಂಬಯಿ 400 001.

ಕೇವಲ ವ್ಹಿಸ್ಪರ್ ಶುಷ್ಕ ಆರಾಮದ ಅನುಭವ ಹೇಗೆ ನೀಡುವುದೆಂದು ನೀವೇ ನೋಡಿ ತಿಳಿಯಿರಿ.

ಒಂದು ಸಣ್ಣ ಚಮ್ಮಚ ತುಂಬಾ ದ್ರವವನ್ನು ನಾವು ವ್ಹಿಸ್ಪರ್‌ನ ಮೇಲೆ ಸುರಿದೆವು.

ಮತ್ತು ಅರ್ಧ ಚಮ್ಮಚದಷ್ಟನ್ನು ಬಟ್ಟೆಯಿಂದ ಮಾಡಿದ ನ್ಯಾಪ್‌ಕಿನ್‌ನ ಮೇಲೆ ಸುರಿದೆವು.

ಆನಂತರ ಎರಡರ ಮೇಲೂ ಒಂದೊಂದು ಕರ್ಚೀಫನ್ನಿರಿಸಿ ಮೆಲ್ಲನೇ ಒತ್ತಿದೆವು.

ವ್ಹಿಸ್ಪರ್



ಬಟ್ಟೆ



ಫಲಿತಾಂಶ ನಿಮ್ಮ ಕಣ್ಣೆದುರಿಗೇ ಇದೆ.

ವ್ಹಿಸ್ಪರ್‌ನ ಡ್ರೈವೀವ್ ದ್ರವವನ್ನು ಒಳಗಡೆ ಹಿಡಿದುಕೊಂಡಿದೆ. ಆದುದರಿಂದ ವ್ಹಿಸ್ಪರ್ ಮೇಲಿನ ಕರ್ಚೀಫ್ ಶುಷ್ಕ ಹಾಗೂ ಒಣದಾಗಿದೆ. ಆದರೆ ಬಟ್ಟೆಯಿಂದ ಮಾಡಿದ ನ್ಯಾಪ್‌ಕಿನ್‌ನ ಮೇಲಿರಿಸಿದ ಕರ್ಚೀಫ್ ಒದ್ದೆಯಾಗಿದೆ.

ಗೂಢಚಾರರ ಕೈಗೆ ಸಿಕ್ಕಿ ಬಿದ್ದನು. ಆ ಕಡೆ ಚಿತ್ರದುರ್ಗದ ಸೈನ್ಯ 'ಜೇಬಿ' ಕೋಟೆ ಬಾಗಿಲಲ್ಲಿ ನುಗ್ಗಿತು. ವಿಷಯ ತಿಳಿದ ದಾದಯ್ಯ ನಾಯಕನು ಕೋಟೆಯ ಎಲ್ಲ ಬಾಗಿಲುಗಳನ್ನು ತೆಗೆಸಿ ತನ್ನ ಸೈನ್ಯವನ್ನು ಹುರಿದುಂಬಿಸಿ ಹೋರಾಟಕ್ಕೆ ಕಳುಹಿಸುತ್ತಿದ್ದನು.

ಆ ಸಮಯಕ್ಕೆ ಗೂಢಚಾರರು ತಾವು ಹಿಡಿದ ರಾಣಿಯ ಬಂಟನನ್ನೂ ಮುದ್ರೆಯುಂಗುರ ಸಮೇತ ಹಿಡಿದು ತಂದರು. ದಾದಯ್ಯ ನಾಯಕನಲ್ಲಿ ರಾಣಿಯ ವಿದ್ರೋಹದ ಪಿತೂರಿಯನ್ನೂ ಅರಿಕೆ ಮಾಡಿಕೊಂಡಾಗ, ನಾಯಕನಿಗೆ ಒಮ್ಮೆಲೇ ಸಾವಿರ ಸಿಡಿಲುಗಳು ಬಡಿದಂತಾಯಿತು. ನಾಯಕನಿಗಾದರೋ ಹೆಂಡತಿಯ ಮೇಲೆ ಅಗಾಧವಾದ ಪ್ರೇಮ, ತನ್ನ ಪ್ರೀತಿಯ ರಾಣಿ ಇಂತಹ ದ್ರೋಹ ಬಗೆದಳೇ? ಎಂದು ದಿಗ್ಭ್ರಾಂತ ನಾದನು. "ಒಂದು ಕಡೆ ಅಪರಾಧಿಯಾಗಿ ನಿಂತಿರುವ ತನ್ನ ಪ್ರೀತಿಯ ಹೆಂಡತಿ, ಮತ್ತೊಂದು ಕಡೆ ದೇಶ ದ್ರೋಹಿಯನ್ನು ಶಿಕ್ಷಿಸಿ, ನಾಡನ್ನು ರಕ್ಷಿಸುವ ಕರ್ತವ್ಯದ ದೃಷ್ಟಿ', ಇವೆರಡರ ಮಧ್ಯೆ ಅವನ ಮನಸ್ಸು ಏನು ಮಾಡಲೂ ತೋಚದೆ ಗಾಳಿಗೊಡ್ಡಿದ ದೀಪದಂತೆ ಹೊಯ್ದಾಡಿತು. ಮರುಕ್ಷಣವೇ ಚೇತರಿಸಿಕೊಂಡು, ಕರ್ತವ್ಯದ ಕರೆಗೆ ಓಗೊಟ್ಟು ಹೆಂಡತಿಯಾದರೂ ಅಪರಾಧಿ ಅಪರಾಧಿಯೇ, ತಾನು ನ್ಯಾಯವನ್ನು ಉಳಿಸಬೇಕು,ರಾಷ್ಟ್ರದ ದ್ರೋಹಿಗೆ ಶಿಕ್ಷೆಯಾಗಲೇಬೇಕು. ಪ್ರಿಯ ಪತ್ನಿಗಿಂತಲೂ, ತನ್ನ ನಾಡು, ನೆಲ, ತನ್ನ ಪ್ರಜೆ ಮತ್ತು ನ್ಯಾಯವೇ ಮುಖ್ಯವೆಂದು ನಿರ್ಧರಿಸಿದ ನಾಯಕನು, ಹೊನ್ನಾಯಿಕೆ ನಾಯಕಿಯನ್ನು ಹುಡುಕಿ ಕೊಂಡು ಅಂತಃಪುರಕ್ಕೆ ಓಡಿದನು. ರಾಣಿಯನ್ನು ಎಳೆದುಕೊಂಡು ನೇರವಾಗಿ 'ಆನೆಹೊಂಡ'ದ ಕೆಳ ಭಾಗದಲ್ಲಿರುವ ಜಲಪಾತದ ಮೇಲಿರುವ 'ಬತೇರಿ'ಗೆ ಬಂದನು. ಕೋಟೆಯ ದಕ್ಷಿಣ ಭಾಗದಲ್ಲಿ ಘೋರವಾದ ಯುದ್ಧ ನಡೆಯುತ್ತಿತ್ತು. ಅದನ್ನು ರಾಣಿಗೆ ತೋರಿಸುತ್ತ 'ನೋಡು, ನಿನ್ನ ದೊಡ್ಡ ದೇಶದ ದಡ್ಡ ಜನರು ಸಣ್ಣತನದಲ್ಲಿ ಕಿತ್ತಾಡುತ್ತಿರುವುದನ್ನು ನೋಡು ಬಾ, ನಿನ್ನ ವಿದ್ರೋಹದಿಂದ ನನ್ನ ನೆಲದಲ್ಲಿ ಅಮಾಯಕ ಜನರ ರಕ್ತಪಾತವಾಗುತ್ತಿದೆ ನೋಡು' ಎನ್ನುತ್ತಾನೆ. ನಿನ್ನಂತಹ ದೇಶದ್ರೋಹಿಯು ಉಳಿಯತಕ್ಕವಳಲ್ಲ, ದ್ರೋಹವನ್ನು ಮಾಡಿದವರು ಯಾರೇ ಇರಲಿ ಅವರಿಗೆ ಶಿಕ್ಷೆಯಾಗಲೇ ಬೇಕು. ನನಗೆ ನನ್ನ ಪ್ರಜಾಹಿತ, ನೆಲದ ರಕ್ಷಣೆ ಮತ್ತು ನ್ಯಾಯ ಇದೇ ನನ್ನ ಮುಖ್ಯ ಧ್ಯೇಯ. ಇದೇ ನಿನ್ನ ಕೊನೆ ಎಂದವನೇ ಮೇಲಿನ 'ಬತೇರಿ'ಯಿಂದ ಕೆಳಗಿನ ಪ್ರಪಾತಕ್ಕೆ ದೂಡಿಬಿಟ್ಟನು. ಉತ್ಸವಾಂಬೆಯೇ ಮೈ ತಳೆದವನಂತೆ ಭೂಮಿ, ಆಕಾಶ ಒಂದಾಗುವಂತೆ ಗರ್ಜಿಸುತ್ತ ವೀರಾವೇಶದಿಂದ ಸೈನಿಕರನ್ನು ಹುರಿದುಂಬಿಸುತ್ತ ಹೋರಾಡಿದನು. ಅವನ ಯುದ್ಧವೈಖರಿಗೆ ಚಿತ್ರದುರ್ಗದ ಸೈನ್ಯ ಓಡಿ ಹೋಯಿತು.

ಯುದ್ಧದಲ್ಲಿ ದಾದಯ್ಯ ನಾಯಕನು ವಿಜಯ ಶಾಲಿಯಾದನು. ತನ್ನ ಹೆಂಡತಿಯ ವಿದ್ರೋಹದ ಅವಮಾನವನ್ನು ದೂರ ಓಡಿಸಿದ ತನ್ನ ವೀರತನ, ಶೌರ್ಯ, ಸಾಹಸಗಳೊಡನೆ ನ್ಯಾಯ, ಧರ್ಮ, ವಿವೇಚನಾ ಶಕ್ತಿಯನ್ನು ಪ್ರಕಟಿಸಿದನು. ಹೊನ್ನಾಯಿಕೆ ನಾಯಕಿ ಬಿದ್ದ ಆ ಪ್ರಪಾತವೇ ಮುಂದೆ 'ಹೊನ್ನಿ ಝರಿ' ಎಂದು ಪ್ರಸಿದ್ಧಿಯಾಯಿತು. ಇಂದಿಗೂ ಹೊನ್ನಿ ಝರಿ ನೋಡಲು ರುದ್ರ ಮನೋಹರ ದೃಶ್ಯ. ಆದರೆ ಅದರ ಹಿಂದಿರುವ ಇತಿಹಾಸದ ಘಟನಾವಳಿಗಳನ್ನು ನೆನೆದಾಗ ನಾಯಕನಿಗಿದ್ದ ರಾಷ್ಟ್ರಾಭಿಮಾನ, ಕಾರ್ಯ ದಕ್ಷತೆ, ನ್ಯಾಯಾಡಳಿತ ಕಣ್ಣಿಗೆ ಕಟ್ಟುತ್ತದೆ. ಆ ಘಟನೆಗಳು ಮನಃಪಟಲದಲ್ಲಿ ಸುಳಿದಾಗ ಮನಸ್ಸು ಮೂಕವಾಗುತ್ತದೆ; ಹೃದಯ ಭಾರವಾಗುತ್ತದೆ.

ಕಣಿವೆಕೆರೆ, ಹಾಲಮ್ಮನ ತೋಪಿಗೆ ಹೋಗುವ ದಾರಿಯಲ್ಲಿದೆ. ಈ ಕಣಿವೆ ಕೆರೆಯಲ್ಲಿರುವ ಶಾಸನದ ಪ್ರಕಾರ ಇದಕ್ಕೆ ಮೊದಲು 'ಕನ್ನಿಕೆಯರ ಕೆರೆ' ಎಂದು ಕರೆಯುತ್ತಿದ್ದರೆಂದು ತಿಳಿಯುತ್ತದೆ. ಈ ಶಾಸನದ ಪ್ರಕಾರ ಮೂವರು ಕನ್ನಿಕೆಯರು ಈ ಕೆರೆಗೆ ಆತ್ಮಾಹುತಿ ಮಾಡಿಕೊಂಡಿದ್ದಾರೆ. ಅದರಲ್ಲಿ ಒಬ್ಬಳ ಹೆಸರು 'ಉಚ್ಚಂಗಿ ಅಚ್ಚೆ' ಎಂದು. ಮುಂದೆ ಅದೇ ಹೆಸರಿನಿಂದಲೇ 'ಉಚ್ಚಂಗಿ ದುರ್ಗ' ಎಂದು ಹೆಸರು ಈ ದುರ್ಗಕ್ಕೆ ಬಂದಿತೆಂದು ತಿಳಿದು ಬರುತ್ತದೆ.

ಚಿತ್ರದುರ್ಗಕ್ಕೂ, ಉಚ್ಚಂಗಿ ದುರ್ಗಕ್ಕೂ ಯಾವಾಗಲೂ ಬಿಡಿಸದ ನಂಟು. ಶ್ರೀ ಉತ್ಸವಾಂಬೆಯ ಮೂರ್ತಿಯನ್ನು ಚಿತ್ರದುರ್ಗದಲ್ಲಿ ಪ್ರತಿಸ್ಥಾಪಿಸಿದ್ದಾರೆ. ಅದು ಈ ದುರ್ಗದ್ದೇ ಎಂದು ಹೇಳುತ್ತಾರೆ. ಆದರೆ ಅದು ಯಾವ ಕಾರಣಕ್ಕಾಗಿ ಅಲ್ಲಿ ನೆಲಸಿದಳೆಂದು ಸರಿಯಾಗಿ ಮಾಹಿತಿ ಇಲ್ಲ.

ಅರಿಶಿಣ, ಕುಂಕುಮಗಳು ದೇವಿಯ ಪೂಜೆಗೆ, ವಿಶಿಷ್ಟವಾಗಿವೆ. ಪ್ರತಿ ಹುಣ್ಣಿಮೆ, ಜಾತ್ರೆ, ಹಬ್ಬ, ವಾರಗಳಲ್ಲಿ ದೇವಿಯ ಪೂಜೆಗೆ ಈ ಮಂಗಳ ದ್ರವ್ಯಗಳು ಬೇಕೇ ಬೇಕು. ಅಂತಹ ಅರಿಶಿಣ ಕುಂಕುಮದ ಹಾಗೂ ತೆಂಗಿನಕಾಯಿ, ಹಣ್ಣುಗಳ ರಾಶಿ ರಾಶಿ ಅಂಗಡಿಗಳ ಸಾಲು, ಸಾಲೇ ಕಂಡು ಬರುತ್ತವೆ. ಮಾತೆಯ ಮತ್ತೊಂದು ವೈಶಿಷ್ಟ್ಯವೆಂದರೆ ದೇವಿಯ ಜೋಗತಿಯರು. ಇವರಲ್ಲಿ ಗಂಡು ಜೋಗತಿಯರು, ಹೆಣ್ಣು ಜೋಗತಿಯರೂ ಇದ್ದಾರೆ. ಗಂಡಸರಿಗೂ ದೇವಿಯ ಮಹಿಮೆಯೊ ಏನೋ ಅಂತೂ ಅವರಿಗೂ ಜಡೆ ಬೆಳೆದಿರುತ್ತದೆ. ಅವರಿಗೆ ಅರಿಯದಂತೆ ಸೀರೆ ಕುಪ್ಪಸ ತೊಟ್ಟು ಬಳೆ ಹಾಕಿ, ಅರಿಶಿಣ ಕುಂಕುಮ ಹಚ್ಚಿಕೊಂಡು ದೇವಿಯ ಜೈಕಾರದೊಂದಿಗೆ ಆಕೆಯ ಮಹಿಮೆಯನ್ನು ಎಲ್ಲೆಡೆಗೆ ಸಾರುತ್ತಾರೆ. ಚಿಕ್ಕ ಚಿಕ್ಕ ಮಕ್ಕಳಿಗೂ ಈ ರೀತಿ ಜಡೆ ಬೆಳೆದು ಅವರು ದೇವಿಯ ಭಕ್ತರಾಗುತ್ತಾರೆ. ಅಮ್ಮನ ಹಬ್ಬ, ಜಾತ್ರೆ ಆಗುವಲ್ಲೆಲ್ಲಾ ಇವರು ಇದ್ದೇ ಇರುತ್ತಾರೆ. ಪ್ರತಿ ಹುಣ್ಣಿಮೆ ಇವರು ಗಿರಿ ಹತ್ತಿ ಬರಲೇಬೇಕು. ಈ ಜೋಗತಿಯರಲ್ಲಿ ಮದುವೆಯಾದವರು, ಆಗದಿದ್ದವರು ಇದ್ದಾರೆ. ಇವರೆಲ್ಲರೂ ದೇವಿಯ (ಚೌಡಿಕೆ ಪದಗಳು) ಪದಗಳನ್ನು ಹಾಡುತ್ತಾ ಊರುಗಳಲ್ಲೆಲ್ಲಾ, ದವಸ ಧಾನ್ಯ ಎತ್ತುತ್ತಾ ತಮ್ಮ ಜೀವನ ನಡೆಸುತ್ತಾರೆ. ಇವರು ನೀರು ತುಂಬಿದ ಬಿಂದಿಗೆಗೆ ದೇವಿಯ ಬೆಳ್ಳಿಯ ಮುಖವನ್ನು ಹಾಕಿ ವಿಶೇಷವಾಗಿ ಪೂಜೆ ಮಾಡಿರುತ್ತಾರೆ. ಪ್ರತಿ ಮಂಗಳವಾರ, ಶುಕ್ರವಾರ ಇವರು ಮನೆ ಮನೆಗಳಿಗೆ ಹೋಗುತ್ತಾರೆ. 'ಅವರು ಅಂದು ಊರಲ್ಲಿ ಹೋಗಬೇಕೆಂದು ದೇವಿಗೆ ಮನಸ್ಸಿದ್ದರೆ ಮಾತ್ರ ದೇವಿಯ ಬಿಂದಿಗೆ ಹಗುರವಾಗಿ ಮೇಲೆ ಬರುವುದಂತೆ. ಇಲ್ಲದಿದ್ದರೆ ಏನು ಮಾಡಿದರೂ ಬಿಂದಿಗೆ ಎತ್ತಲೂ ಆಗಲಾರದಂತೆ' ಹಾಗೆಂದು ಈ ಜೋಗತಿಯರು ಹೇಳುತ್ತಾರೆ.

ಶ್ರೀ ಕ್ಷೇತ್ರದಲ್ಲಿ ಸಾಕಷ್ಟು ಶಾಸನಗಳು ಮತ್ತು ಮಾಸ್ತಿ ಕಲ್ಲುಗಳು ಇವೆ. ಅವುಗಳ ಬಗ್ಗೆ ಈ ವರೆಗೂ ದೀರ್ಘವಾದ ಅಧ್ಯಯನ ನಡೆದಿಲ್ಲ. ಸಂಶೋಧನೆ ನಡೆಸಿದರೆ ಇನ್ನೂ ಎಷ್ಟೋ ವಿಚಾರಗಳು ತಿಳಿಯ ಬಹುದು.

ಟಿ.ಎಚ್. ವೀಣಾ, ಅಸಗೋಡು

## "ಶ್ರೀಮತಿ ಪದ್ಮಾ ಶೆಣೈಯವರ ವಿದೇಶ ಪ್ರವಾಸ – ಸಂವಾದ"




"ವಿದೇಶೀಯರಿಂದ ನಾವು ಕಲಿಯುವಂತದ್ದು ಸಾಕಷ್ಟಿದೆ. ಅಲ್ಲಿನ ಧಾರ್ಮಿಕ ಕ್ರಿಯೆಗಳಿಗೆ ಸಾಂಸ್ಕೃತಿಕ ಹಿನ್ನಲೆಗಳು ಇಲ್ಲದಿದ್ದರೂ ಎಲ್ಲಾ ನೋವುಗಳನ್ನು ಮರೆತು ಎಲ್ಲರೂ ಒಂದಾಗಿ ಸಂಭ್ರಮಿಸುವ ರೀತಿ ಮೆಚ್ಚುವಂತದ್ದು. ಕ್ರೌರ್ಯ, ಅತ್ಯಾಚಾರ, ಮುಕ್ತ ಲೈಂಗಿಕತೆ ಇವೆಲ್ಲಾ ಸಾಕಷ್ಟಿದ್ದರೂ ಅವರ ಸ್ವಚ್ಛತೆ, ಶಿಸ್ತು, ಕಾರ್ಯದಕ್ಷತೆ, ಸಾಹಸ ಮನೋಭಾವ ಗಮನೀಯವಾದುದು ಹಾಗೂ ಅನುಕರಣೀಯ" ಎಂದು ಪ್ರಸಿದ್ಧ ಕಾದಂಬರಿಗಾರ್ತಿ ಶ್ರೀಮತಿ ಪದ್ಮಾ ಶೆಣೈಯವರು ನುಡಿದರು.

ಇಲ್ಲಿನ ಸರ್ಕಾರಿ ಕಾಲೇಜು, ಹಂಪನಕಟ್ಟೆ, ಇಲ್ಲಿ ತಾ. 18–7–92ರಂದು "ಕರಾವಳಿ" ಲೇಖಕಿಯರ–ವಾಚಕಿಯರ ಸಂಘ [ದ.ಕ. ಮತ್ತು ಕಾಸರಗೋಡು]ವು ಏರ್ಪಡಿಸಿದ್ದ "ಶ್ರೀಮತಿ ಪದ್ಮಾ ಶೆಣೈಯವರ ವಿದೇಶ ಪ್ರವಾಸದ ಕುರಿತು ಸಂವಾದ" ಕಾರ್ಯಕ್ರಮದ ಮುಖ್ಯ ಅತಿಥಿಯಾಗಿ ಅವರು ಮಾತನಾಡಿದರು. ಕೆಲವು ತಿಂಗಳುಗಳ ಹಿಂದೆ ಲಂಡನ್ ಪ್ರವಾಸದಿಂದ ಮರಳಿದ ಅವರು ತಮ್ಮ ಪ್ರವಾಸದ ಅನುಭವಗಳನ್ನು ನೆರೆದಿದ್ದವರೊಂದಿಗೆ ಹಂಚಿಕೊಂಡರು. ಅಲ್ಲಿನ ಜನ ಜೀವನ, ಮಹಿಳೆಯರ ಬದುಕು, ಸಾಮಾಜಿಕ ಚಿಂತನೆಗಳು, ಸಾಹಿತ್ಯ ಸಂಘಟನೆಗಳು ಕುರಿತಂತೆ ನಡೆದ ಸಂವಾದದಲ್ಲಿ ಅವರು ಸೂಕ್ತವಾಗಿ ಪ್ರತಿಕ್ರಿಯಿಸಿದರು.

ಕಾರ್ಯಕ್ರಮದಲ್ಲಿ ಶ್ರೀಮತಿ ಚಂದ್ರಕಲಾ ನಂದಾವರ, ಆನಂದಿ ಸದಾಶಿವರಾವ್, ಎ.ಪಿ. ಮಾಲತಿ, ವತ್ಸಲಾ ತಾಳಿತ್ತಾಯ, ರತ್ನಾ ಜಿ.ಕೆ. ಶೆಟ್ಟಿ, ಜಯಲಕ್ಷ್ಮಿ ಎಂ.ವಿ. ನಾಗರತ್ನ, ಭಾರತಿ ಹಾಗೂ ಶ್ರೀ ಶ್ರೀನಿವಾಸ ಪ್ರಭು ಮುಂತಾದವರೂ ಉಪಸ್ಥಿತರಿದ್ದರು.

ಶ್ರೀಮತಿ ಮೋಹಿನಿ ಮಂಜುನಾಥ್ ಸ್ವಾಗತಿಸಿದರು. ಶ್ರೀಮತಿ ಸಾರಾ ಅಬೂಬಕ್ಕರ್ ಪ್ರಸ್ತಾವನೆಗೈದರು. ಶ್ರೀಮತಿ ಸುಲೋಚನಾ ಆರ್. ಬಲ್ಲಾಳರಿಂದ ಪ್ರಾರ್ಥನೆ, ಡಾ। ಕೆ.ಪಿ. ಜಲಜಾಕ್ಷಿಯವರಿಂದ ಕಾರ್ಯಕ್ರಮ ನಿರ್ವಹಣೆ, ಕು॥ ಮನೋರಮಾ ರೈಯವರಿಂದ ವಂದನಾರ್ಪಣೆ ನಡೆಯಿತು.

ಅ.ನಾ. ಪೂರ್ಣಿಮಾ
ಮಂಗಳೂರು






## ಭಾರತೀಯ ವೈದ್ಯೆಯ ಸಾಧನೆ

**ಪ್ರಸ್ತುತ ಅಮೆರಿಕದಲ್ಲಿ ನ್ಯಾಷನಲ್ ಇನ್‌ಸ್ಟಿಟ್ಯೂಟ್ ಆಫ್ ಚೈಲ್ಡ್ ಹೆಲ್ತ್ ಅಂಡ್ ಹ್ಯೂಮನ್ ಡೆವಲಪ್‌ಮೆಂಟ್‌ನಲ್ಲಿ ಉದ್ಯೋಗಿಯಾಗಿರುವ ಶ್ರೀಮತಿ ಸರ್ವಮಂಗಳಾ ಮಕ್ಕಳಿಗೆ ಹಾಗೂ ದೊಡ್ಡವರಿಗೆ ತಗಲುವ 'ಮೆನಿಂಜೈಟಿಸ್' ಎಂಬ ಮಿದುಳು ವ್ಯಾಧಿಯ ವಿರುದ್ಧ ಲಸಿಕೆಯನ್ನು ಸಂಶೋಧಿಸಿ ಅಂತರರಾಷ್ಟ್ರೀಯ ಮನ್ನಣೆಗೆ ಪಾತ್ರರಾಗಿದ್ದಾರೆ. ಮಣಿಪಾಲದ ಕಸ್ತೂರ್ಬಾ ಮೆಡಿಕಲ್ ಕಾಲೇಜಿನ ಪದವೀಧರೆಯಾದ ಈಕೆ ಹುಹರಪುರದ ನೀಲಕಂಠ ಭಟ್ಟ ಅವರ ಪುತ್ರಿ.**

ಜೀವನದಲ್ಲಿ ಮಹತ್ಕಾರ್ಯವನ್ನು ಸಾಧಿಸಬೇಕೆಂಬುದು ಹೆಚ್ಚಿನವರ ಅಭಿಲಾಷೆ ಆಗಿರುತ್ತದಾದರೂ ಅದಕ್ಕೆ ಬೇಕಾದ ಪ್ರಯತ್ನವನ್ನು ಮಾಡದೆ ಯಶಸ್ಸು ಕಾಣದಿರುವವರು ಹಲವು ಮಂದಿ. ಅದರಲ್ಲೂ ಗುರಿ ಸಾಧಿಸಲು ಬೇಕಾದ ಎಲ್ಲ ಕಠಿಣ ಶ್ರಮವನ್ನು ಬಹು ಸಮಯದಿಂದ ವಹಿಸುತ್ತಾ ಅದರಲ್ಲಿ ಕಾರ್ಯ ಸಾಧಿಸಿ ಮುನ್ನಡೆದು ಸಂಪೂರ್ಣ ಯಶಸ್ಸು ದೊರಕಿಸಿಕೊಂಡವರು ವಿರಳ. ಇಂಥವರ ಸಾಲಿಗೆ ಸೇರುವ ಡಾ। ಸರ್ವಮಂಗಳಾದೇವಿಯವರು ಇತ್ತೀಚೆಗೆ 'ಮೆನಿಂಜೈಟಿಸ್' ಎಂಬ ಮಿದುಳು ಸಂಬಂಧಿತ ರೋಗಕ್ಕೆ ಲಸಿಕೆ ಕಂಡುಹಿಡಿದು ವಿಶ್ವವಿಖ್ಯಾತರಾಗಿದ್ದಾರೆ.

ಕ್ರಿಪ್ಟೋಕಾಕಸ್ ನಿಯೋಫಾರ್ಮ್ಯಾನ್ಸ್ ಎಂಬ ರೋಗಾಣುವಿನಿಂದ ದೊಡ್ಡವರಲ್ಲಿ ಉಂಟಾಗುವ ಮೆನಿಂಗೋಎನ್‌ಸೆಫಲೈಟಿಸ್ ಎಂಬ ರೋಗಕ್ಕೆ ಲಸಿಕೆ ಕಂಡುಹಿಡಿದಿದ್ದು, ಈ ವೈಜ್ಞಾನಿಕ ಲೇಖನಗಳು ಪ್ರಸಿದ್ಧ ಅಂತಾರಾಷ್ಟ್ರೀಯ ವೈಜ್ಞಾನಿಕ ಪತ್ರಿಕೆಗಳಾದ "ಪ್ರೊಸೀಡಿಂಗ್ಸ್ ಆಫ್ ದ ನ್ಯಾಷನಲ್ ಅಕಾಡೆಮಿ ಆಫ್ ಸೈನ್ಸಸ್, ಯು.ಎಸ್.ಎ" ಹಾಗೂ "ಇನ್‌ಫೆಕ್ಷನ್ ಅಂಡ್ ಇಮ್ಯುನಿಟಿ"ಯಲ್ಲಿ ಪ್ರಕಟವಾಗಿವೆ. ಅಮೆರಿಕಾದ ರಾಜಧಾನಿಯಿಂದ ಪ್ರಕಟವಾಗುವ "ವಾಷಿಂಗ್ಟನ್ ಪೋಸ್ಟ್", "ಜರ್ನಲ್ ಆಫ್ ಅಮೆರಿಕನ್ ಮೆಡಿಕಲ್ ಅಸೋಸಿಯೇಷನ್" ಹಾಗೂ "ಸೈನ್ಸ್ ಟೆಕ್ನಾಲಜಿ ಕಾನ್ಸನ್‌ಟ್ರೇಟ್ಸ್" ಮುಂತಾದ ಜನಪ್ರಿಯ ಪತ್ರಿಕೆಗಳು ಇವರ ಸಂಶೋಧನೆಗಳನ್ನು ಮೆಚ್ಚಿ ಪ್ರಶಂಸಿಸಿವೆ. "ವಾಷಿಂಗ್ಟನ್ ಪೋಸ್ಟ್" ಪತ್ರಿಕೆಯಲ್ಲಿ ಇವರ ಸಂಶೋಧನೆಯ ಬಗ್ಗೆ ವರದಿಯಾದಂತೆ ಅಮೆರಿಕಾದ ಸಂಶೋಧನಾ ಸಂಸ್ಥೆಯ (ಎನ್.ಐ.ಸಿ.ಹೆಚ್.ಡಿ) ಸಂಶೋಧನಾ ನಿರ್ದೇಶಕರಾದ ಡಾ। ಆರ್ಥರ್ ಎಸ್. ಲೇವಿಯವರು "ಬೌದ್ಧಿಕ ಹಾಗೂ ಕಲ್ಪನಾ ಸಾಮರ್ಥ್ಯದ ದೃಷ್ಟಿಯಿಂದ ತುಂಬಾ ಪ್ರೋತ್ಸಾಹಕರ ವಿಷಯವಿದು" ಎಂದೂ, ಮತ್ತು ಅದೇ ಸಂಸ್ಥೆಯ ವಕ್ತಾರರೊಬ್ಬರು "ಮೆನಿಂಜೈಟಿಸ್‌ನ ನಾಲ್ಕು ವಿಧದ ರೋಗ ಲಕ್ಷಣಗಳ ವಿರುದ್ಧ ಸಮರ್ಥವಾದ ಒಂದೇ ಲಸಿಕೆ ಅಭಿವೃದ್ಧಿಗೊಳಿಸಿರುವುದು ಇದೇ ಮೊದಲು" ಎಂದಿರುತ್ತಾರೆ. ಕ್ರಿಪ್ಟೋ ಕಾಕಲ್ ಮೆನಿಂಗೋಎನ್‌ಸೆಫಲೈಟಿಸ್‌ನ ವಿರುದ್ಧ ಡಾ। ಸರ್ವಮಂಗಳಾದೇವಿಯವರು ಕಂಡುಹಿಡಿದಿರುವ ಲಸಿಕೆಯನ್ನು ಮನುಷ್ಯರಲ್ಲಿ ಉಪಯೋಗಿಸಲು ಅಮೆರಿಕಾದ 'ಫುಡ್ ಅಂಡ್ ಡ್ರಗ್ ಅಡ್ಮಿನಿಸ್ಟ್ರೇಷನ್" ಸಂಸ್ಥೆ ಅನುಮತಿ ನೀಡಿದ್ದು ಈಗಾಗಲೇ ಸುಮಾರು ಐವತ್ತು ಜನರಿಗೆ ಈ ಲಸಿಕೆಯ ಪ್ರಯೋಗವಾಗಿದ್ದು ಯಾವುದೇ ರೀತಿಯ ತೊಂದರೆಯ ಪರಿಣಾಮವನ್ನುಂಟು ಮಾಡದೇ ಈ ಕಾರ್ಯ ಯಶಸ್ವಿಯಾಗಿದೆಯಲ್ಲದೇ ಇದು ಪ್ರಪಂಚದಾದ್ಯಂತ ಈ ರೋಗದಿಂದ ಸಾಯುತ್ತಿರುವ ಸಾವಿರಾರು ಜನರನ್ನು ರಕ್ಷಿಸಲಿದೆ.

ಚಿಕ್ಕಂದಿನಿಂದಲೇ ಹಲವು ಪ್ರತಿಭಾ ಸ್ಪರ್ಧೆಗಳಲ್ಲಿ ಪ್ರಶಸ್ತಿಗಳನ್ನು ಪಡೆಯುತ್ತಾ ಅಂದಿನಿಂದ ಇಂದಿನವರೆಗೂ ಪ್ರತಿಭಾನ್ವಿತ ವ್ಯಕ್ತಿ ಎನಿಸಿಕೊಳ್ಳುತ್ತಲೇ ಬಂದ ಇವರು ಮೂಡಬಿದ್ರೆಯ ಮಹಾವೀರ ಕಾಲೇಜಿನಲ್ಲಿ ಬಿ.ಎಸ್.ಸಿ. ಪದವಿಯನ್ನು ಪ್ರಥಮ ದರ್ಜೆಯಲ್ಲಿ ಉತ್ತಮ ಅಂಕಗಳನ್ನು ಪಡೆದು, ಕಸ್ತೂರ್ಬಾ ಮೆಡಿಕಲ್ ಕಾಲೇಜಿನಲ್ಲಿ ಎಮ್.ಎಸ್.ಸಿ.ಯಲ್ಲಿ ಸಹ ಪ್ರಥಮರೆನಿಸಿಕೊಂಡು ಅದೇ ಕಾಲೇಜಿನಲ್ಲಿ ಮೈಕ್ರೋಬಯಾಲಜಿ ವಿಭಾಗದಲ್ಲಿ ಅಸಿಸ್ಟೆಂಟ್ ಪ್ರೊಫೆಸರ್ ಆಗಿ ಸೇವೆ ಸಲ್ಲಿಸುತ್ತಾ ಟೈಫಾಯ್ಡ್, ಪ್ಯಾರಾ ಟೈಫಾಯ್ಡ್ ಮತ್ತು ಸಂಬಂಧಿತ ಸೂಕ್ಷ್ಮಾಣು ಜೀವಿಗಳ ಮೇಲೆ ಸಂಶೋಧನೆ ನಡೆಸಿ ಬರೆದ "ಆನ್ ಇನ್‌ವೆಸ್ಟಿಗೇಶನ್ ಇಂಟು ದ ಇನ್ಸಿಡೆನ್ಸ್ ಆಫ್ ಸಾಲ್ಮೊನೆಲ್ಲೋಸಿಸ್ ಇನ್ ಅಂಡ್ ಅರೌಂಡ್ ಸೌತ್ ಕೆನರಾ" ಎಂಬ ಮಹಾಪ್ರಬಂಧಕ್ಕೆ ಮಂಗಳೂರು ವಿಶ್ವವಿದ್ಯಾನಿಲಯದಿಂದ ಪಿ.ಹೆಚ್.ಡಿ. ಪದವಿ ಪಡೆದುದಲ್ಲದೇ, ಇದೇ ಮಹಾಪ್ರಬಂಧವನ್ನು ಅತ್ಯುತ್ತಮ ಸಂಶೋಧನೆಯೆಂದು 1982 ನೇ ಸಾಲಿನ ಡಾ। ಟಿ.ಎಮ್.ಎ. ಪೈ ಸಂಶೋಧನಾ ಸ್ವರ್ಣ ಪದಕವನ್ನು ಕೆ.ಎಮ್.ಸಿ. ಮಣಿಪಾಲ ಇವರಿಂದ ಪಡೆದ ಹೆಮ್ಮೆ ಇವರದ್ದಾಗಿರುತ್ತದೆ. ಅಲ್ಲದೇ ಮೆನಿಂಜೈಟಿಸ್ ರೋಗನಿವಾರಣೆಗೆ ಲಸಿಕೆಯನ್ನು ಕಂಡುಹಿಡಿದುದಕ್ಕೆ 1991ರಲ್ಲಿ "ಡಿಸ್ಟಿಂಗ್ವಿಶ್ಡ್ ಅಚೀವ್‌ಮೆಂಟ್ ಅವಾರ್ಡ್"ನ್ನು ಅಕಾಡೆಮಿ ಆಫ್ ಜನರಲ್ ಎಜುಕೇಶನ್ ಇವರಿಂದ ಪಡೆದುದು ಹೆಗ್ಗಳಿಕೆಗೆ ಪಾತ್ರವಾಗಿದೆ.

ಓದುವುದು, ಫೋಟೋಗ್ರಫಿ, ಕಂಪ್ಯೂಟರ್ ಪ್ರೋಗ್ರಾಮಿಂಗ್ ಮೊದಲಾದುವನ್ನು ಹವ್ಯಾಸವಾಗಿಟ್ಟುಕೊಂಡ ಸರಳ ನಿರಾಡಂಬರಿ ಡಾ। ಸರ್ವಮಂಗಳಾದೇವಿಯವರು ಅಮೆರಿಕಾದಲ್ಲಿ ಬಾಹ್ಯಾಕಾಶ ಕೇಂದ್ರದಲ್ಲಿ (NASA) ಇಂಜಿನಿಯರ್ ಆಗಿರುವ ಪತಿ ಡಾ। ಶ್ರೀನಿವಾಸ ಮೂರ್ತಿ ಹಾಗೂ ಮಗನೊಂದಿಗೆ ಮೇರಿಲ್ಯಾಂಡ್‌ನಲ್ಲಿದ್ದು, ಅಲ್ಲಿಯ ಬೆತೆಸ್ಡಾದಲ್ಲಿರುವ ನ್ಯಾಷನಲ್ ಇನ್ಸಿಟಟ್ಯೂಟ್ ಆಫ್ ಚೈಲ್ಡ್ ಹೆಲ್ತ್ ಅಂಡ್ ಹ್ಯೂಮನ್ ಡೆವಲಪ್‌ಮೆಂಟ್‌ನಲ್ಲಿ ಸಂಶೋಧನೆಯನ್ನು ಮುಂದುವರಿಸುತ್ತಿದ್ದಾರೆ. ಇವರ ಎಪ್ಪತ್ತು ವೈಜ್ಞಾನಿಕ ಲೇಖನಗಳನ್ನು ಈಗಾಗಲೇ ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಪ್ರಸಿದ್ಧ ವೈಜ್ಞಾನಿಕ ಪತ್ರಿಕೆಗಳನ್ನೊಳಗೊಂಡಂತೆ ಅಂತರರಾಷ್ಟ್ರೀಯ ಪ್ರಸಿದ್ಧ ಪತ್ರಿಕೆಗಳೂ ಸಹ ಡಾ। ಸರ್ವಮಂಗಳಾದೇವಿಯವರ ಉನ್ನತ ಸಾಧನೆಯನ್ನು ಪ್ರಕಟಿಸಿ ವಿಶ್ವದ ಜನತೆಗೆ ಇವರ ಈ ಸಂಶೋಧನೆಯ ಮಹತ್ವವನ್ನು ತಿಳಿಸಿ ಇದರಿಂದ ಪ್ರಯೋಜನ ಪಡೆದುಕೊಳ್ಳಲು ಸಹಕಾರಿಯಾಗುವಲ್ಲಿ ಪ್ರಮುಖ ಪಾತ್ರ ವಹಿಸಿಕೊಂಡಿದೆ. ತವರೂರಾದ ಮಲೆನಾಡಿನ ಹುಹರಪುರದ ಸಮಾಜ ಸೇವಾಕರ್ತ ಹಾಗೂ 1992 ನೇ ಮಾರ್ಚ್ 28ರಂದು ದೆಹಲಿಯಲ್ಲಿ ನಡೆದ ಒಂಭತ್ತನೆಯ ರಾಷ್ಟ್ರೀಯ ಕನ್ನಡ ಸಮ್ಮೇಳನದಲ್ಲಿ ದಿ। ಶಂಕರೇಗೌಡ ಸ್ಮಾರಕ ಪ್ರಶಸ್ತಿಯನ್ನು ದೆಹಲಿ ಕನ್ನಡಿಗರಿಂದ ಪಡೆದುಕೊಂಡ ಜಿ.ಓ. ನೀಲಕಂಠ ಭಟ್ಟ ಇವರ ಹೆಮ್ಮೆಯ ಪುತ್ರಿಯಾಗಿ, ತಾಯ್ನಾಡಾದ ಭಾರತಕ್ಕೂ ಮತ್ತು ಭಾರತದ ಜನತೆಗೂ ಹೆಮ್ಮೆ–ಕೀರ್ತಿಗಳನ್ನು ತಂದು ವಿಶ್ವದಲ್ಲೇ ಸುಪ್ರಸಿದ್ಧರಾದುದಕ್ಕೆ ಈಗಾಗಲೇ ಅನೇಕ ಪ್ರಸಿದ್ಧ ಸಂಸ್ಥೆಗಳ ಹೆಸರಿನಿಂದಲೂ ಹಾಗೂ ಹಲವಾರು ಪ್ರತಿಭಾನ್ವಿತ ದೇಶ–ವಿದೇಶೀಯ ವ್ಯಕ್ತಿಗಳಿಂದಲೂ ಅಭಿನಂದನಾ ಪತ್ರಗಳ ಮಹಾಪೂರವೇ ಹರಿದು ಬರುತ್ತಲಿದ್ದು ಇದು ಇವರ ನಿರಂತರ ಕಠಿಣ ಶ್ರಮದಿಂದಾದ ಅದ್ಭುತ ಸಾಧನೆಯ ಮಹತ್ವವನ್ನು ಪ್ರತಿಬಿಂಬಿಸುವುದಲ್ಲದೇ ಅದರ ಪ್ರತಿಫಲದ ತೃಪ್ತಿಯನ್ನು ವಿಶ್ವದ ಜನತೆಯೊಂದಿಗೆ ಸವಿಯುವಂತೆ ಮಾಡಿರುವುದು ಪ್ರಶಂಸನೀಯ ಹಾಗೂ ಗಮನಾರ್ಹ. ಒಬ್ಬಳು ಮಹಿಳೆಯಾಗಿ ಕೇವಲ ಗೃಹಕೃತ್ಯವನ್ನಲ್ಲದೇ ಇತರ ಮಹತ್ಕಾರ್ಯವನ್ನು ಸಾಧಿಸಲು ಅರ್ಹಳೆಂಬುದಕ್ಕೆ ಇವರು ಒಂದು ಉದಾಹರಣೆಯಾಗಿ ಮಹಿಳೆಯರಿಗೆಲ್ಲಾ ಆದರ್ಶಪ್ರಾಯರಾಗಿದ್ದಾರೆ. ಇವರಿಗೆ ಈ ಪಥದಲ್ಲಿ ಇನ್ನೂ ಹೆಚ್ಚಿನ ಕೀರ್ತಿ ಯಶಸ್ಸು ದೊರೆಯಲೆಂದು ಬಯಸುತ್ತೇನೆ.

— ಶ್ರೇಯಾಭಿಲಾಷಿ



(ಕಳೆದ ಸಂಚಿಕೆಯಿಂದ)

ಎಂಪ್ಲಾಯ್‌ಮೆಂಟ್ ಎಕ್ಸ್‌ಚೇಂಜಿನಲ್ಲಿ ಸೀನಿಯಾರಿಟಿ ಇಲ್ಲದೇ ಇಂಟರ್‌ವ್ಯೂ ಕರೆಗಳೇ ಬರುತ್ತಿರಲಿಲ್ಲ. 'ಯಾವುದಾದರೂ ಪ್ರೈವೇಟ್ ಕಂಪೆನಿಯಲ್ಲಾದರೂ ಪ್ರಯತ್ನಿಸೋಣ' ಎಂದು ನಂದಿತಾ, ಚಿತ್ರಾಳನ್ನು ಕರೆದುಕೊಂಡು ಅಲೆಯಲಾರಂಭಿಸಿದಳು. ಬಹಳ ಕಮ್ಮಿ ಸಂಬಳದ ಅಥವಾ ಬರೀ ಗಂಡು ಬೀಡಿರುವ ಆಫೀಸುಗಳು ಇಬ್ಬರ ಕಲ್ಪನಾಮಯ ಶಂಕೆಯ ಮನಸ್ಸಿಗೆ ಭೀತಿ ತಂದು ಅಲ್ಲಿ ಸೇರಲು ಹಿಂಜರಿದರು. ಆಗ ನಂದಿತಾಳ ಮನಕ್ಕೆ ಹೊಳೆದದ್ದು, ಆಕೆಯ ತಂದೆಯ ದೂರದ ಸಂಬಂಧಿ, ಶ್ರೀಮಂತ ಸಮಾಜ ಸೇವಿಕೆ, ಮಹಿಳೆ ಸುಮಂಗಳಮ್ಮನವರು. ಆಕೆಯ ಹತ್ತಿರ ಹೋಗಿ ಕೆಲಸ ಕೊಡಿಸಲು ಯಾಕೆ ಯಾಚಿಸಬಾರದು ? ಅಮ್ಮನಿಗೆ ಹೇಳಿದರೆ ಅಧಿಕಪ್ರಸಂಗವೆಂದು ಬೈದಾಳು. ಮದುವೆಯಾಗಿ ಹೋಗುವ ಹುಡುಗಿಗೆ ಕೆಲಸ ಯಾಕೆ ಬೇಕು ಅಂದಾಳು, ಎಂದುಕೊಂಡು ಗುಟ್ಟಾಗಿ ನಂದಿತಾ, ಚಿತ್ರಾಳ ಜತೆ ಅವರ ಆಫೀಸಿಗೆ ಹೋದಳು. ನಂದಿತಾಳನ್ನು ನೋಡಿ ಆಕೆ ಬಹಳ ದಿವಸಗಳಾದ ಕಾರಣ ಮೊದಲು ಆ ಮಹಿಳೆಗೆ ಅವಳ ಗುರುತು ಸಿಗಲಿಲ್ಲ. ತಂದೆಯ ಹೆಸರು ಹೇಳಿದಾಗ ಗುರುತಿಸಿ ಅವಳನ್ನು ತಬ್ಬಿಕೊಂಡರು. "ಎಷ್ಟು ನಿಗರ್ವಿ, ಒಳ್ಳೆ ಮನುಷ್ಯ ನಿನ್ನ ತಂದೆ. ನಿಮ್ಮನ್ನೆಲ್ಲ ಸಣ್ಣ ವಯಸ್ಸಿನಲ್ಲೇ ಬಿಟ್ಟು ತೀರಿಕೊಂಡದ್ದು ನಿಜವಾಗಿಯೂ ವಿಷಾದಕರ. ನೀವೆಲ್ಲ ತುಂಬಾ ಕಷ್ಟ ಪಟ್ಟಿರಬೇಕಲ್ಲ. ಈಗ ನನ್ನಿಂದೇನಾಗಬೇಕು ? ನಿಸ್ಸಂಕೋಚವಾಗಿ ಹೇಳು. ಅಮ್ಮ ಯಾಕೆ ಬಂದಿಲ್ಲ ? ಈಕೆ ಯಾರು ನಿನ್ನ ಗೆಳತಿಯೇ ?" ಎಂದು ಪ್ರಶ್ನೆಗಳು ಸುರಿಮಳೆಯನ್ನೇ ಸುರಿಸಿ, ಪ್ರೀತಿಯಿಂದ ಮಾತನಾಡಿಸಿದರು. ನಂದಿತಾ ಸೂಕ್ತ ಉತ್ತರ ಕೊಟ್ಟು ತನಗೊಂದು ಎಲ್ಲಾದರೂ ಕೆಲಸ ಕೊಡಿಸಬೇಕೆಂದು ಬೇಡಿಕೊಂಡಳು. ಆಕೆ ಖಂಡಿತಾ ಪ್ರಯತ್ನಿಸುವುದಾಗಿ ಭರವಸೆ ಕೊಟ್ಟರು. ಅವಳೆದುರೇ ಶ್ರೀಮಂತ ಉನ್ನತ ಅಧಿಕಾರಿಗಳ ಪತ್ನಿಯರಿಗೆ ಫೋನು ಮಾಡಿ, ಕೆಲವಾರು ಕಚೇರಿಗಳ ವೇಕೆನ್ಸಿಯ ಮಾಹಿತಿ ದೊರಕಿಸಿಕೊಂಡು, ನಂದಿತಾಳ ಬಗ್ಗೆ ಶಿಫಾರಸಿನ ಮುದ್ರೆ ಒತ್ತಿ ಸ್ವಲ್ಪ ಭರವಸೆ ದೊರಕಿಸಿಕೊಂಡು, ಅವಳಿಗೆ ಮುಂದಿನ ವಾರ ಅಪ್ಲಿಕೇಷನ್ನುಗಳ ಜತೆಗೆ ಬರಲು ಹೇಳಿದರು. ನಂದಿತಾಳ ಜತೆ ಹೋದ ಚಿತ್ರಾಳನ್ನು ಬಾಯ್ತುಂಬ ಮಾತಾಡಿಸಿದರು. ಇಬ್ಬರ ಸ್ನೇಹದ ಬಗ್ಗೆ ಮೆಚ್ಚುಗೆ ಮಾತಾಡಿ ತಿಂಡಿ, ಕಾಫಿ ಕೊಡಿಸಿ ಕಳಿಸಿದರು. "ಇನ್ನೊಂದು ಸಲ ಬರುವಾಗ ಅಮ್ಮನನ್ನೂ ಕರೆದುಕೊಂಡು ಬಾ. ಬಹಳ ದಿವಸವಾಯಿತು, ಆಕೆಯನ್ನು ನೋಡದೆ" ಎಂದು ಹೇಳಿದರು.

ಮರುವಾರ ನಂದಿತಾ ಗೆಳತಿಯ ಮನೆಗೆ ಹೋದಳು. ಗೆಳತಿಯನ್ನು ತನ್ನ ಜತೆಗೆ ಸುಮಂಗಳಮ್ಮನಲ್ಲಿಗೆ ಕಳಿಸಿಕೊಡಲು, ಬಿನ್ನವಿಸಿಕೊಳ್ಳಲು ಚಿತ್ರಾಳ ತಾಯಿಯ ಹತ್ತಿರ ಅಡಿಗೆ ಮನೆಗೆ ಹೋದಳು. ಗೆಳತಿ ಎಲ್ಲೂ ಕಾಣಿಸಲಿಲ್ಲ. ಆಕೆಯ ತಾಯಿ ಯಾವಾಗಲೂ ನಗುತ್ತ ಮಾತನಾಡಿಸುವವರು ಇವಳನ್ನು ನೋಡಿ ಮುಖ ತಿರುಗಿಸಿದರು. ಸರಿಯಾಗಿ ಉತ್ತರವನ್ನೂ ಕೊಡಲಿಲ್ಲ. ನಂದಿತಾ ಅರ್ಥವಾಗದೇ ನಿರಂಜನನ ರೂಮಿನತ್ತ ಹೋಗಿ ಒಳ ಇಣುಕಿದಳು. ಆತನೂ ದಪ್ಪ ಮುಖ ಮಾಡಿಕೊಂಡು ಓದುತ್ತಿರುವವನಂತೆ ನಟಿಸಿದನು. ಚಿತ್ರಾಳ ತಂಗಿ ಯಥಾಪ್ರಕಾರದಂತೆ ತನ್ನ ಕಾಲೇಜಿನ ಓದಿನಲ್ಲಿ ಮಗ್ನಳಾದಂತೆ ಕಂಡಳು. ನಂದಿತಾ ಚಕಿತಗೊಂಡು ಕಂಗಾಲಾದಳು. ಇನ್ನೇನು ವಾಪಸ್ ಹೋಗಲೆಂಬಂತೆ ದುಃಖ ಭಾರದಿಂದ ಹೊರಗಡಿ ಇರುವಷ್ಟರಲ್ಲಿ ಚಿತ್ರಾಳ ಆಗಮನವಾಯಿತು. ನಂದಿತಾಳನ್ನು ನೋಡಿ ಅವಳ ಮುಖವೂ ಗಂಭೀರವಾದರೂ "ಇದೋ ಈಗ ಬಂದೆ" ಎಂದು ಸೀದಾ ಅಡಿಗೆ ಮನೆಗೆ ಹೋಗಿ ಗೊಣಗುತ್ತಿದ್ದ ತಾಯಿಯನ್ನು ಸಮಾಧಾನಿಸಿ ಹಾಗೂ ಹೀಗೂ ಗೆಳತಿಯ ಜತೆ ಹೊರ ಹೋಗಲು ಗೋಗರೆಯುತ್ತ ಒಪ್ಪಿಗೆ ಪಡೆದು ಬಟ್ಟೆ ಬದಲಾಯಿಸಿಕೊಂಡು ಬಂದಳು. ನಂದಿತಾಳಿಗೆ ಒಂದೂ ಅರ್ಥವಾಗದೇ ದಿಗ್ಭ್ರಮೆಗೊಂಡು ನಿಂತಿದ್ದಳು. ಗೆಳತಿ ಬಂದು ತನ್ನನ್ನು ಸೇರಿದಾಗ

ಏನನ್ನೂ ಪ್ರಶ್ನಿಸದೇ ರಸ್ತೆಯಲ್ಲಿ ಜತೆ ಜತೆಯಾಗಿ ಮೌನದಿಂದ ನಡೆಯ ಹತ್ತಿದಳು.

ಬಸ್ ಸ್ಟಾಪ್ ಬಂದಾಗ "ಸುಮಂಗಳಮ್ಮ ಇವತ್ತು ಕರೆದಿದ್ದಾರಲ್ಲವೇ? ಬರ್ತೀಯಾ ಚಿತ್ರ. ಅಲ್ಲಿಗೆ ಹೋಗಿ ಬರೋಣವೇ?" ಎಂದು ಕೇಳಿದಾಗ ಚಿತ್ರ ನೋವಿನಿಂದೆಂಬಂತೆ ಮುಖ ಕಿವಿಚಿದಳು. "ಅಲ್ಲಿಗೆ ಖಂಡಿತಾ ಬರಲಾರೆನಮ್ಮ. ಅಲ್ಲಿಗೇನಾದರೂ ನಿನ್ನ ಜತೆ ಹೋದದ್ದು ತಿಳಿದರೆ ಅಮ್ಮ, ಅಣ್ಣ ನನ್ನ ಕಾಲು ಮುರಿದಾರು. ಇದೇ ವಿಷಯದ ಬಗ್ಗೆ ನಿನ್ನ ಹತ್ತಿರ ಮಾತಾಡಬೇಕಿತ್ತು. ಅದಕ್ಕೆ ನಾನು ನಿನ್ನ ಜತೆ ಬಂದಿದ್ದು. ಬಾ ಹಾಗೆಯೇ ಮಾತನಾಡುತ್ತ ಹೋಗೋಣ" ಎಂದು ಹೇಳುತ್ತಲೇ ಚಿತ್ರಾ ಮುಂದೆ ಕಾಣುವ ಪಾರ್ಕಿನತ್ತ ನಂದಿತಾಳನ್ನು ಎಳೆದೊಯ್ದಳು. ಅಲ್ಲಿ ಹುಲ್ಲು ಹಾಸಿನ ಮೇಲೆ ಇಬ್ಬರೂ ಕುಳಿತಾದ ಮೇಲೆ ಗೊಂದಲದಲ್ಲಿದ್ದ ನಂದಿತಾಳ ಪ್ರಶ್ನೆಗಳಿಗೆಲ್ಲ ಉತ್ತರವೆಂಬಂತೆ ಚಿತ್ರಾ ಮಾತನಾಡಲು ಶುರುಮಾಡಿದಳು, ಮಾತಿನ ಮೊದಲನ್ನೇ ನಂದಿತಾಳನ್ನು ಪ್ರಶ್ನಿಸುತ್ತ "ಆವತ್ತು ಸುಮಂಗಳಮ್ಮನನ್ನು ನಾವಿಬ್ಬರೂ ಭೇಟಿಯಾದ ಮೇಲೆ ನೀನೊಬ್ಬಳೇ ಅಥವಾ ಅಮ್ಮನ ಜತೆ ಏನಾದರೂ ಪುನಃ ಭೇಟಿಯಾಗಿದ್ದಿಯೇನೇ?" ಚಿತ್ರಾಳ ನೇರ, ತೀಕ್ಷ್ಣ ನೋಟ, ಪತ್ತೇದಾರಿಕೆಯ ಕಂಠ ನಂದಿತಾಳಿಗೆ ಸ್ವಲ್ಪವೂ ಇಷ್ಟವಾಗಲಿಲ್ಲ. ಆದರೂ ವಿಷಯ ತಿಳಿದುಕೊಳ್ಳುವ ಉದ್ದೇಶದಲ್ಲಿ "ಏನೇ ಚಿತ್ರ ಹಾಗೆ ಕೇಳ್ತಿ. ನಾನು ಒಬ್ಬಳೇ ಅಥವಾ ಅಮ್ಮನ ಜತೆ ಎಲ್ಲೋ ಹೋಗುತ್ತೇನೆಯೇ? ಅದೂ ಎಲ್ಲಿಗೆ ಹೋದರೂ ನಿನ್ನ ಜತೆ ತಾನೆ ಹೋಗುವುದು. ಇಲ್ಲದಿದ್ದರೆ ಇವತ್ತು ಅಲ್ಲಿಗೆ ಹೋಗಲು ನಿನ್ನನ್ನು ಕರೆಯುತ್ತಿದ್ದೆನೇ? ಯಾಕೆ ಈರೀತಿ ಕೇಳ್ತಿ." ಗೆಳತಿಯ ನೊಂದ ನುಡಿಗಳಿಗೆ ಸಾಂತ್ವನ ಕೊಡಲು ಚಿತ್ರಾ "ಹಾಗಲ್ಲ. ಆವತ್ತು ಸುಮಂಗಳಮ್ಮ ನಿಮ್ಮಮ್ಮನನ್ನು ಜತೆಗೆ ಕರೆತರಲು ನಿನ್ನಲ್ಲಿ ಹೇಳಿದ್ದರಲ್ಲ. ಅದಕ್ಕೆ ಕೇಳಿದೆ ಅಷ್ಟೇ" ನಂದಿತಾ ಈಗ ಬಿಗಿ ಕಂಠದಲ್ಲಿ "ಈಗ ವಿಷಯಕ್ಕೆ ನೇರ ಇಳಿ. ನಿನ್ನ ಮತ್ತು ಮನೆಯವರ ಈ ವಿಚಿತ್ರ ನಡುವಳಿಕೆಗೆ ಏನು ಕಾರಣ? ಅನವಶ್ಯಕ ಪೀಠಿಕೆಗಳು ಬೇಡ." ಚಿತ್ರ ಕೊಂಚ ಹೊತ್ತು ಎಲ್ಲಿಂದ ಪ್ರಾರಂಭಿಸುವುದೆಂದು ಗೊತ್ತಾಗದೇ ಸುಮ್ಮನಿದ್ದಳು. ಆಮೇಲೆ ಇಳಿದ ಕಂಠದಲ್ಲಿ "ಮೊನ್ನೆ ನಿಮ್ಮ ಸುಮಂಗಳಮ್ಮನ ಆಫೀಸಿಗೆ ನಾನೂ, ಅಣ್ಣನೂ ಹೋಗಿದ್ದೆವು ಕಣೇ. ಇದನ್ನು ನಿನಗೆ ಮೊದಲೇ ತಿಳಿಸಲಾಗಲಿಲ್ಲ." ನಂದಿತಾಳು ತನ್ನ ಕಿವಿಯನ್ನು ತಾನು ನಂಬದಾದಳು. "ಓಹೋಹೋ ಇದಕ್ಕೋ ನೀನು ಪ್ರಶ್ನಿಸಿದ್ದು. ನೀನೇ ಹೋಗಿ ನನ್ನನ್ನು ಕೇಳುತ್ತಿಯಾ? ಅದೇನು ರಾಜಕಾರ್ಯ ಇತ್ತಮ್ಮ ನಿಮಗೆ ಆಕೆಯಲ್ಲಿ" ಗೆಳತಿಯ ವ್ಯಂಗ್ಯ ಬಾಣವನ್ನು ಚಿತ್ರ ಗಮನಿಸದಂತೆ ಮುಂದುವರಿಸಿದಳು. "ಅದೇ ಆವತ್ತು ನಾವು ಹೋಗಿ ಬಂದ ಮೇಲೆ ಅವರ ಬಗ್ಗೆ ಅಮ್ಮ, ಅಣ್ಣನಲ್ಲಿ ಹೇಳುತ್ತಲಿದ್ದೆ. ನಂಗೇನೋ ವೃತ್ತಿ ಜೀವನ ಇಷ್ಟವಿದ್ದರೂ ತಂದೆಯ ನಕಾರ, ಮದುವೆಯ ಪ್ರಯತ್ನದಿಂದ ಆ ಆಸೆಯನ್ನು ಮುರುಟಿಸಿಕೊಂಡಿದ್ದೇನೆ. ಯಾಕೆಂದರೆ ಭಾವೀ ಪತಿಯಾಗುವವರ ಒಪ್ಪಿಗೆ ಇಲ್ಲಿ ಮುಖ್ಯವಾಗುತ್ತದೆ ನೋಡು. ಅದಕ್ಕೆ ಅಮ್ಮ ಮುಂದೆ ಮದುವೆಯಾಗುವವನ ಒಪ್ಪಿಗೆ ಪಡೆದೇ ಕೆಲಸಕ್ಕೆ ಸೇರು ಎಂದು ಹೇಳಿದರು. ಆದಕಾರಣ ನಿನ್ನಲ್ಲಿ ನಾನು ನನಗೋಸ್ಕರ ಸುಮಂಗಳಮ್ಮನಲ್ಲಿ ಕೇಳಲು ಏನೂ ಹೇಳಿರಲಿಲ್ಲ ಆವತ್ತು. ಇನ್ನಾರು ತಿಂಗಳಲ್ಲಿ ನಮ್ಮ ತಂದೆ ರಿಟೈರ್ ಆಗುತ್ತಾರೆ. ಅಕ್ಕನ ಮದುವೆಗಾಗಲೇ ಬಹಳ ಖರ್ಚಾಗಿದೆ. ಉಳಿದುದರಲ್ಲಿ ಸಾಲ ಸೋಲ ಮಾಡಿ ನನ್ನ ಮದುವೆ ಮುಗಿಸಿದರೂ ಫೈನಲ್ ಎಮಾಲ್ಯುಮೆಂಟ್ಸ್ ಬಹಳ ಕಡಿಮೆ ತಂದೆಯ ಕೈಗೆ ಬರುತ್ತದೆ. ತಂಗಿಯ ವಿದ್ಯಾಭ್ಯಾಸ ಬೇರೆ ಪೂರ್ತಿಯಾಗಿಲ್ಲ. ಅಣ್ಣ ಬಿ. ಇ. ಮುಗಿಸಿ ಎರಡು ವರ್ಷದಿಂದ ಕೆಲಸಕ್ಕೆ ಅಲ್ಲಿ ಇಲ್ಲಿ ಪರದಾಡುತ್ತಿದ್ದಾನೆ. ಅವನಿಗೇನಾದರೂ ಕೆಲಸ ದೊರಕಿದರೆ ನಮ್ಮೆಲ್ಲರ ಸಮಸ್ಯೆಯೂ ಬಗೆಹರಿದು ಈ ಮನೆಯ ರಥ ಸುಲಭವಾಗಿ ಓಡುತ್ತದೆ ಎಂದು ನಮ್ಮೆಲ್ಲರ ಆಶೆ. ಅದಕ್ಕೆ ಅಮ್ಮ, ಅಣ್ಣ ಸುಮಂಗಳಮ್ಮನ ಹತ್ತಿರ ತಮ್ಮನ್ನು ಕರೆದೊಯ್ಯಲು ಒತ್ತಾಯಿಸಿದರು. ನಿನ್ನನ್ನು ಕೇಳದೇ ಗಡಿಬಿಡಿಯಲ್ಲಿ ನಾನು ಅಣ್ಣನನ್ನು ಮಾತ್ರ ಅಲ್ಲಿಗೆ ಕರೆದೊಯ್ದೆ. ಆಕೆ ಮೊದಮೊದಲು ಚೆನ್ನಾಗಿಯೇ ಮಾತಾಡಿದರು. ಅಣ್ಣನ ವಿದ್ಯೆ, ಅಂಕಗಳು ಇವೆಲ್ಲವುದರ ಬಗ್ಗೆ ಮೆಚ್ಚುಗೆಯಿಂದಲೇ ಮಾತಾಡಿದರು. ಆಮೇಲೆ ಸಡನ್ ಆಗಿ ಆಕೆಯ ಮಾತಿನ ಧಾಟಿ ಬದಲಾಯಿತು..." ಚಿತ್ರ ಒಂದೆರಡು ನಿಮಿಷ ಮಾತು ನಿಲ್ಲಿಸಿದಾಗ ಮೌನವೇ ಸಾಮ್ರಾಜ್ಯವಾಳಿತು.

ನಂದಿತಾ ಉಸಿರು ಬಿಗಿ ಹಿಡಿದು ಚಿತ್ರಾ ಹೇಳುತ್ತಿರುವುದನ್ನು ಆಶ್ಚರ್ಯದಿಂದ ಕಥೆ ಕೇಳುತ್ತಿರುವಂತೆ ಕೇಳುತ್ತಿದ್ದಳು. ಚಿತ್ರ ಮುಂದುವರಿಸಿದಳು. "ನಿನ್ನ ಆ ಸಂಬಂಧಿಕೆ ಬಹಳ ಚಾಲಾಕಿ ಹೆಂಗಸು ಕಣೇ. ಆಕೆ ನಮ್ಮಣ್ಣನಿಗೆ ಪ್ರಸಿದ್ಧ ಟಾಟಾ ಕಂಪೆನಿಯಲ್ಲಿ ಎಂಜಿನಿಯರ್ ಹುದ್ದೆ ಕೊಡಿಸುವ ವಾಗ್ದಾನ ಮಾಡಿದರು. ಆದರೆ ಒಂದು ಮುಖ್ಯವಾದ ಕಂಡೀಶನ್ ಹಾಕಿದರು. ಅದನ್ನು ಕೇಳಿದವನು ಅಲ್ಲಿಯವರೆಗೆ ಸಂತೋಷದಿಂದ ಗಗನದಲ್ಲಿ ಹಾರಾಡುತ್ತಿದ್ದವನು ರೆಕ್ಕೆ ಕಡಿದ ಪಕ್ಷಿಯಂತೆ ಚಡಪಡಿಸುತ್ತಿದ್ದು, ಸಿಕ್ಕಾಪಟ್ಟೆ ಕೋಪ ಬಂದು ನಂಗೆ ಯದ್ವಾ ತದ್ವಾ ಬೈದ ಕಣೇ." ನಂದಿತಾ ಆಶ್ಚರ್ಯತುಂದಿಲಳಾಗಿ ಈ ಒಗಟು ಬಿಡಿಸಲಾಗದೇ ಹೆಣಗುತ್ತ "ಏನೇ ಹಣ, ಗಿಣ ಏನಾದ್ರೂ ಕೇಳಿದರೇನೇ?" ಎಂದು ಕೇಳಿದಾಗ ಚಿತ್ರಾ ಅರೆಕ್ಷಣ ನಂದಿತಾಳ ಮುಖವನ್ನೇ ಪರೀಕ್ಷಿಸುವವಳಂತೆ ನೋಡಿದಳು. "ಅದೇನಾದ್ರೂ ಕೇಳಿದರೂ ಚಿಂತಿರಲಿಲ್ಲ ಕಣೇ. ಅಪ್ಪ ಕೊಟ್ಟಿರುತ್ತಿದ್ದರು. ಆಕೆಯ ಕಂಡಿಶನ್ ಏನು ಗೊತ್ತೇನೇ? ನಮ್ಮಣ್ಣ ನಿನ್ನನ್ನು ಮದುವೆಯಾಗಬೇಕಂತೆ." ನಂದಿತಾ ತನ್ನನ್ನೇ ತಾನು ನಂಬದಂತಾದಳು. ಆಕಾಶವೇ ಕಳಚಿ ತಲೆ ಮೇಲೆ ಬಿದ್ದಿದ್ದರೂ ಇಷ್ಟು ಷಾಕ್ ಆಗುತ್ತಿರಲಿಲ್ಲ. ಕುಗ್ಗಿದ ಧ್ವನಿಯಲ್ಲಿ ಆಕೆ ಹೇಳಿದಳು "ಇಲ್ಲ. ನಾನಿದನ್ನು ನಂಬಲಾರೆ. ನೀನು ಖಂಡಿತಾ ಸುಳ್ಳು ಹೇಳ್ತಿದ್ದೀಯಾ. ಇಲ್ಲದ್ದನ್ನು ಹುಟ್ಟಿಸಿ ಹೇಳ್ತಿದ್ದೀಯಾ." ಚೀರಿದಂತೆ ಹೇಳುತ್ತಿದ್ದ ಆಕೆಯನ್ನು ತಡೆದ ಚಿತ್ರಾ ಹೇಳಿದಳು. ಆಕೆಯ ಧ್ವನಿಯಲ್ಲಿ ಉಪೇಕ್ಷೆ ಹಾಗೂ ತಾತ್ಸಾರ ತುಂಬಿತ್ತು. "ಬೇಕಿದ್ದರೆ ಆಕೆಯನ್ನೇ ಹೋಗಿ ಕೇಳೇ? ನಾನೇಕೆ ಸುಳ್ಳಾಡಲಿ? ಅಣ್ಣ ಅಲ್ಲೇ ಕಿರಿಚಿ ಹೇಳಿಬಿಟ್ಟ. ನೀವು ಕೊಡಿಸುವ ಕೆಲಸದ ಭಿಕ್ಷೆಗೆ ನಾನು ಆ ಕಪ್ಪು ಕುರೂಪಿಯನ್ನು ಮದುವೆಯಾಗಲಾರೆ!" ಎಂದು. ನಿನ್ನಮ್ಮ ಯಾವತ್ತಾದರೂ ಆಕೆಯಲ್ಲಿ ಹೇಳಿಟ್ಟಿದ್ದರೋ ಏನೋ ನಿನಗೊಂದು ಗಂಡು ಹುಡುಕಲು ನಿಂಗೆ ಗೊತ್ತಿದೆಯೋ ಇಲ್ಲವೋ ನನಗ್ಗೊತ್ತಿಲ್ಲ. ನನ್ನ ಅಣ್ಣನಿಗೆ ಮತ್ತು ಅಮ್ಮನಿಗೆ ನಿನ್ನ ಮೇಲೆ ತುಂಬಾ ಸಿಟ್ಟು ಬಂದಿದೆ. ನಾನೇನೋ ಹೇಳಿದೆ 'ನನಗೆ ತಿಳಿದಂತೆ ಈ ವಿಷಯದಲ್ಲಿ ನಂದಿತಾ ನಿರಪರಾಧಿ' ಎಂದು. ಆದರೂ ನಮ್ಮಮ್ಮ 'ಯಾವತ್ತಿನಿಂದ ನಿನ್ನ ಗೆಳತಿ ಈ ಮನೆಗೆ ಸೊಸೆಯಾಗಿ ಬರುವ ಕನಸು ಕಾಣುತ್ತಿದ್ದಳೋ ಏನೋ' ಎಂದು. 'ಸುಂದರ ಬಿ. ಇ. ಪದವೀಧರನನ್ನು ಬುಟ್ಟಿಗೆ ಹಾಕಿಕೊಳ್ಳಲು ತಂತ್ರ ಮಾಡಿದ್ದಳೋ ಮಾಟಗಾತಿ' ಹೀಗೆಲ್ಲ ಬೈಯುತ್ತಿದ್ದರು. ಇದೇ ಸಮಯಕ್ಕೆ ನೀನು ಮನೆಗೆ ಬಂದಾಗ ಇನ್ಯಾವ ರೀತಿ ಸ್ವಾಗತ ಸತ್ಕಾರ ಮಾಡಿಯಾರು? ಹೇಳು? ಅದೂ ಅಲ್ಲದೇ ಅಣ್ಣನಿಗೆ, ಇವತ್ತೂ ನಾಳೆ ಒಳ್ಳೇ ಕೆಲಸ ಸಿಕ್ಕಿದರೆ ಲಕ್ಷಗಟ್ಟಲೆ ವರದಕ್ಷಿಣೆ ತರುವ ಸುಂದರ, ವಿದ್ಯಾವಂತ, ನೌಕರಿಯಿರುವ ಹುಡುಗಿಯರು ನಾ ಮುಂದು ತಾ ಮುಂದು ಎಂದು ಮದುವೆ ಮಾಡಿಕೊಳ್ಳಲು ಬರುತ್ತಾರೆ ಕಣೇ. ನಮ್ಮಮ್ಮ ಪಾಪ. ಅವನಲ್ಲಿ ಎಷ್ಟೊಂದು ಆಸೆ ಕಟ್ಟಿಕೊಂಡಿದ್ದಾಳೆ. ಬರುವ ಭಾವೀ ಸೊಸೆ ಮೇಲೆ ಕೂಡಾ. ನಿನ್ನಂಥ ಕಪ್ಪು, ಸಾಧಾರಣ ಹುಡುಗಿಯನ್ನು ಅಣ್ಣನಾಗಲೀ, ಅಮ್ಮನಾಗಲೀ ಒಪ್ಪಿಯಾರೇ? ಅಣ್ಣ ಹೇಳ್ತಿದ್ದ "ನಿನ್ನ ಗೆಳತಿ ಮುಗ್ಧೆ ಎಂದು ತಿಳಿದಿದ್ದೆ. ಅವಳು ಮಳ್ಳಿ ಕಣೇ. ಆಕಾಶಕ್ಕೆ ಏಣಿ ಹಾಕಿದ್ದಾಳೆ" ಎಂದು.

ನಂದಿತಾ ಕಲ್ಲಿನಂತೆ ಕೂತಿದ್ದಳು. ಗೆಳತಿ ಹೇಳುತ್ತಿರುವ ಒಂದೊಂದು ಮಾತೂ ಕರ್ಕಶಪ್ರಾಯವಾಗಿ ಶೂಲದಂತೆ ಚುಚ್ಚುತ್ತಿತ್ತು. ಅದೂ ಅಲ್ಲದೆ ಗೆಳತಿ ಮತ್ತೆ ಮತ್ತೆ ಒತ್ತಿ ಹೇಳುತ್ತಿದ್ದ 'ಕಪ್ಪು ಕುರೂಪಿ' ಅನ್ನುವ ಮಾತು ಭರ್ಜಿಯಂತೆ ಇರಿಯುತ್ತಿದ್ದು ಅವಳ ಆತ್ಮಾಭಿಮಾನವನ್ನು ಕೆರಳಿಸಿತು. ಅವಳು ಕೂಡಲೇ ಚೀರಿ ಹೇಳಿದಳು.

### ಬಾರ್ಸಿಲೋನಾಗಾಗಿ ಬೆತ್ತಲೆ ಸೇವೆ!!

ಬಾರ್ಸಿಲೋನಾದಲ್ಲಿ ಬೆತ್ತಲೆ ಸೇವೆಯೇ? ಅದೇನು ಹರಕೆಯೇ?!

ಇಲ್ಲ.... ಬಾರ್ಸಿಲೋನಾ ಒಲಿಂಪಿಕ್ಸ್‌ಗೆ ಆಯ್ಕೆಯಾದ ನ್ಯೂಜಿಲ್ಯಾಂಡ್ ಈಜುಗಾರ್ತಿ ಟೋನಿ ಜೆಫ್ಸ್‌ಗೆ ಕಾಡಿದ ಹಣದ ಕೊರತೆ.

ಈಕೆಯ ಆರ್ಥಿಕ ಅನಾನುಕೂಲತೆಯನ್ನು ಮನಗಂಡು ಮರುಕ ತೋರಿದ ನೈಟ್ ಕ್ಲಬ್ಬೊಂದು ನೆರವು ನೀಡಲು ಕೈಗೊಂಡ ತೀರ್ಮಾನದ ಫಲ ಇದು.

ಆ ಕ್ಲಬ್ಬಿನ ನರ್ತಕಿಯರು ತಮ್ಮ ಬಟ್ಟೆ ಕಳಚುವ ಒಂದು ಪ್ರದರ್ಶನ ನೀಡಿ ಆ ಮೂಲಕ ಬಂದ ಆದಾಯವನ್ನು ಜೆಫ್ಸ್‌ಗೆ ನೀಡಿದರು. ಕೆಲ ಹಿತೈಷಿಗಳು ಹೀಗೆ ಹಣ ಸಂಗ್ರಹಿಸುವ ಕುರಿತು ಆಕ್ಷೇಪಿಸಿದರಾದರೂ ಯಾವ ರೀತಿಯಲ್ಲಾದರೂ ಸರಿ ಹಣ ಸಂಗ್ರಹಿಸಲು ನಿರ್ಧರಿಸಿದ ಜೆಫ್ಸ್ ಈ ಬೆತ್ತಲೆ ಸೇವೆಯಿಂದ ದೊರೆತ ಹಣ ಪಡೆದು ಒಲಿಂಪಿಕ್ಸ್‌ಗೆ ಹಾಜರಾದಳು.

"ಚಿತ್ರಾ ಬಾಯ್ಮುಚ್ಚೇ, ಕೇಳುವಷ್ಟು ನಾನು ಕೇಳಿದೆ ಕಣೇ. ತಾಳ್ಮೆಯನ್ನೂ ತಂದುಕೊಂಡೆ. ನೀನು ನಂಬು ಬಿಡು. ನಾನಾಗಲೀ, ಅಮ್ಮನಾಗಲೀ ಆ ಸುಮಂಗಳಮ್ಮನ ಹತ್ತಿರ ನನ್ನ ಮದುವೆಯ ಬಗ್ಗೆ ಏನು ಸಹಾಯವನ್ನೂ ಕೇಳಿಲ್ಲ. ಅಪ್ಪ ಸತ್ತಾಗಲಿಂದ ನಮ್ಮಮ್ಮ ಯಾರೊಬ್ಬರ ಹತ್ತಿರವೂ ಹೋಗಿ ಅಂಗಲಾಚಿಲ್ಲ. ನೀನು ಹೇಳಿದ್ದು ಆಕೆಯ ಬಗ್ಗೆ, ನಿಜವೇ ಆದರೆ, ಅದು ಆಕೆಯ ಅಧಿಕ 'ಪ್ರಸಂಗಿತನ' ನಿಮ್ಮೆಲ್ಲರಿಗೂ ನೋವುಂಟು ಮಾಡಿದ್ದಕ್ಕೆ ಅವರ ಪರವಾಗಿ ನಾನು ಕ್ಷಮೆ ಯಾಚಿಸುತ್ತೇನೆ. ಇಷ್ಟು ಸಮಯ ನನ್ನ ಸ್ನೇಹಿತೆಯಾಗಿದ್ದೂ ನೀನು ನನ್ನನ್ನು ಅರ್ಥಮಾಡಿಕೊಂಡಿಲ್ಲ. ನಿನ್ನ ಅಮ್ಮ, ಅಣ್ಣ ಸಂಶಯಿಸಿದಂತೆ ನಾನ್ಯಾವತ್ತೂ ನಿಮ್ಮ ಮನೆಯ ಸೊಸೆಯಾಗಲು, ನಿನ್ನಾಣೆಯಾಗಿಯೂ ಆಶೆಪಡಲಿಲ್ಲ; ಹಂಬಲಿಸಲಿಲ್ಲ. ನಿನ್ನ ತಾಯಿ ಎಷ್ಟು ತಾಟಕಿ, ಜೋರು ಎಂದು ನನಗೆ ತಿಳಿದದ್ದೇ! ನಿನ್ನ ಅಣ್ಣ ನೀನು ಹೊಗಳುವಷ್ಟು ಸುಂದರಾಂಗನೂ ಅಲ್ಲ. ನಾನೆಂದೂ ಅವನ ಮೇಲೆ ಕಣ್ಣು ಹಾಕಿಲ್ಲ; ಹಿಂದೆ ಈಗ ಮತ್ತು ಮುಂದೆಂದು ಕೂಡ! ಅವನಲ್ಲಿರುವುದು ನನಗೆ ಬರೀ ಸಹೋದರ ಭಾವನೆ ಮಾತ್ರ. ನೀನು ಅವನನ್ನು ಯಾವ ದೃಷ್ಟಿಯಲ್ಲಿ ನೋಡುತ್ತಿಯೋ ಅದೇ ದೃಷ್ಟಿಯಲ್ಲಿ ನಾನು ಕೂಡ ಅವನನ್ನು ನೋಡುತ್ತಿದ್ದೇನೆ. ಇದನ್ನು ನಿನ್ನ ಅಣ್ಣ ಮತ್ತು ಅಮ್ಮನಿಗೆ ಸ್ಪಷ್ಟವಾಗಿ ಹೇಳು. ಆದರೂ ನನಗೀಗ ನಿನ್ನ ನಾಲಿಗೆಯ ಮೇಲೆ ನಂಬಿಕೆ ಹೊರಟುಹೋಗಿದೆ. ನೀನು ನನ್ನನ್ನು ಯಾವತ್ತೂ "ಕಪ್ಪು ಕಸ್ತೂರಿಯಲ್ಲವೇನೇ? ಕಪ್ಪಾದರೂ ಲಕ್ಷಣವಾಗಿ ಕಳೆ ಕಳೆಯಾಗಿದ್ದಿ ಕಣೇ. ಇಂತಹ ಬುದ್ಧಿವಂತ, ಜಾಣೆಯನ್ನು ಮದುವೆಯಾಗುವವ ಎಷ್ಟು ಪುಣ್ಯವಂತ?" ಎಂದೆಲ್ಲ ಹೇಳುತ್ತಿದ್ದವಳು ಇಂದು ನಾನು ಕಲ್ಪನೆಯ ಅತ್ತಿಗೆಯಾಗುವಾಗ ಮಾತ್ರ ಕಪ್ಪು ಕುರೂಪಿಯಾದೆನೇ? ನಿನ್ನಣ್ಣನಿಗೆ ಮಣಗಟ್ಟಲೆ ಬೆಳ್ಳಿ, ಬಂಗಾರ, ಹಣ, ಆಸ್ತಿ ತರುವ ರೂಪಸಿಯನ್ನೇ ಅತ್ತಿಗೆಯಾಗಿ ತಂದುಕೋ. ಯಾರು ಬೇಡವೆಂದವರು? ನೀವು ಕೇಳಿಕೊಂಡಿದ್ದರೂ ನಾನು ನಿನ್ನನ್ನು ನಾದಿನಿಯನ್ನಾಗಿ, ನಿನ್ನಣ್ಣನಿಗೆ ಹೆಂಡತಿಯಾಗಲು ಒಪ್ಪುತ್ತಿರಲಿಲ್ಲ. ಎಟುಕದ ದ್ರಾಕ್ಷಿ ಹುಳಿಯೇ ಎಂದು ಕಟಕಿಯಾಡಬೇಡ. ಯಾಕೆಂದರೆ ಇದಕ್ಕೆಲ್ಲ ಕಾರಣ ನನಗೆ ನಿನ್ನಣ್ಣನ ಮೇಲಿರುವ ಭ್ರಾತೃ ಪ್ರೇಮ ಮಾತ್ರ. ಆದರೆ ಇಂಥ ಸಂಕುಚಿತ ಭಾವನೆಯನ್ನು ನಿನ್ನಲ್ಲಿ, ನಿನ್ನಣ್ಣನಲ್ಲಿ ನಾನು ಕನಸಿನಲ್ಲೂ ಊಹಿಸಿರಲಿಲ್ಲ. ನನ್ನಣ್ಣನಾಗಲೂ ಅವನು ಅರ್ಹನೇ ಎಂದು ಅವನ ಶಂಕಿತ ಮನಸ್ಸು ನನ್ನನ್ನು ಭ್ರಮೆಗೀಡು ಮಾಡುತ್ತಿದೆ. ಅರ್ಹನಲ್ಲವೆನಿಸುತ್ತಿದೆ." ಇಷ್ಟು ಹೇಳಿ ನಂದಿತಾ ವ್ಯಗ್ರಳಾಗಿಯೇ ಚಿತ್ರಾಳಿಂದ ಬೀಳ್ಕೊಟ್ಟು ಬಿಡುಬೀಸಾಗಿ ಮನೆಗೆ ತೆರಳಿದಳು.

ಮರುದಿನ ಒಂಟಿಯಾಗಿಯೇ ನಂದಿತಾ ಸುಮಂಗಳಮ್ಮನ ಮನೆಗೆ ಹೋಗಿ ವಿಷಯವನ್ನು ಕೆದಕಿದಾಗ ಆಕೆ ಪ್ರಾಮಾಣಿಕವಾಗಿಯೇ ಹಾಗೆ ಹೇಳಿದ್ದು ನಿಜ ಎಂದು ಒಪ್ಪಿಕೊಂಡರು. "ನಿನ್ನ ತಂದೆಯ ಒಳ್ಳೆತನ ನೆನೆದು, ನಿನ್ನ ಮದುವೆ ಬೇಗನೆ ಆಗಲಿ, ಹುಡುಗ ಒಳ್ಳೆಯವನು, ಓದಿದವನು ಎಂದು ನಿನ್ನ ಒಳಿತಿಗೋಸ್ಕರ ಹೀಗ್ಮಾಡಿದೆ" ಎಂದು ಆಕೆ ಸಪ್ಪೆಯಾಗಿ ಹೇಳಿದಾಗ ನಂದಿತಾ ಎಲ್ಲವನ್ನೂ ವಿವರಿಸಿ "ನನ್ನನ್ನು ಮೂರು ಕಾಸಿಗೆ ಹರಾಜು ಮಾಡಿದಿರಲ್ಲ ಆಂಟಿ. ಮುಂಚೆಯೇ ನನ್ನನ್ನೊಂದು ಮಾತು ಕೇಳಿ ಇಂತಹ ಪ್ರಸ್ತಾಪ ಮಾಡಬಾರದಿತ್ತೇ?" ಎಂದು ತರಾಟೆಗೆ ತೆಗೆದುಕೊಂಡಾಗ ಪರಿಸ್ಥಿತಿಯ ವಿಕೋಪ ಅರಿತು ಆಕೆ ಪರಿತಪಿಸಿದರು. ತಲೆ ಬಿಸಿಯಲ್ಲಿದ್ದ ನಂದಿತಾ ತನ್ನ ಕೆಲಸದ ಬಗ್ಗೆಯೂ ಅಂದು ಮಾತನಾಡದೇ ಮನೆಗೆ ಹಿಂತಿರುಗಿದಳು.

ಅದಾಗಿ ಒಂದೆರಡು ತಿಂಗಳಲ್ಲಿ ಎಂಪ್ಲಾಯ್‌ಮೆಂಟ್ ಎಕ್ಸ್‌ಚೇಂಜಿನಿಂದ ಇದೀಗ ಕೆಲಸ ಮಾಡುತ್ತಿರುವ ಸಾರ್ವಜನಿಕ ವಲಯದ ಕಂಪೆನಿಯಲ್ಲಿ ಸ್ಟೆನೋಗ್ರಾಫರ್ ಆಗಿ ತನ್ನ ಪ್ರತಿಭೆಯಿಂದ ಸೆಲೆಕ್ಟ್ ಆದಳು. ಈ ಮಧ್ಯೆ ಚಿತ್ರಾ ತನ್ನ ಮದುವೆ ಇನ್ವಿಟೇಶನ್ ಕೊಡಲು ಬಂದಾಗ ಮೊದಮೊದಲು ಬಿಗುಮಾನದಿಂದ ವರ್ತಿಸಿದರೂ ಆಮೇಲೆ ಸೌಜನ್ಯತೆ ತೋರಿ ಮದುವೆಗೆ ಬಂದೇ ಬರುವುದಾಗಿ ನಂದಿತಾ ಭಾಷೆ ಕೊಟ್ಟಳು. ಆದರೂ ನಂದಿತಾಗೆ ಏನೋ ಇರಿಸು ಮುರುಸು. ಚಿತ್ರಾ ಕಡೆಯವರೆಂದರೆ ಏನೋ ಅಸಹ್ಯ. ಅಳುಕು. ಅಂಥ ಜನರಿಂದ ದೂರವಿರುವ ನಿರ್ಧಾರ ಮಾಡಿದ್ದಳವಳು. ಬೇರೆ ಗೆಳತಿಯರ ಜತೆಗೆ ಚಿತ್ರಾಳ ಮದುವೆಗೆ ಹೋಗಿದ್ದಳು. ಚಿತ್ರಾಳ ತಾಯಿ ಆಕೆಯನ್ನು ಚೆನ್ನಾಗಿಯೇ ಉಪಚರಿಸಿದರು, ಮಾತನಾಡಿಸಿದರು. ಆದರೆ ನಂದಿತಾ ಚುಟುಕಾಗಿಯೇ ಉತ್ತರಿಸಿದಳು. ಆಕೆಯ ಅಣ್ಣನ ಕಡೆಯಂತೂ ತಿರುಗಿ ಸಹಾ ನೋಡಲಿಲ್ಲ. ಚಿತ್ರಾ ಆಮೇಲೆ ಆಗಾಗ್ಗೆ ಇವಳ ಮನೆ ಕಡೆ ಬರುವುದಿತ್ತು. ನಂದಿತಾಳು ಒಮ್ಮೊಮ್ಮೆ ಆಕೆಯ ಹೊಸ ಸಂಸಾರಕ್ಕೆ ಭೇಟಿ ಕೊಟ್ಟಿದ್ದುಂಟು. ಕ್ರಮೇಣ ಈ ಕಹಿ ಎಲ್ಲ ಮರೆತು ಹೋಯಿತು. ಆದರೂ ಗೆಳೆತನದ ಬಿಗಿ ನಾನಾ ಜಂಜಾಟಗಳಿಂದ ಸ್ವಲ್ಪ ಸಡಿಸಲಾಯಿತು.

## ಚುಟುಕಗಳು

1. ಕುಲಪುತ್ರ

ಬೆಳೆಯುತಿದೆ ಯೋಜನೆಗಳ ಗಾತ್ರ
ವರದಕ್ಷಿಣೆಯ ನಿರ್ಮೂಲನೆ ಕಾಯಿದೆಯಲಿ ಮಾತ್ರ
ದಕ್ಷಿಣೆಯ ರೂಪಗಳು ನಾನಾ ವಿಚಿತ್ರ
ತನ್ನ ತಾ ಮಾರಿ ಕೊಳ್ಳುವ ನೀ ಕುಲಪುತ್ರ

2. ರಕ್ಷಣೆ

ವರನಿಗಾಗಿ ಮಾಡಿದಳು ವಧು ಭೂಪ್ರದಕ್ಷಿಣೆ
ವರನೆಂದ ನೀ ಬಲು ಸುಂದರಿ ಕಣೆ
ತುಸು ಕಡಿಮೆಯಾಗ ಕೂಡದು ವರದಕ್ಷಿಣೆ
ಕಡಿಮೆಯಾದೊಡೆ ದಕ್ಷಿಣೆ, ನಿನಗಿಲ್ಲ ಇಲ್ಲಿ ರಕ್ಷಣೆ

3. ಗ್ರಹಚಾರ

ವರದಕ್ಷಿಣೆಯೊಂದಿಗಿರಬೇಕು ವರೋಪಚಾರ
ತಪ್ಪಿದರೆ ವರೋಪಚಾರ, ತಪ್ಪಿತಲ್ಲೇ ವ್ಯವಹಾರ
ವ್ಯವಹಾರ ತಪ್ಪಿದರೆ, ನಮ್ಮಮ್ಮನ ಬಾಯಿ ಬಾಜಾರ
ಆಗ ಸತ್ತು ನೀ ತರಬೇಡ ಎನಗೆ ಗ್ರಹಚಾರ

—ಲಕ್ಷ್ಮೀದೇವಿ ಶಾಸ್ತ್ರಿ

ಈಗ ಧೂಮಕೇತುವಿನಂತೆ ನಿರಂಜನ ಬಂದಾಗ ಆಕೆಗೆ ಅವನ ಬಗ್ಗೆ ನಗು, ಅಸಹ್ಯ, ಕನಿಕರದ ಸಮ್ಮಿಶ್ರಣ ಭಾವ ಮೂಡಿತ್ತು. ಸ್ವಲ್ಪ ಹೊತ್ತು ಈಗ ತಾನೇನು ಮಾಡಬೇಕೆಂದು ಯೋಚಿಸಿದಳು. 'ಇಂತಹ ಶಿಫಾರಸು ಅವಳ ಮನೋಭಾವಕ್ಕೆ ವಿರುದ್ಧವಾಗಿದ್ದು, ಆತ್ಮಗೌರವಕ್ಕೆ ಕುಂದು ತರುವಂತಹದ್ದೆನಿಸಿತು. ಆತ ಸ್ವಂತ ಪ್ರತಿಭೆಯಿಂದ ಪಾಸಾದರೆ ಪಾಸಾಗಲಿ. ಆತ ಹೇಳಿದಂತೆ ರಾಜಕೀಯದ ಚದುರಂಗದಾಟದಲ್ಲಿ ನಿಜವಾಗಿಯೂ ಅವನು ಬಲಿಪಶುವಾಗಿದ್ದರೆ ಬಲಿಯಾಗಲಿ. ತನಗೇನು? ಅದು ಅವನ ದುರಾದೃಷ್ಟ! ಅವನ ಹಣೆ ಬರಹವೇನು ತನ್ನ ಕೈಯಲ್ಲಿದೆಯೇ? ತನ್ನ ಬಾಸ್ ಹತ್ತಿರ ಇಂಥ ಸಣ್ಣ ಜನರ ಕ್ಷುಲ್ಲಕ ವಿಚಾರವನ್ನೆತ್ತಿ, ಅಂಥ ದೊಡ್ಡ ಆಫೀಸರನ್ನೇಕೆ ತನ್ನ ಆಜ್ಞಾಧಾರಕರನ್ನಾಗಿ ಮಾಡಬೇಕು? ತಾನೇನು ಅಂಥ ದೊಡ್ಡ ಕಥೆ, ಕಾದಂಬರಿಯ ಹೆಣ್ಣು ಪಾತ್ರ ಕ್ಷಮಯಾಧರಿತ್ರಿ, ಪಾಮರೋದ್ಧಾರಿ ನಾಯಕಿಯೂ ಅಲ್ಲ. ಆ ಇಚ್ಛೆಯೂ ತನಗಿಲ್ಲ. ತಾನು ಒಬ್ಬ ಸ್ವಾಭಿಮಾನಿ ಸಾಮಾನ್ಯ ಹೆಣ್ಣು ಅಷ್ಟೇ. ಹಾಗೆಂದು ತನ್ನ ಮನಸ್ಸಿನೊಳಗಿನ ಕುದಿಯುವ ಲಾವಾರಸಕ್ಕೆ ಉತ್ತರವಾಗಿ ದ್ವೇಷ ಸಾಧಿಸಲು, ಅಕಸ್ಮಾತ್, ಅದೃಷ್ಟವಶಾತ್ ಪಾಸಾಗುವವನನ್ನು, ಬಾಸ್ ಹತ್ತಿರ ಹೇಳಿ ಫೇಲು ಮಾಡಿಸುವಂತಹ ನೀಚ ಕಾರ್ಯಕ್ಕೂ ಹೋಗಲಾರೆ. ಯಾಕೆಂದರೆ ಇಂಥ ಸಂಕುಚಿತ ಮನೋಭಾವದಿಂದ ತನ್ನನ್ನು ಬಾಸ್ ಎದುರು ಸಣ್ಣವಳನ್ನಾಗಿ ಮಾಡಿಕೊಳ್ಳಲಾರೆ. ಈತ ಈಗ ಬಂದದ್ದು ಕನಸಿನಲ್ಲೆಂದು ಮರೆಯುತ್ತೇನೆ.

ಇನ್ನೂ ಆತ ತೋರಿದ ಭವಿಷ್ಯದ ಬಗೆಗಿನ ಬೆದರಿಕೆ, ಬೇಸತ್ತ ಮಾತುಗಳು, ಈ ಭ್ರಷ್ಟ ಕಂಪೆನಿಯನ್ನು ಬಿಡುತ್ತೇನೆನ್ನುವ ಅವನ ಆಕ್ರೋಶಕ್ಕೂ ತಾನು ಜವಾಬ್ದಾರಳಲ್ಲ. ಆದರೂ ಈ ನಿಷ್ಪ್ರಯೋಜಕ, ಕಪ್ಪು ಹುಡುಗಿಗೆ ಇಂದು ಅವನ ದೃಷ್ಟಿಯಲ್ಲೂ ಕಿಮ್ಮತ್ತು ಬಂದಿದೆ. ಸುಂದರ ಎಂಜಿನಿಯರ್ ತನ್ನ ಕೆರಿಯರ್ ಉಳಿಸಿಕೊಳ್ಳುವುದಕ್ಕೆ, ಆಕೆಯ ಸಹಾಯ ಕೋರಿ ಕಾಲ ಬುಡಕ್ಕೆ ಬಂದಿದ್ದಾನೆ. Every dog has its day ಅನ್ನುವ ಆಂಗ್ಲ ಗಾದೆ ಖಂಡಿತಾ ಸುಳ್ಳಾಗಲಿಲ್ಲ. ಆದರೂ ಸುತಾರಾಂ ತಾನೀಗ ಏನೂ ಸಹಾಯ ಮಾಡುವುದಿಲ್ಲ' ಎಂದು ನಿರ್ಧರಿಸಿದಳು. ಈಗ ಅವಳ ತಲೆ ಸ್ವಲ್ಪ ತಣ್ಣಗಾಯಿತು.

ಅಳಿದುಳಿದ ಕೆಲಸ ಪೂರ್ತಿಮಾಡಿ, ಮುಖ ತೊಳೆದು, ಸ್ವಲ್ಪ ಪೌಡರನ್ನು ನವಿರಾಗಿ ಲೇಪಿಸಿಕೊಂಡು, ನಂದಿತಾ ಬ್ಯಾಗೇರಿಸಿಕೊಂಡು ಫ್ಯಾಕ್ಟರಿಯ ಬಸ್ಸಿನತ್ತ ಹೆಜ್ಜೆ ಹಾಕಿದಳು. ಮನೆ ತಲುಪಿದೊಡನೆ ಎಲ್ಲವನ್ನೂ ಮರೆತಳು. ಅದೂ ಅಲ್ಲದೇ ಅವಳಿಗೀಗ ತನ್ನ ಭಾವೀ ಪತಿಯ ಬಗ್ಗೆ, ತಮ್ಮ ಮುಂದಿನ ಸುಂದರ ಹೊಂಗನಸಿನ ಬದುಕಿನ ಬಗ್ಗೆ ಸಾಕಷ್ಟು ಕನಸು ಕಾಣುವುದಿತ್ತು; ಮಧುರಾನುಭೂತಿಯಲ್ಲಿ ತೇಲಿ ಹೋಗುವುದಿತ್ತು: ಕನಸಿನ ಗೋಪುರ ಕಟ್ಟುವುದಿತ್ತು.

ಚಿತ್ರಾಳ ಮನೆಗೆ ಮದುವೆ ಇನ್ವಿಟೇಶನ್ ಕೊಡಲು ಹೋದಾಗ ಆಕೆ ಬೇರೆಲ್ಲ ಮಾತಾಡುತ್ತ ನಿರಂಜನನ ವಿಷಯಕ್ಕೆ ಲಗ್ಗೆ ಹಾಕಿದಳು. ಅನುಕಂಪದ ನುಡಿಗಳನ್ನಾಡಿದಳು. ನಂದಿತಾ ಅದರ ಬಗ್ಗೆ ಆಸಕ್ತಿ ತೋರಿಸದೇ ಚುಟುಕಾಗಿ ಮಾತಾಡಿದಾಗ

ಅವಳು ಸಪ್ಪಗಾದಳು. ಮಾತು ವಿಷಯಾಂತರವಾಯಿತು.

ಈ ಮಧ್ಯೆ ನಿರಂಜನನ ಇಂಟರ್‌ವ್ಯೂ ಮುಗಿದಿತ್ತು. ಆಗೊಮ್ಮೆ ಪುನಃ ನಂದಿತಾಳಿಗೆ ಮುಖ ತೋರಿಸಿ, ನೆನಪಿಸಿ ಹೋಗಿದ್ದ. ಆತನ ಸೆಲಕ್ಷನ್ ಬಗ್ಗೆ ಗೊತ್ತಾಗುವ ಮುಂಚೆಯೇ ನಂದಿತಾಳು ಮದುವೆಗೆ ರಜೆ ಹಾಕಿದ್ದಳು. ಅವಳ ಮದುವೆಯೂ ಮುಗಿದುಹೋಯಿತು. ಚಿತ್ರಾ ಗಂಡ, ಮಕ್ಕಳೊಡಗೂಡಿ ನಂದಿತಾಳ ಮದುವೆಗೆ ಆಗಮಿಸಿದ್ದಳು. ನಿರಂಜನ್ ಬಂದಿದ್ದಂತೆ ಕಾಣಲಿಲ್ಲ. ಮದುವೆಯಾದೊಡನೇ ನಂದಿತಾ ಮಧುಚಂದ್ರಕ್ಕೆ ಊಟಿಗೆ ಹೊರಟವಳು ಹೆಚ್ಚು ಕಮ್ಮಿ ಈ ವಿಷಯವೇಕೆ, ಆಫೀಸನ್ನೂ ಕೆಲಸವನ್ನೂ ಮರೆತು, ಹಾಯಾಗಿ ತಿರುಗಾಡಿ ಸಂತೋಷವಾಗಿ ವಾಪಸ್ ಊರಿಗೆ ಬಂದಳು. ಬಂದವಳು ರಜೆ ಮುಂದುವರಿಸಿ ಅತ್ತೆಯ ಮನೆಯ ಪರಿಸರಕ್ಕೆ ಹೊಂದಿಕೊಳ್ಳಲು ಅಭ್ಯಾಸ ಮಾಡಿಕೊಂಡಳು. ರಜೆ ಮುಗಿಸಿ ಅವಳು ಆಫೀಸಿಗೆ ಅಡಿಯಿಟ್ಟಾಗಲೇ ನಿರಂಜನನ ಸೆಲೆಕ್ಷನ್ ವಿಷಯದ ಬಗ್ಗೆ ಅವಳಿಗೆ ನೆನಪಾಗಿದ್ದು.

ಆಗ ತಕ್ಷಣ ಅವಳು ಬಾಸ್ ಇಲ್ಲದಿರುವಾಗ, ಕ್ಯಾಬಿನ್ನಿಗೆ ನುಗ್ಗಿ ಅಲ್ಲಿ ಫೈಲುಗಳನ್ನು ಜೋಡಿಸಿಡುವ ನೆವನದಲ್ಲಿ ಒಂದೊಂದೇ ಫೈಲು, ಫೋಲ್ಡ್‌ಗಳನ್ನು ನೋಡತೊಡಗಿದಳು. ಹಾಂ. ಸಿಕ್ಕೇಸಿಕ್ಕಿತು. ಹೆಡ್ ಆಫೀಸು ಇದೇ ಆಗಿರುವ ಕಾರಣ ಅವಳ ಬಾಸ್ ಹತ್ತಿರವೇ ಆ ಲಿಸ್ಟಿತ್ತು. ಅಸಿಸ್ಟೆಂಟ್ ಎಕ್ಸಿಕ್ಯೂಟಿವ್ ಎಂಜಿನಿಯರ್ ಹುದ್ದೆಯ ಸೆಲೆಕ್ಷನ್ ಎಸ್ ಎಸ್ ಸಿ ಫೈಲು ಕಣ್ಣಿಗೆ ಬಿದ್ದು ಕ್ಷಣಕಾಲ ಯಾಕೋ ಎದೆ ಡವಡವಿಸಿತು. ಅವಳು ಅದನ್ನು ತೆರೆದು ನೋಡಿದಳು. ಅವನ ಹೆಸರು ಓದಿದಳು. ಅವನ ಜಿ. ಎಂ. ಅವನಂದುಕೊಂಡಂತೆ ಬಹಳ ಕಮ್ಮಿ ಮಾರ್ಕ್ಸ್ ಹಾಕಿದ್ದರು. ಉಳಿದವರಿಗೂ ಯಾಕೋ ಸಾಧಾರಣ ಅಂಕಗಳನ್ನು ಕೊಟ್ಟಿದ್ದರು. ಒಟ್ಟಿನಲ್ಲಿ ಅವನು ಫೈಲ್ ಆಗಿದ್ದನು. ವಿಧಿಯ ಕೈವಾಡವೇ ಮೇಲಾಗಿತ್ತು, ಅಥವಾ ಅವನು ಹೇಳುವಂತೆ ರಾಜಕೀಯ ಚದುರಂಗದ ಮೋಸದಾಟಕ್ಕೆ ಅವನು ಬಲಿಯಾಗಿದ್ದ.

ಮುಂದೆ ಚಿತ್ರಾಳ ಆಕ್ಷೇಪಣೆಗೆ ಗುರಿಯಾದ ನಂದಿತಾಳಿಗೆ ತಿಳಿದುದಿಷ್ಟು. ನಿರಂಜನ್ ನಿಜವಾಗಿಯೂ ರೋಸಿಹೋಗಿ ಈ ಊರನ್ನು, ಈ ಸಾರ್ವಜನಿಕ ವಲಯದ ಕಂಪೆನಿಯನ್ನೇ ಬಿಟ್ಟು ಬೇರೆ ಊರಿನಲ್ಲಿ ಖಾಸಗಿ ವಲಯದ ಒಂದು ಕಂಪೆನಿಗೆ ಸೇರಿಕೊಂಡದ್ದು. ಆತನ ಹೆಂಡತಿಯೂ ಆ ಊರಿಗೆ ಉಪಾಯವಿಲ್ಲದೇ ಟ್ರಾನ್ಸ್‌ಫರ್ ಮಾಡಿಸಿಕೊಂಡದ್ದು. ಎಲ್ಲ ಕೇಳಿದಾಗ ನಿಜವಾಗಿಯೂ ನಂದಿತಾಳಲ್ಲಿ ಅಪರಾಧಿ ಪ್ರಜ್ಞೆ ಮೂಡಿತು. 'ತನ್ನ ಈ ತಟಸ್ಥ ಧೋರಣೆ' ಸರಿಯಾದುದೇ? ಎಂದು ಮನಸ್ಸು ಮೀಮಾಂಸೆಗೆ ತೊಡಗಿತ್ತು. ಯಾರ ಭವಿಷ್ಯ ಯಾರ ಕೈಯಲ್ಲಿದೆ? ನಾವೆಲ್ಲ ವಿಧಿಯ ಆಟದ ಗೊಂಬೆಗಳಲ್ಲವೇ ಎಂದು ಚುರುಕ್ಕೆಂದ ಕರುಳಿಗೆ ವೇದಾಂತದ ಸವಿರು ಕವಚ ಹೊದಿಸಿ ಸಾಂತ್ವನ ಮಾಡಿಕೊಂಡಳು. ಕ್ಷಮಾಶೀತರ ಬಗ್ಗೆ ಚಿಂತಿಸಬೇಕೇಕೆ ಎಂಬೊಂದು ತರ್ಕದ ಮೇಲೆ ತನ್ನ ಆಫೀಸು, ಹೊಸ ಬದುಕಿನತ್ತ ಗಮನ ಹರಿಸುತ್ತ ಎಲ್ಲ ಮರೆತಳು.

— ಎಂ. ಎಸ್. ಮಂಜುಳಾ

## ಟ್ರೈ ಯುವರ್ ಲಕ್

— ಪಂಕಜಾ ಸಿಂಹ

ರೇಸ್‌ಕೋರ್ಸ್ ಮುಂಬಾಗಿಲಿನಲ್ಲಿ ಥಳಥಳಿಸುತ್ತಿದ್ದ 'ಕಮ್ ಅಂಡ್ ಟ್ರೈ ಯುವರ್ ಲಕ್, ಟುಡೇಸ್ ಜಾಕ್‌ಪಾಟ್ ಕುಡ್ ಬಿ ಯುವರ್ಸ್" ಫಲಕ ನನ್ನ ಗಮನ ಸೆಳೆಯಿತು. ನನ್ನ ಬಹುದಿನಗಳ ಬಯಕೆ ಹುಚ್ಚೆದ್ದು ಕುಣಿಯಿತು. ಈ ಸಲ ಏನಾದ್ರೂ ಮಾಡಿ ರೇಸ್‌ಗೆ ಹೋಗಲೇಬೇಕು—ಜಾಕ್‌ಪಾಟ್ ಹೊಡೆದು ಕೊಳ್ಳಲೇಬೇಕು ಎಂದು ನಿರ್ಧರಿಸಿದೆ. ಸರಿ ನನ್ನ ಬಯಕೆಯನ್ನು ಅನ್ನದಾತ ಅಂದರೆ ಯಜಮಾನರ ಮುಂದಿಟ್ಟೆ. "ಸಾಕು, ಸುಮ್ಮನೆ ಕೂತ್ಕೋ, ಯಾರಾದ್ರೂ ಕೇಳಿದ್ರೆ ನಕ್ಕಾರು, ಕುದ್ರೆ ಬಾಲಕ್ಕೆ ದುಡ್ಡು ಕಟ್ಟೋ ಚಟ ಅಂಟಿಸಿಕೊಂಡರೆ ಮನೆ-ಮಠ ಮಾರ್ಕೊಂಡು ಬೀದಿಲಿ ನಿಂತ್ಕೋಬೇಕಾಗುತ್ತೆ,' ಅಂತ ಅಪಶ್ರುತಿ ಹಾಡಿದರು.

ಆದರೆ ನಾನು ಜಗಜಟ್ಟಿ, ಬಿಡ್ತೀನಾ. ಹೇಗೋ ಕಷ್ಟಪಟ್ಟು ನಮ್ಮ ಸ್ನೇಹಿತರ ಹತ್ತಿರ ಎರಡು ಪಾಸ್ ಗಿಟ್ಟಿಸಿದೆ. ನನ್ನ ಗಂಡನ ಒಳ್ಳೆಯ ಮೂಡ್ ನೋಡಿಕೊಂಡು ಪಾಸ್ ಗಿಟ್ಟಿಸಿರುವ ವಿಷಯಾನೂ ತಿಳಿಸಿ, ಅವರ ಹತ್ತಿರ ನೋಡೋಣಾ ಅನ್ನೋ ಉತ್ತರ ಗಿಟ್ಟಿಸುವ ಹೊತ್ತಿಗೆ ಸಾಕು ಸಾಕಾಯ್ತು. 'ಈ ಹುಚ್ಚನ್ನ ನಿನ್ನ ತಲೆ ಯಾರು ತುಂಬಿದ್ರು?' ಅಂತ ಬೈಸಿಕೊಂಡಿದ್ದೂ ಆಯ್ತು.

ಮರುದಿನ ನನಗೆ ಸುದಿನ. ಅಂದರೆ...ರೇಸ್ ಹೋಗಿ ಜಾಕ್‌ಪಾಟ್ ಗೆಲ್ಲುವ ದಿನ. ಬೆಳಗಿನ ಜಾವಕ್ಕೇ ಎದ್ದು...ಬೇಗ ಬೇಗ ಬಾಗಿಲು ಸಾರಿಸಿ, ಸ್ನಾನ ಮುಗಿಸಿ ...ಅವರಿಗೆ ಬೆಡ್ ಕಾಫಿ ಕೊಟ್ಟೆ. 'ಇದೇನು ಬಂತು ನಿನಗೆ ದೀಪಾವಳೀಲಿ ನೀರು ತುಂಬೋ ಹಬ್ಬದ ದಿವಸ ಕೂಡಾ ನೀನು ಇಷ್ಟು ಬೇಗ ಎದ್ದಿರಲಿಲ್ಲ, ಇವತ್ತು...' ಆಮೇಲೆ ಮಾತಾಡೋರಂತೆ ಈಗ ಬೇಗ ಬೇಗ ಎದ್ದು ರೆಡಿಯಾಗಿ' ಅಂದೆ. 'ಎಲ್ಲಿಗೆ?...ಅಂದ್ರು. 'ಇದೇನು ಇವತ್ತು ರೇಸು...ಜಾಕ್‌ಪಾಟ್ ಮರೆತುಬಿಟ್ರಾ...' 'ಒಳ್ಳೆ ರೇಸಿನ ಪಿಶಾಚಿ ಬಂದು ನಿನಗೆ ಅಮರಿಕೊಂಡಿದೆ ರೇಸ್ ಇರೋದು ಮಧ್ಯಾಹ್ನ'—ಅಂತ ಕಾಫಿ ಕುಡಿದು ...ಮುಸುಕು ಬೀರಿ ಮತ್ತೆ ಪವಡಿಸೇ ಬಿಟ್ರು.

ಮಧ್ಯಾಹ್ನ ಬೇಗ ಊಟ ಮುಗಿಸಿದ್ದೂ ಆಯ್ತು. ಕೆಲಸದ ಕೆಂಪಿಯ ಹತ್ತಿರ ಎರಡು ರೂಪಾಯಿ ಕೊಟ್ಟು ಒಳ್ಳೆ ಘಮ ಘಮಾಂತಿರೋ ಕೆಂಡಸಂಪಿಗೆ ಹೂ ತರಿಸ್ದೆ. ಹೊಸ ನಮೂನೆಯ ದಪ್ಪ ತುರುಬು ಕಟ್ಟಿ ಅದರ ಸುತ್ತಲೂ ಚಕ್ರಾಕಾರದಲ್ಲಿ ಸಂಪಿಗೆ ಮುಡಿದೆ. ಅಲ್ಲಿಗೆ ಬಂದ ಯಾಜಮಾನಪ್ಪ ಲೇ...ಲೇ...ಇದೇನೇ.. ನಿನ್ನ ಕೆಂಡ ಸಂಪಿಗೆ ಪರಿಮಳಾನ ಕುದುರೆ ಆಘ್ರಾಣಿಸಲಿ ಅಂತ ಮುಡ್ಕೊಂಡಿದ್ಯಾ? ಮೊದಲು ನಿನ್ನ ಅವತಾರ ತೆಗಿ ಅಂದರು. ನನಗಾದ ಸಂಕಟ ಅಷ್ಟಿಷ್ಟಲ್ಲ. ಇನ್ನು ಬಾಯಿಬಿಟ್ರೆ ಕೆಲ್ಸ ಕೆಡುತ್ತೇ ಅಂತ ತೆಪ್ಪಗೆ ಅವರು ಹೇಳಿದ ಹಾಗೇ ಕೇಳ್ದೆ. ನನ್ನ ತವರು ಮನೇಲಿ ಮದುವೇಲಿ ಕೊಟ್ಟ ದೊಡ್ಡ ಜರೀ ಅಂಚಿನ ಕೆಂಪು ರೇಶ್ಮೆ ಸೀರೆ ಉಟ್ಟು 'ನೋಡ್ರಿ...ಇದು ಹೇಗಿದೆ?' ಅಂದೆ... ಥೂ...ಥೂ...ಥೂ... ನೀನೋ ನಿನ್ನ ಟೇಸ್ಟೋ... ನಿನ್ನ ಈ ಸೀರೆ ಬಣ್ಣನೋಡಿ ಕುದುರೆಗಳು ಚೆಲ್ಲಾಪಿಲ್ಲಿಯಾದಾವು...ಸಿಂಪಲ್ಲಾಗಿ ಡ್ರೆಸ್ ಮಾಡಿಕೊ...ಅಂದ್ರು.

ಮನೆ ಖರ್ಚಿಗೇ ಅಂತ ಕೊಟ್ಟ ದುಡ್ಡಲ್ಲೇ ಉಳಿದಿದ್ದನ್ನ ತೆಗೆದು ಅವರಿಗೆ ಕಾಣದ ಹಾಗೆ ಜಂಭದ ಚೀಲಕ್ಕೆ ಸೇರಿಸಿದೆ.

ಅಂತೂ ಇಂತೂ ರೇಸ್‌ಕೋರ್ಸ್‌ನ ಪ್ರವೇಶವಾಯಿತು.

ಅಲ್ಲಿ ಕುದುರೆಗಳ 'ವಾರ್ಮಿಂಗ್ ಅಪ್'ನ ದೃಶ್ಯ ನೋಡಿ ಮೈಮರೆತೆ. ಅಲ್ಲಿ ಓಡಾಡುತ್ತಿದ್ದ ಕುದುರೆಗಳ ಬಣ್ಣ, ಮೈಮಾಟ ಅವುಗಳ ಜೊತೆ ಸುಳಿದಾಡುವ ಜಾಕಿಗಳು...ಇವೆಲ್ಲಾ ನೋಡ್ತಾ ನೋಡ್ತಾ ನಾನು ಸ್ವರ್ಗದಲ್ಲೇ ವಿಹರಿಸುತ್ತಿದ್ದೆ. ಇಷ್ಟು ಕುದುರೆಗಳಲ್ಲಿ ಜಾಕ್‌ಪಾಟ್‌ನ ವಿಜಯಶ್ರೀ ಯಾರು? ಅಂತ ಕಣ್ಣು ಹೊರಳಿಸುತ್ತಾ ಮನಸ್ಸಿನಲ್ಲೇ ಬರಲಿರು ಹಣದ ಮಂಡಿಗೆ ತಿನ್ನುತ್ತಿದ್ದೆ. "ರೀ...ನಾವು ಈ ಕುದುರೇಗೆ ದುಡ್ಡು ಕಟ್ಟೋಣ...ಆ ನಂಬರ್ ನನಗೆ ಲಕ್ಕೀ ನಂಬರ್..." ಅಂತ ಪಕ್ಕಕ್ಕೆ ತಿರುಗಿದರೆ ಆಸಾಮೀನೆ ನಾಪತ್ತೆ. ಸರಿ ಒಳ್ಳೇದೇ ಆಯ್ತು ಅಂತ ಅಲ್ಲೆ ನಿಂತೆ. "ಏನೇ ಇದು ನಿನ್ನ ಅವಾಂತರ? ಹೀಗೆಲ್ಲಾ ಇಲ್ಲಿ ಒಬ್ಬೊಬ್ಬಳೇ ಓಡಾಡುಬಾರ್ದು.' ಅಂತ ಒಂದು ಕಡೆ ನನ್ನ ಕುಕ್ಕಿ...ತಾವೂ ಕುಳಿತರು.' ನಾವು ದುಡ್ಡು ಕಟ್ಟಿರುವ ಕುದುರೆ ನಂಬರ್ ಎಷ್ಟು' ರೀ...? ಎಂದು ಕೇಳಿದ್ದಕ್ಕೆ...ಸುಮ್ಮನೆ ಎರಡು ಟಿಕೇಟ್ ನನ್ನ ಕೈಗೆ ಹಾಕಿದರು. ನನ್ನ ಚೀಲದ ದುಡ್ಡು ತೆಗೆಯುವ ಪ್ರಮೇಯ ಬರದೇ ಇದ್ದುದರಿಂದ, ಒಳಗೇ ಅದು ಬೆಚ್ಚಗೆ ಕುಳಿತಿತ್ತು.

'ಢಮಾರ್' ಶಬ್ದಕ್ಕೆ ಅಯ್ಯಪ್ಪಾ ಅಂದೆ ನಾನು. ಆದರೆ ಸುತ್ತಮುತ್ತ ಇದ್ದವರು ಯಾರೂ ಗಾಬರಿ ಆದಂತೇ ಕಾಣ್ಲಿಲ್ಲ. ಅದರ ಬದಲು ಎಲ್ಲಾ ಎದ್ದು ಹೋ...ಅಂತ ಅರಚಿ' ಕಮಾನ್, ಹರಿಯಪ್...'ಅಂತ ಕೂಗ್ತಾನೇ ಇದ್ರು. ನಾನು ಎದ್ದು ಕುದುರೆಗಳು 'ಓಡುತ್ತಿರುವುದನ್ನು ನೋಡಿದೆ. ನನ್ನ ಲಕ್ಕೀ ನಂಬರ್ ಎಲ್ಲರನ್ನೂ ಹಿಂದೆ ಹಾಕಿ ಮುಂದಿತ್ತು. ಕಮಾನ್... ಕಮಾನ್...ಡಾರ್ಲಿಂಗ್...ಸ್ವೀಟ್‌ಹಾರ್ಟ್, ಹರಿಯಪ್...ಅಂತ ಕೂಗಿ ಕುಣಿಯುತ್ತಿದ್ದೆ. ಆದ್ರೆ ಪಕ್ಕದಲ್ಲಿ ಇದ್ರಲ್ಲ ಕಂಟ್ರೋಲರ್ ಕೈ ಎಳೆದೂ...ಎಳೆದೂ... ನನ್ನ ಕುರಿಸ್ತಾ ಇದ್ರು. 'ನೋಡಿದ್ರಾ... ಈ ಹುಚ್ಚನ್ನ ನಿನ್ನ ತಲೆಗೆ ಯಾರು ತುಂಬಿದ್ರು ಅಂದ್ರಲ್ಲಾ, ಈಗ ಎಷ್ಟೊಂದು ದುಡ್ಡು...ಕೊಡ್ರಿ ಕೈ...ಭಾಗ್ಯಲಕ್ಷೀ ನಮ್ಮ ಮನೆಗೆ ಓಡಿ ಬಂದಿದ್ದಾಳೆ'...

"ಇದೇನಾಯ್ತೇ ನಿನಗೆ...ನೋಡು...ನೋಡು... ಯಾಕೆ ಹೀಗೆ ನನ್ನ ಹೊಡೀತಾ ಇದ್ದೀ...ರೂಪಶ್ರೀ ಸ್ವಲ್ಪ ನೀರು ತೊಗೊಂಡು ಬಾ. ನಿಮ್ಮಮ್ಮನ ಮುಖಕ್ಕೆ ಎರಚೋಣ. ಯಾಕೊ ಹುಚ್ಚು ಹುಚ್ಚಾಗಿ ಆಡ್ತಾ ಇದ್ದಾಳೆ"...ಎಂದು ಜೋರಾಗಿ ಇವರು ಕೂಗಿದ್ದನ್ನು ಕೇಳಿ ಎಚ್ಚರ ಆಯ್ತು. 'ಯಾಕ್ರೀ ಎದ್ದಿದ್ದೀರಿ... ಕಳ್ಳ ಬಂದ್ನಾ? ನಲ್ಲೀಲಿ ನೀರು ಬಂತಾ...ಹೋಗಿ ಬೇಗ ಬೇಗ ತುಂಬಿ' ಅಂದೆ. ನಿನ್ನ ತಲೆ ನಲ್ಲೀಲಿ ನೀರು ಬಿದ್ದಿಲ್ಲ ನಿನ್ನ ಕೈಯ ಏಟು ತಿಂದು ನನ್ನ ಕಣ್ಣಲ್ಲಿ ನೀರು ಬಂತಷ್ಟೆ, ಬೆಳಿಗ್ಗೆ ಎಲ್ಲಾ ಹಾಳು ಮೂಳು ಯೋಚನೆ ಮಾಡಿ, ರಾತ್ರಿ ನನ್ನ ಪ್ರಾಣ ತಿನ್ನೋದು. ಎಚ್ಚರ ಮಾಡಿಕೊಂಡು ತೆಪ್ಪಗೆ ಮಲಕ್ಕೋ"...ಅಂದ್ರು.

ಬೆಳಿಗ್ಗೆ ಎದ್ದು ನನ್ನ ವಿಜಯಶ್ರೀಯ ಬಗ್ಗೆ ವಿವರ ಕೊಟ್ಟೆ, ಚೆನ್ನಾಗಿದೆ ನಿನ್ನ ಕನಸಿಗೆ ಲಂಗುಲಗಾಮೇ ಇಲ್ಲಾ' ಅಂತ ತಲೆ ತಲೆ ಚಚ್ಚಿಕೊಂಡ್ರು.

# ನಾಟ್ಯ ವಿಶಾರದೆ: ಶ್ರೀಮತಿ ರಾಧಾ ಶ್ರೀಧರ್



**ಜನಪ್ರಿಯ ಚಲನಚಿತ್ರ ನಟ ಶ್ರೀಧರ್ ಮೊದಲ್ಗೊಂಡು ಅನೇಕ ಮಂದಿ ಶಿಷ್ಯ ಶಿಷ್ಯೆಯರನ್ನು ಭರತನಾಟ್ಯದಲ್ಲಿ ತರಬೇತುಗೊಳಿಸಿರುವ ಶ್ರೀಮತಿ ರಾಧಾ ಶ್ರೀಧರ್ ಒಬ್ಬ ಆದರ್ಶ ಗುರು ಎಂದು ಖ್ಯಾತರಾಗಿದ್ದಾರೆ. ಶ್ರೀಮತಿಯವರ ಹಾಗೂ ಅವರ ವೆಂಕಟೇಶ ನಾಟ್ಯ ಮಂದಿರದ ಬಗೆಗೆ ಪರಿಚಯ ಲೇಖನ :**

ಭರತನಾಟ್ಯ ಭಾರತದಲ್ಲಿ ಮಾತ್ರವಲ್ಲ ಪ್ರಪಂಚದಲ್ಲೇ ಒಂದು ಶ್ರೇಷ್ಠ ಲಲಿತಕಲೆ ಎಂಬ ಖ್ಯಾತಿ ಪಡೆದಿದೆ. ಇದು ಬ್ರಹ್ಮನಿಂದ ರಚಿಸಲ್ಪಟ್ಟ ಐದನೆಯ ವೇದ ಎಂದು ಭರತಮುನಿಯ ಹೇಳಿಕೆ ಇದೆ. ಈ ನಂಬಿಕೆ ಕಲಾವಿದರಲ್ಲಿ ಇರುವುದರಿಂದಲೇ ಇರಬೇಕು ಅದು ಸನಾತನ ಪರಂಪರೆಯನ್ನು ಉಳಿಸಿಕೊಂಡು ಬಂದಿರುವುದು. ವಿವಿಧ ರೀತಿಯ ಮನೋರಂಜನೆಗಳು ಇರುವ ಈ ಪರ್ವಕಾಲದಲ್ಲೂ ನಾಟ್ಯಕಲೆ ಮಾತ್ರ ಜನರಲ್ಲಿ ಹೆಚ್ಚು ಆಕರ್ಷಣೆಯನ್ನುಂಟು ಮಾಡುತ್ತಿರುವುದು. ನಾಟ್ಯ ಕಣ್ಮನಗಳಿಗೆ ಹಿತಕರ, ಅಷ್ಟೇ ಅಲ್ಲ ಆರೋಗ್ಯದ ದೃಷ್ಟಿಯಿಂದಲೂ ಅಷ್ಟೇ ಉಪಯುಕ್ತ. ಕಲೆ ಕಲಾವಿದನ ಮನಸ್ಸಿಗೆ ಶಾಂತಿ, ತೃಪ್ತಿ ನೀಡುವುದಲ್ಲದೆ ಪ್ರೇಕ್ಷಕನಿಗೂ ಆನಂದ ನೀಡುತ್ತದೆ. ಸಹೃದಯತೆಯನ್ನು ಬೆಳೆಸುತ್ತದೆ. ಕಲೆ ಒಂದು ಸಮಾಜದ ಸಂಸ್ಕೃತಿಯ ಸಂಕೇತ, ಶ್ರೇಷ್ಠ ಕಲಾವಿದರು ದೇಶದ ಒಂದು ಆಸ್ತಿ. ಆದರೆ ಜನಮನಕ್ಕೆ ಆನಂದ ಕೊಡುವ ಕಲಾವಿದರಿಗೆ ತಕ್ಕ ಪ್ರೋತ್ಸಾಹ ಮನ್ನಣೆ, ಪೋಷಣೆ ಸಿಗುವುದು ಕಡಿಮೆ. ಬದಲಾಗಿ ಕಲೆಯ ಬಗ್ಗೆ ಅರಿವೇ ಇಲ್ಲದಿದ್ದರೂ ದೂಷಿಸುವ ಮಂದಿಯೇ ಹೆಚ್ಚು. ಕಲಾವಿದರು ಎಂದರೆ ತಪ್ಪು ಕಲ್ಪನೆ ತಾತ್ಸಾರ ಮನೋಭಾವನೆ ತಳೆದಿರುವವರಿಗೂ ಕಡಿಮೆ ಇಲ್ಲ.

ಒಬ್ಬ ಕಲಾವಿದ ತನ್ನ ಕಲೆಯಲ್ಲಿ ಸಾಕ್ಷಾತ್ಕಾರ ಪಡೆಯಬೇಕಾದರೆ ಆ ಹಿನ್ನೆಲೆಯಲ್ಲಿ ಕಷ್ಟ, ಶ್ರಮ, ನೋವು ಇದ್ದೇ ಇರುತ್ತದೆ. ಒಂದು ಮೂರ್ತಿ ಸಿದ್ಧವಾಗಬೇಕಾದರೆ ಕಲ್ಲನ್ನು ಹೊಡೆದು ಕೆತ್ತಿ ರೂಪ ಕೊಟ್ಟಾಗ ಹೇಗೆ ಅದು ಸುಂದರ ರೂಪ ತಳೆಯುತ್ತದೋ ಅಂತೆಯೇ ವಿಧ ವಿಧವ ನೋವನ್ನುಂಡು ಒಬ್ಬ ಕಲಾವಿದ ಬೆಳಕಿಗೆ ಬರಬೇಕಾಗುತ್ತದೆ. ಹೀಗೆ ಕಷ್ಟಗಳನ್ನು ಎದುರಿಸಿ ಶ್ರಮದಿಂದ ಸಾಧಿಸಿ ಬೆಳಕಿಗೆ ಬಂದ ಶ್ರೇಷ್ಠ ಪ್ರತಿಭೆ ಬೆಂಗಳೂರಿನ ಶ್ರೀ ವೆಂಕಟೇಶ್ವರ ನಾಟ್ಯ ಮಂದಿರದ ಸಂಸ್ಥಾಪಕಿ ಶ್ರೀಮತಿ ರಾಧಾ ಶ್ರೀಧರ್ ಅವರದ್ದು. ರಾಜ್ಯದ ಒಬ್ಬ ಪ್ರಮುಖ ಕಲಾವಿದೆಯಾಗಿ ಪ್ರಸಿದ್ಧಿ ಪಡೆದಿರುವ ಇವರು ತಮ್ಮ ಬಾಲ್ಯದಿಂದಲೇ ನೃತ್ಯಾಭ್ಯಾಸದಲ್ಲಿ ವಿಶೇಷ ಶ್ರದ್ಧೆಯುಳ್ಳವರು. ನೃತ್ಯ ಕಲಿಯಲು ಪ್ರೋತ್ಸಾಹವೇ ಇಲ್ಲದಿದ್ದ ಕಾಲದಲ್ಲೂ ತನ್ನ ನೃತ್ಯ ಅಭ್ಯಾಸದ ಹಂಬಲವನ್ನು ಕೈಬಿಡದೆ ಛಲದಿಂದ ಸಾಧಿಸಿ ಸಿದ್ಧಿಸಿಕೊಂಡ ಹಿರಿಮೆ ಅವರದ್ದು.

ರಾಧಾ ಅವರಿಗೆ ನೃತ್ಯ ಕಲಿಯಲು ತಕ್ಕ ವಾತಾವರಣ ಇದ್ದರೂ ತಕ್ಕ ಪ್ರೋತ್ಸಾಹ ಇರಲಿಲ್ಲ. ಮಲ್ಲೇಶ್ವರದ ಕೇಶವ ನೃತ್ಯಸಾಲೆಯ ಎದುರು ಅವರ ಮನೆ, ಗೆಜ್ಜೆ ಶಬ್ದ ಕೇಳಿದ ಕೂಡಲೇ ಕಿವಿ ನಿಮಿರಿ ಜೀವಭಾವಗಳು ಸ್ಪಂದಿಸಿ ತಾನೂ ನರ್ತಿಸಬೇಕೆಂಬ ಹಂಬಲ ಆ ಪುಟ್ಟ ಹೃದಯದಲ್ಲಿ. ಆದರೆ ಮನೆಯಲ್ಲಿ ಅನುಕೂಲ ವಾತಾವರಣ ಇಲ್ಲ. ಚಿಕ್ಕಂದಿನಲ್ಲಿ ತಂದೆಯನ್ನು ಕಳೆದುಕೊಂಡ ಇವರ ಸಂಸಾರದ ಹೊಣೆ ಪೂರ್ಣ ತಾಯಿಯ ಹೆಗಲ

# ಹೋಮ್ ವರ್ಕ್!!

ⓒ ಏಕನಾಥ್ ಕುಂಕೀಕೆರೂರು










ಮೇಲ ಬಿದ್ದಿತ್ತು. ಜೀವನ ನಿರ್ವಹಣೆಯೊಂದಿಗೆ ಮಕ್ಕಳ ವಿದ್ಯಾಭ್ಯಾಸದ ಹೊರೆ ಅವರಿಗೆ ಕಷ್ಟವೇ ಆಗಿತ್ತು. ಆದ್ದರಿಂದ ಇವರು ಬಯಸಿದ ವಿದ್ಯೆ ಕಲಿಯುವುದು ಸಾಧ್ಯವಿರಲಿಲ್ಲ. ರಾಧಾ ತನ್ನ ನೃತ್ಯ ಕಲಿಯುವ ಆಶೆ ತೋಡಿಕೊಂಡರೂ ಪ್ರಯೋಜನ ವಾಗಲಿಲ್ಲ. ಅಂತಹ ಸಂದರ್ಭದಲ್ಲಿ ಇವರ ಆಶೆಗೆ ಪೂರಕವಾಗಿ ನಿಂತು ಸಹಾಯ ಹಸ್ತ ನೀಡಿದವರು ಅವರ ದೊಡ್ಡಮ್ಮ ಆದಕ್ಕೂ ಅಜ್ಜ–ಅಜ್ಜಿಯಿಂದ ವಿರೋಧ. ಕೊನೆಗೂ ದೊಡ್ಡಮ್ಮನ ನೆರವಿನಿಂದ ಆದನ್ನೆಲ್ಲ ಎದುರಿಸಿ ರಾಧಾ ಕೇಶವ ನೃತ್ಯಶಾಲೆ ಸೇರಿಕೊಂಡರು. ಅಭ್ಯಾಸ ಆರಂಭ ಮಾಡಿದಂದಿನಿಂದ ಅತ್ಯಂತ ಶ್ರದ್ಧೆಯಿಂದ ನೃತ್ಯ ಕಲಿತು ಅನೇಕ ಕಾರ್ಯಕ್ರಮದಲ್ಲಿ ಭಾಗವಹಿಸಿದರು. ನಂತರ ಮದುವೆ ಆದ ಮೇಲೂ ರಾಧಾ ತನ್ನ ಕಲೆಯ ಸಾನ್ನಿಧ್ಯವನ್ನು ತೊರೆಯಲಿಲ್ಲ. ಇದಕ್ಕೆ ಪೂರಕವಾಗಿ ಪತಿ ಶ್ರೀಧರ್ ಅವರು ಕೂಡಾ ರಾಧಾರ ಕಲೆಯನ್ನು ಪ್ರೋತ್ಸಾಹಿಸಿ ಅವರ ಅಭ್ಯಾಸಕ್ಕೆ ನೆರವಾದರು. ರಾಧಾ ಅವರ ನೃತ್ಯಕಲೆಯ ಪ್ರಥಮ ಗುರು ಹೆಚ್.ಆರ್. ಕೇಶವಮೂರ್ತಿ. ನಂತರ ಯು.ಎಸ್. ಕೃಷ್ಣರಾವ್ ಮತ್ತು ಶ್ರೀಮತಿ ಚಂದ್ರಭಾಗಾದೇವಿ. ರಾಧಾ ಶ್ರೀಧರ್ ಇಂದಿಗೂ ಇವರಿಬ್ಬರ ಮೆಚ್ಚಿನ ಶಿಷ್ಯೆ ಅನಂತರ ಬೆಂಗಳೂರಿನ ಶ್ರೀ ಮೀನಾಕ್ಷಿ ಸುಂದರಂ ಸೆಂಟರ್ ಫಾರ್ ಫರ್‌ಫಾರ್ಮಿಂಗ್ ಆರ್ಟ್ಸ್ (Meenakshi Sundaram Centre for Performing Arts) ಸಂಸ್ಥೆಯಲ್ಲಿದ್ದ ಶ್ರೀಮುತ್ತಯ್ಯ ಪಿಳ್ಳೈ ಅವರಲ್ಲಿ ಹೆಚ್ಚಿನ ತರಬೇತಿ ಪಡೆದರು. ರಾಧಾ ಅವರ ಕಲಿಯುವಿಕೆಯ ದಾಹ ಅಲ್ಲಿಗೆ ತಣಿಯಲಿಲ್ಲ. ಮತ್ತೆ ಮೈಸೂರಿನ ಹೆಸರಾಂತ ನೃತ್ಯ ಕಲಾಪಟು ಶ್ರೀಮತಿ ವೆಂಕಟಲಕ್ಷ್ಮಮ್ಮ ಅವರಲ್ಲಿ ಭರತನಾಟ್ಯದ ಜೀವಾಳವಾದ ಅಭಿನಯದಲ್ಲಿ ಪರಿಣತಿ ಪಡೆದರು. ಹೀಗೆ ಈ ಕಲೆಯನ್ನು ಮೈಗೂಡಿಸಿಕೊಂಡು ಇವರು ತಮ್ಮ ವಿದ್ಯೆಯನ್ನು ಕಾರ್ಯಕ್ರಮ ನೀಡುವುದಕ್ಕೆ ಮೀಸಲಿಡದೆ, 1969ರಲ್ಲಿ ಒಂದು ನಾಟ್ಯಶಾಲೆಯನ್ನು ತೆರೆದರು. ಅದೇ ಇಂದು ಬೆಂಗಳೂರು ನಗರದ ಕೆಲವೇ ಹೆಸರುವಾಸಿ ಸಂಸ್ಥೆಗಳಲ್ಲಿ ಒಂದಾದ ಶ್ರೀ ವೆಂಕಟೇಶ ನಾಟ್ಯ ಮಂದಿರ.

ವೆಂಕಟೇಶ ನಾಟ್ಯ ಮಂದಿರದ ಸಾಧನೆ ವಿಶಿಷ್ಟವಾದುದು. ಅಲ್ಲಿನ ವಿದ್ಯಾರ್ಥಿ ವೃಂದವೂ ಅಷ್ಟೇ ದೊಡ್ಡದು. ಅನೇಕ ಪ್ರತಿಭಾವಂತ ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ದಾರಿದೀಪವಾದ ಸಂಸ್ಥೆ ವೆಂಕಟೇಶ ನಾಟ್ಯ ಮಂದಿರ.

ವೆಂಕಟೇಶ ನೃತ್ಯ ನಾಟಕ ಮಂದಿರ ಅನೇಕ ನೃತ್ಯ ನಾಟಕ ಕಾರ್ಯಕ್ರಮಗಳನ್ನು ರೂಪಿಸಿ ಅಭಿನಯಿಸಿ ಜನಮನ್ನಣೆ ಪಡೆದಿದೆ. ಅದರಲ್ಲಿ ಅತ್ಯಂತ ಜನಪ್ರಿಯ ನೃತ್ಯನಾಟಕಗಳೆಂದರೆ ಕೆ.ಸಿ. ರಂಗಯ್ಯ ಅವರ ರಾಮಾಯಣ, ಶ್ರೀ ತಿಪ್ಪನಾರಾಯಣ ಅವರ ಹನುಮದ್ವಿಲಾಸ, ಮತ್ತು ಕಾಳಿಯ ಮರ್ದನ. ಷಡಕ್ಷರ ಕವಿಯ ಕೋಲೂರು ಕೊಡಗೂಸು, ಜಯದೇವ ಕವಿಯ ಗೀತಗೋವಿಂದ. ಪದ್ಮ ಮಹಾಕವಿಯ ನೀಲಾಂಜನೆಯ ನೃತ್ಯ. ಬನಶಂಕರಿ ಮಹಾತ್ಮೆ ಅಭಿಜ್ಞಾನ ಶಾಕುಂತಲಾ ಹಾಗೂ ಎಸ್. ಮುಕುಂದ ಅವರ ಮಣಿಕಂಠ ಮಹಿಮೆ,.ಶಬರಿ ಮಲೈ ಅಯ್ಯಪ್ಪ ಸ್ವಾಮಿ ಮೊದಲಾದುವು ಅತ್ಯುತ್ತಮ ನೃತ್ಯನಾಟಕ ರಂಗ ಪ್ರದರ್ಶನಗಳು. ಇದಲ್ಲದೆ ಕಳೆದ ವರ್ಷ ದೂರದರ್ಶನದಲ್ಲಿ ಪ್ರಸಾರವಾದ 'ಕೃಷ್ಣಾ ನೀ ಬೇಗನೆ ಬಾರೋ' ಜನಪ್ರಿಯ ಧಾರಾವಾಹಿಯಲ್ಲಿ ನೃತ್ಯ ಸಂಯೋಜನೆ ಶ್ರೀಮತಿ ರಾಧಾ ಶ್ರೀಧರ್ ಅವರದ್ದು. ರಾಧಾ ಅವರ ನಿರ್ದೇಶನದ ಹಲವು ನೃತ್ಯ ಕಾರ್ಯಕ್ರಮಗಳು ದೂರದರ್ಶನದಲ್ಲಿ ಪ್ರಸಾರವಾಗಿವೆ. "ಮೋಹಿನಿ ಭಸ್ಮಾಸುರ" ನೃತ್ಯನಾಟಕ ಮತ್ತು "ನೆಕ್ಟರ್ ಇನ್ ದಿ ಸ್ಟೋನ್ ಸಾಂಗ್ಸ್" ಬೇಲೂರು ದೇವಾಲಯದಲ್ಲಿ ಚಿತ್ರಿಸಿರುವ ಈ ಕಾರ್ಯಕ್ರಮ ಯುಗೋಸ್ಲಾವಿಯಾದಲ್ಲಿ ನಡೆದ ಅಂತರ ರಾಷ್ಟ್ರೀಯ ಸ್ಪರ್ಧೆಯಲ್ಲಿ ತೃತೀಯ ಸ್ಥಾನ ಪಡೆದಿದೆ.

ಶ್ರೀಮತಿ ರಾಧಾಶ್ರೀಧರ್ ಅವರ ಈ ಕಲಾಸೇವೆಗೆ ಮೆಚ್ಚಿ ಅನೇಕ ಸಂಘ ಸಂಸ್ಥೆಗಳು ಅವರನ್ನು ಸನ್ಮಾನಿಸಿ ಬಿರುದುಗಳನ್ನು ನೀಡಿವೆ. 1985ರಲ್ಲಿ ಶ್ರೀ ವಿದ್ಯಾ ಕೇಂದ್ರ "ವಿಶಾರದೆ" ಎಂಬ ಬಿರುದು ನೀಡಿ ಸನ್ಮಾನಿಸಿದೆ. 1987–88ರಲ್ಲಿ ವಿಶ್ವ ಹಿಂದೂ ಪರಿಷತ್ "ನಾಟ್ಯ ವಿಶಾರದೆ" ಎಂದು ಗೌರವಿಸಿದೆ. 1991ರ ಜನವರಿಯಲ್ಲಿ ಪಟ್ಟದ ಕಲ್ಲಿನಲ್ಲಿ ನಡೆದ ನೃತ್ಯೋತ್ಸವದಲ್ಲಿ ಅತ್ಯುತ್ತಮ ಪ್ರದರ್ಶನಕ್ಕಾಗಿ ಪ್ರಮಾಣ ಪತ್ರ ನೀಡಿದ್ದಾರೆ.

ಶ್ರೀಮತಿ ರಾಧಾ ಶ್ರೀಧರ್ ಅವರ ಈ ಕಲಾವೃತ್ತಿಯ ಗೆಲುವು ನಲಿವಿನ ಅನುಭವದ ಅಭಿಪ್ರಾಯ ಅವರದ್ದೆ ಅಭಿವ್ಯಕ್ತಿಯಲ್ಲಿ.....

*ವೆಂಕಟೇಶ ನಾಟ್ಯ ಮಂದಿರ ಆರಂಭಿಸಿದಾಗ ನಿಮಗೆ ಸಾಕಷ್ಟು ವಿದ್ಯಾರ್ಥಿಗಳು ಬರುತ್ತಿದ್ದರೆ. ನೃತ್ಯ ಕಲಿಸುವ ಆಸಕ್ತಿ ತಂದೆ ತಾಯಿಗಳಲ್ಲಿ ಇತ್ತೆ.*

ನೃತ್ಯ ಕಲೆ ಒಂದು ವಿಸ್ತೃತ ಪ್ರಪಂಚ. ಇಲ್ಲಿ ನಾನು ಪರಿಪೂರ್ಣತೆಯನ್ನು ಸಾಧಿಸಬಲ್ಲೆ ಎಂಬ ನಂಬಿಕೆ ನನಗಿರಲಿಲ್ಲ. ಆರಂಭದ ದಿನಗಳಲ್ಲಿ ನಾನು ಬೋರ್ಡು ಹಾಕಿ ತರಗತಿ ಆರಂಭಿಸಲಿಲ್ಲ. ನನ್ನ ಮಗಳು ಇಂದ್ರಾಣಿಯೇ ನನ್ನ ಪ್ರಥಮ ವಿದ್ಯಾರ್ಥಿನಿ. ಅವಳು ಚೆನ್ನಾಗಿ ನರ್ತಿಸುವುದನ್ನು ನೋಡಿದ ಕೆಲವು ಪೋಷಕರು ಒಬ್ಬೊಬ್ಬರಾಗಿ ತಮ್ಮ ಮಕ್ಕಳನ್ನು ಸೇರಿಸಲು ಆರಂಭಿಸಿದರು.

*ನಿಮ್ಮ ನಾಟ್ಯ ಮಂದಿರ ಆರಂಭವಾದಾಗ ಬೆಂಗಳೂರಿನಲ್ಲಿ ಹೆಚ್ಚು ನೃತ್ಯಶಾಲೆಗಳು ಇದ್ದವೆ?*

ಬಹಳಷ್ಟು ಇರಲಿಲ್ಲ. ಬೆರಳೆಣಿಕೆಯಲ್ಲಿ ಕೆಲವೇ ಶಾಲೆಗಳು ಮಾತ್ರ ಇದ್ದುವು. ಅದರಲ್ಲಿ ನಮ್ಮ ಗುರುಗಳಾದ ಶ್ರೀಯು. ಎಸ್. ಕೃಷ್ಣಸ್ವಾಮಿ ಮತ್ತು ಶ್ರೀಮತಿ ಚಂದ್ರಭಾಗಾದೇವಿಯವರ ನಾಟ್ಯಶಾಲೆ ಮತ್ತು ನಾನು ಮೊದಲು ಕಲಿತ ಕೇಶವ ನೃತ್ಯ ಶಾಲೆ ಹಾಗೂ ವಿ.ಎಸ್. ಕೌಶಿಕ್ ಅವರ ನೃತ್ಯಶಾಲೆಗಳು ಪ್ರಧಾನವಾಗಿದ್ದುವು.

*ನಿಮ್ಮ ಕಾರ್ಯಕ್ರಮಗಳಿಗೆ ಪ್ರೇಕ್ಷಕರ ಪ್ರೋತ್ಸಾಹ ಹೇಗಿರುತ್ತಿತ್ತು?*

ನನ್ನ ಕಾರ್ಯಕ್ರಮಗಳಿಗೆ ಕಿಕ್ಕಿರಿದ ಕಲಾಪ್ರೇಮಿ ಪ್ರೇಕ್ಷಕರ ವೃಂದ ಸೇರುತ್ತಿತ್ತು. ಜನರಿಗೆ ನೃತ್ಯದ ಬಗೆಗೆ ಆಸಕ್ತಿ ಇತ್ತು ಎನ್ನುವುದರ ದ್ಯೋತಕ ಅದು. ಮೇಲಾಗಿ ಆಗ ಇಂದಿನಂತೆ ದೂರದರ್ಶನ ಮಾಧ್ಯಮವು ಇರಲಿಲ್ಲವಲ್ಲ. ಮನರಂಜನೆಯ ದೃಷ್ಟಿಯಿಂದಲೋ ಕಲೆಯ ದೃಷ್ಟಿಯಿಂದಲೋ ನೋಡುವ ಸಹೃದಯರಂತೂ ನೆರೆಯುತ್ತಿದ್ದರು.

*ನೀವು ಕಲಿತದ್ದು ಬಿ.ಎ. ಬಿ.ಎಡ್.. ಈ ಕಾಲದಲ್ಲಿ ನೀವು ಅರ್ಜಿ ಸಲ್ಲಿಸಿದರೆ ಸಾಕಿತ್ತು ಸಾಕಷ್ಟು ಅವಕಾಶಗಳು ಇದ್ದವಲ್ಲ, ಆದರೂ ನೀವು ನೃತ್ಯ ಕಲಿಸುವಲ್ಲೇ*

ಏಕೆ ಆರಿಸಿದಿರಿ?

ನೃತ್ಯ ನನ್ನ ಜೀವದ ಮಿಡಿತ, ನನ್ನ ಅಂತಸ್ಫೂರ್ತಿ ಆಗಿದ್ದಾಗ ಅದನ್ನು ಬಿಟ್ಟು ನಾನು ಬೇರೊಂದನ್ನು ಆರಿಸಿಕೊಳ್ಳುವುದು ಸಾಧ್ಯವಿರಲಿಲ್ಲ. ಆ ಕಾಲದಲ್ಲಿ ಕೆಲಸಕ್ಕೆ ಏನೂ ಕಷ್ಟಪಡಬೇಕಾಗಿರಲಿಲ್ಲ ನಿಜ. ಆದರೂ ನನಗೆ ಆ ಕಡೆಗೆ ಅಂತಹ ಆಸಕ್ತಿ ಇರಲಿಲ್ಲ. ನೃತ್ಯದತ್ತವೂ ನನ್ನ ಒಲವು ಹೆಚ್ಚಾಗಿದ್ದುದರಿಂದ ಪ್ರವೃತ್ತಿ – ವೃತ್ತಿಯಾಯಿತು.

ಈ ನೃತ್ಯಶಾಲೆ ನಡೆಸುವುದರಿಂದ ನಿಮಗೆ ಆರ್ಥಿಕವಾಗಿ ನೆರವಾಗುತ್ತಿದೆಯೋ ಅಥವಾ ನಷ್ಟವಾಗುತ್ತಿದೆಯೋ?

ಈ ವೃತ್ತಿ ನನಗೆ ಆರ್ಥಿಕವಾಗಿಯೂ ಸಾಕಷ್ಟು ನೆರವಾಗಿದೆ. ಮಾನಸಿಕ ನೆಮ್ಮದಿಯಂತೂ ಇದ್ದೇ ಇದೆ. ಯಾವುದೇ ಕೆಲಸದಲ್ಲಿ ಮಾನಸಿಕ ನೆಮ್ಮದಿ ಮುಖ್ಯ. ಬೇರೆ ಯಾವುದಾದರೂ ಕೆಲಸ ಆಯ್ದುಕೊಂಡಿದ್ದರೆ ಹಣ ಸಿಗುತ್ತಿತ್ತು. ಅಧಿಕಾರವೂ ಸಿಗುತ್ತಿತ್ತು. ಮನಸ್ಸಿಗೆ ತೃಪ್ತಿ ಸಿಗುತ್ತಿತ್ತೆಂದು ಹೇಳಲು ಬರುವುದಿಲ್ಲ. ಈ ಕೆಲಸ ಬಹಳ ಶ್ರಮದಾಯಕವಾದದ್ದು ಕೆಲವರನ್ನು ತಿದ್ದಿ ಸರಿಯಾಗಿ ಕಲಿಸುವುದು ಬಹಳ ಕಷ್ಟ. ಎಷ್ಟೋ ಸಲ ಬೇಸರ ಬಂದಿದೆ. ಆದರೆ ಅರೆ ಕ್ಷಣದಲ್ಲಿ ನಾನು ಮತ್ತೆ ಗೆಜ್ಜೆಯ ನಾದಕ್ಕೆ ಮಣಿಯುತ್ತೇನೆ. ಅದೇ ನನ್ನನ್ನು ಆಳುತ್ತದೆ. ಈ ಕೆಲಸ ನನಗೆ ಹಣ ಮತ್ತು ತೃಪ್ತಿ ಎರಡನ್ನೂ ಕೊಟ್ಟಿದೆ ಎಂದರೆ ಉತ್ಪ್ರೇಕ್ಷೆ ಅಲ್ಲ.

ಮೊದಲು ನಿಮಗೆ ಸರಕಾರದ ಕಾರ್ಯಕ್ರಮಗಳು ದೊರೆಯುತ್ತಿದ್ದವೋ ಅಥವಾ ಇತ್ತೀಚೆಗೆ ಆರಂಭವಾಯಿತೋ. ಈ ಕಾರ್ಯಕ್ರಮದಿಂದ ನಿಮಗೆ ಹೆಚ್ಚು ಸಹಾಯವಾಗುತ್ತಿದೆಯೋ?

ಕೆಲವು ವರ್ಷಗಳ ಹಿಂದಷ್ಟೆ ಸರಕಾರದ ಕಾರ್ಯಕ್ರಮ ಕೊಡಲು ಪ್ರಾರಂಭಿಸಿದ್ದು, ಅಂದರೆ ದಿವಂಗತ ದೇವರಾಜ ಅರಸು ಅವರು ಮುಖ್ಯಮಂತ್ರಿಯಾಗಿದ್ದಾಗ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಮೂಲಕ ನಮ್ಮಂತಹ ಕಲಾವಿದರನ್ನು ಗುರುತಿಸುವ ಕೆಲಸ ಪ್ರಾರಂಭವಾದದ್ದು. ಅದಕ್ಕೆ ಮೊದಲು ಶ್ರೀಮತಿ ವಿಮಲ ರಂಗಾಚಾರ್ಯ ಅವರು ಬಾಲಭವನದ ಕಾರ್ಯದರ್ಶಿ ಆಗಿದ್ದರು. ಅವರು ಮಕ್ಕಳ ನೃತ್ಯೋತ್ಸವ ಕಾರ್ಯಕ್ರಮ ಹಾಕಿಕೊಂಡು ನಮಗೆಲ್ಲ ಬಹಳಷ್ಟು ಅವಕಾಶ ಕೊಡುತ್ತಿದ್ದರು. ಇದು ನಮಗೆ ಹೆಚ್ಚು ಪ್ರೋತ್ಸಾಹದಾಯಕವಾಗಿತ್ತು. ಈಗಲೂ ಸರಕಾರದ ಕಾರ್ಯಕ್ರಮಗಳು ಸಿಗುತ್ತವೆ. ಅವಕಾಶಗಳು ಕಡಿಮೆ ಆದ ಕಾರಣ ಈಗ ನೃತ್ಯಶಾಲೆಗಳು ಬಹಳಷ್ಟು ಇವೆ. ಸರಕಾರ ಕಾರ್ಯಕ್ರಮ ದೊರೆತರೆ ನಮಗೆ ಬಹಳ ಅನುಕೂಲ.

ನೀವು ಕಾರ್ಯಕ್ರಮ ನಡೆಸಲು ಬೇರೆ ಬೇರೆ ಊರುಗಳಿಗೆ ತಿರುಗುವಾಗ ಅಲ್ಲಿನ ಜನರು ಪ್ರತಿಕ್ರಿಯೆ ಹೇಗಿರುತ್ತದೆ. ಅವರ ಪ್ರೋತ್ಸಾಹ, ಸಹಕಾರ ದೊರೆಯುತ್ತದೆಯೇ?

ಕೆಲವು ಖಾಸಗಿ ಸಂಸ್ಥೆಯವರು ಕರೆದು ಕಾರ್ಯಕ್ರಮ ನಡೆಸಿದರೆ ಅಲ್ಲಿ ಎಲ್ಲಾ ವ್ಯವಸ್ಥೆ ಇರುತ್ತದೆ. ಜನರು ಒಳ್ಳೆಯ ರೀತಿಯಲ್ಲಿ ಉಪಚರಿಸುತ್ತಾರೆ. ಆದರೆ ಸರಕಾರಿ ಕಾರ್ಯಕ್ರಮಗಳಲ್ಲಿ ಕೆಲವು ಕಡೆ ವ್ಯವಸ್ಥೆಯೇ ಇರುವುದಿಲ್ಲ. ಸರಿಯಾದ ವೇದಿಕೆ ಕೂಡ ಇರುವುದಿಲ್ಲ. ಹೆಣ್ಣುಮಕ್ಕಳಿಗೆ ಉಡುಗೆ–ತೊಡುಗೆ ಬದಲಾಯಿಸಲು ನೇಪಥ್ಯದ ವ್ಯವಸ್ಥೆ ಇಲ್ಲದೆ ತೊಂದರೆ ಪಟ್ಟದ್ದೂ ಉಂಟು. ಆದರೂ ನಾವು ಅದನ್ನೆಲ್ಲ ಹೇಳಿಕೊಳ್ಳುವಂತಿಲ್ಲ. ತೆರೆಯ ಹಿಂದಿನ ಬದುಕಿನಲ್ಲಿ ಕಷ್ಟಗಳಿವೆ ಎಂಬುದು ಬಹಳ ಮಟ್ಟಿಗೆ ಸಹಜ.

ಈ ವೃತ್ತಿಯಲ್ಲಿ ನಿಮ್ಮ ಇಷ್ಟು ವರ್ಷಗಳ ಅನುಭವದಲ್ಲಿ ನೃತ್ಯ ಕಲಿಯುವ ವಿದ್ಯಾರ್ಥಿನಿಯರ ಬಗೆಗೆ ನಿಮ್ಮ ಅಭಿಪ್ರಾಯ ಏನು?

ವಿದ್ಯಾರ್ಥಿನಿಯರಲ್ಲಿ ನೃತ್ಯಕಲೆಯನ್ನು ಮುಂದುವರಿಸಿಕೊಂಡು ಹೋಗುವವರು ಬಹಳ ವಿರಳ. ಮದುವೆಯ ನಂತರ ಕೆಲವು ಕುಟುಂಬಗಳಲ್ಲಿ ಇದಕ್ಕೆ ಅನುಮತಿ ಇಲ್ಲದೆ ಬಿಡುವವರ ಸಂಖ್ಯೆ ಹೆಚ್ಚು. ಕೆಲವರಲ್ಲಿ ವಿಶೇಷ ಪ್ರತಿಭೆ ಇರುತ್ತದೆ. ಇನ್ನು ಕೆಲವರಿಗೆ ಇದೊಂದು ಫ್ಯಾಶನ್. ನಾನು ನೃತ್ಯ ಕಲಿತಿದ್ದೇನೆ ಎಂದು ಹೇಳಿಕೊಳ್ಳಲಿಕ್ಕಷ್ಟೆ. ಇನ್ನು ಕೆಲವರಿಗೆ ಪರೀಕ್ಷೆ ಕಟ್ಟಿ ಸರ್ಟಿಫಿಕೇಟ್‌ಗಳನ್ನು ಸಂಪಾದಿಸುವುದಕ್ಕೆ ಸೀಮಿತ. ಹೀಗೆ ವಿಭಿನ್ನ ರೀತಿಯ ವಿದ್ಯಾರ್ಥಿಗಳಿಂದ ಹಲವಾರು ಬಗೆಯ ಅನುಭವಗಳಾಗುತ್ತವೆ. ನಿಜವಾದ ಕಲಾಪ್ರತಿಭೆಯಿಂದ ಬಂದು ಕಲಿಯುವವರ ಸಂಖ್ಯೆ ಕಡಿಮೆ. ಈ ಪ್ರಜ್ಞೆ ತಂದೆತಾಯಿಯರಲ್ಲಿ ಇದ್ದಾಗ ಮಕ್ಕಳಲ್ಲೂ ಆ ಪರಿಣಾಮ ಆಗುತ್ತದೆ. ಅಂತಹವರಿಗೆ ಹೆಚ್ಚಿನ ಅವಕಾಶ ಇರಬೇಕಾಗುತ್ತದೆ. ಅದು ಸಾರ್ಥಕ ಕೂಡ.

—ನಳಿನಿ ವೆಂಕಪ್ಪ

## ನಿಬಂಧನೆಗಳು

ಮಹಿಳೆಯರ ಸ್ಮರಣ ಶಕ್ತಿಗೆ ಹೊಸ ಹರಿತವನ್ನೊದಗಿಸಿ, ಸೀಮಿತ ಚೌಕಟ್ಟಿನಲ್ಲಿ ಬೇರೆ ಬೇರೆ ವಿಷಯಗಳ ಕಿರು ಪರಿಚಯ ನೀಡುವ **ವನಿತಾ ಪದಸಂಪದ** ಶಬ್ದ ಸಂಪತ್ತಿಗೆ ಒಂದು ಪರೀಕ್ಷೆ ಕೂಡ. ಮನರಂಜನೆಯೊಂದಿಗೆ ಮನೋವಿಕಾಸಕ್ಕೂ ಸಹಾಯಕವಾಗಿರುವ, ಮಹಿಳೆಯರು ಮಾತ್ರ ಪಾಲ್ಗೊಳ್ಳಲು ಅವಕಾಶವಿರುವ ವಿಶಿಷ್ಟ ಸ್ಪರ್ಧೆ.

ಆಧಾರಗಳನ್ನು ಅನುಸರಿಸಿ ನಿಮ್ಮ ಉತ್ತರಗಳನ್ನು ಪಕ್ಕದ **ವನಿತಾ ಪದಸಂಪದ** ಚೌಕದಲ್ಲಿ ಭರ್ತಿ ಮಾಡಿ 1992 ರ ಅಕ್ಟೋಬರ್ 25 ನೇ ದಿನಾಂಕದೊಳಗೆ "ವನಿತಾ ಪದಸಂಪದ, ಚಂದಮಾಮ ಬಿಲ್ಡಿಂಗ್ಸ್, ಮದರಾಸು–600 026" ಈ ವಿಳಾಸಕ್ಕೆ ಕಳುಹಿಸಿರಿ. ಉತ್ತರ **ವನಿತಾ ಪದಸಂಪದ** ಚೌಕದಲ್ಲಿರಬೇಕಾದುದು ಅವಶ್ಯ. ಸರಿಯಾದ ಉತ್ತರಕ್ಕೆ ಬಹುಮಾನ.

ಲಕೋಟೆಯಲ್ಲಿ "ವನಿತಾ ಪದಸಂಪದ" ಚೌಕದ ಹೊರತು ಬೇರೇನೂ ಇರಕೂಡದು. ಒಂದು ಲಕೋಟೆಯಲ್ಲಿ ಒಂದೇ ಪ್ರವೇಶಿಕೆ ಇರಬೇಕು. ಚೌಕಗಳಲ್ಲಿರುವ ಅಕ್ಷರಗಳು ಸ್ಪಷ್ಟವಾಗಿ ತಿಳಿಯುವಂತಿದ್ದು ಚಿತ್ತುಗಳೂ, ತಿದ್ದುಪಡಿಗಳೂ ಇರಬಾರದು. ಇದರ ಸರಿಯಾದ ಉತ್ತರ

# ವನಿತಾ ಪದಸಂಪದ

ರೂ 250 ಬಹುಮಾನ!

**50**

ವನ್ನು 1992 ರ ಡಿಸೆಂಬರ್ 'ವನಿತಾ' ದಲ್ಲಿ ಪ್ರಕಟಿಸಲಾಗುತ್ತದೆ. ನಮ್ಮಲ್ಲಿರುವ ಉತ್ತರಗಳಿಗೆ ಸರಿಹೊಂದುವ ಉತ್ತರ ಕಳಿಸಿದವರಿಗೆ ರೂ. 250/– ಬಹುಮಾನ ನೀಡಲಾಗುತ್ತದೆ. ಸರಿಯಾದ ಉತ್ತರ ಕಳುಹಿಸಿದವರ ಸಂಖ್ಯೆ ಒಂದಕ್ಕಿಂತ ಹೆಚ್ಚಾಗಿದ್ದರೆ ಬಹುಮಾನದ ಹಣವನ್ನು ಹಂಚಲಾಗುತ್ತದೆ. ಹಾಗೂ ಬೇರೆ ಯಾವುದೇ ರೀತಿಯ ತೀರ್ಮಾನವನ್ನು ತೆಗೆದುಕೊಳ್ಳುವ ಅಧಿಕಾರ ಸಂಪಾದಕ ವರ್ಗಕ್ಕಿದ್ದು ಈ ವಿಷಯದಲ್ಲಿ ಪತ್ರ ವ್ಯವಹಾರಕ್ಕೆ ಅವಕಾಶವಿಲ್ಲ. 'ವನಿತಾ'ದಲ್ಲಿ ಕೆಲಸ ಮಾಡುವವರಾಗಲಿ ಅವರಿಗೆ ಸಂಬಂಧಿಸಿದವರಾಗಲಿ ಇದರಲ್ಲಿ ಭಾಗವಹಿಸುವಂತಿಲ್ಲ.

### ಎಡದಿಂದ ಬಲಕ್ಕೆ

1. ಅಪ್ಪನ ಜೇಬಿನ ದುಡ್ಡುಗಳೆಲ್ಲ ಚಟ–ಪಟ ಗುಟ್ಟಿಸಲು ಬರುತ್ತಿರುವ ಹಬ್ಬ (4)
3. ಮೈಸೂರರಸರ ವೈಭವವನ್ನು ನೆನಪಿಸುವ ಬರಲಿರುವ ಹಬ್ಬ (4)
6. ಬಡಾ ಮನುಷ್ಯನಲ್ಲ – ಏನೂ ಇಲ್ಲದವ (3)
8. ಹೂವಿನ ಪರಾಗವೂ ಆಗಬಹುದಾದ ಮೂರು ಗುಣಗಳಲ್ಲಿ ಒಂದು (3)
10. ಭಾರವನ್ನು ಹೊರುವ ಕೂಲಿಯಾಳು – ಮಾಲತಿಗೆ ಹತ್ತಿರವಾದವ (3)
12. ಮರದಿಂದ ಮರಕ್ಕೆ ನೆಗೆಯುವ ಮಾನವನ ಮೂಲ ವಂಶದ ಪ್ರಾಣಿ (2)
13. ತಿಲಕ ಇರಿಸಿಕೊಂಡಾಗ ಸಿಕ್ಕ ಧಾನ್ಯ (2)
15. ಹಣ್ಣಿನಂತೆ ಯಶಸ್ವಿಯಾದದ್ದು (4)
16. ಲಾವಾರಸ ಖಂಡಿತ ಅಲ್ಲ, ಇದು ಜೊಲ್ಲು (4)
18. ಎಲ್ಲರಿಗೆ ಮಾದರಿಯಾದ ತಾಯಿ (2)
19. ಮಕ್ಕಳಿಗೆ ಇದು ಬಹಳ ಮುಖ್ಯ (2)
20. ರುಂಡವನ್ನು ವಿಕ್ರಯಿಸಿದ ಹೋಳಿಗೆ (4)
22. ಕೆಲಸಕ್ಕೆ ಆಯ್ಕೆಯಾದವ ಈ ನಿರೀಕ್ಷೆಯಲ್ಲಿರುತ್ತಾನೆ (4)
24. ಮತದಾನ ದಿನದಂದು ಕವಿದ ಕತ್ತಲೆ (2)
26. ನಾಟಕ–ಚಲನಚಿತ್ರಗಳಲ್ಲಿ ಆತ ವಹಿಸುವುದು (2)
27. ಗತಕಾಲದ ಸಂಖ್ಯೆಗಳನ್ನು ತೋರಿಸುವ ಶಾಸ್ತ್ರ (3)
29. ಮರವನ್ನು ಹತ್ತಬಲ್ಲ ಮೊಸಳೆ (3)
31. ಪಚನಕ್ರಿಯೆಯ ಬಹು ಮುಖ್ಯ ಅಂಗ (3)
32. ತಲೆ ರುಂಡವನ್ನು ಹಿಡಿದ ಕೈಲಾಸದ ಶಕ್ತಿ ದೇವತೆ (4)
33. ಪ್ರಜಾಪ್ರಭುತ್ವದಲ್ಲಿ ಇದಕ್ಕೆ ಮಹಪ್ರದ ಬೆಲೆ (4)

### ಮೇಲಿನಿಂದ ಕೆಳಕ್ಕೆ

1. ನಾರಿಯರು ಚಲಾವಣೆ ಮಾಡುವ ಚಿನ್ನದ ನಾಣ್ಯ (3)
2. ಹೆಂಗಸಿನ ಇದನ್ನು ಕೇಳಬಾರದು (3)
4. ಅನುಗ್ರಹ ನೀಡಿದ್ದು ವರಾಹ ಮುದ್ರೆಯ ನಾಣ್ಯ (3)
5. ಶಿವ ಕೈಲಿ ಹಿಡಿದ ಈಟಿ (3)
6. ಬಳಿ ಬರುವ ನೆಂಟರ ಗುಂಪು (3)
7. ಸತಿಯೊಡನೆ ಇರಬಹುದಾದ ವಾಸಸ್ಥಳ (3)
9. ಜಲದಲ್ಲಿ ಸಿಗುವ ಇದು ತುಂಬಾ ಕ್ಲಿಷ್ಟ (3)
11. ರಸಪುರಿ, ಬಾದಾಮಿ ಜಾತಿಗಳ ಹಣ್ಣನ್ನು ನೀಡುವ ವೃಕ್ಷ (3)
12. ಅಜೀರ್ಣವಾದಾಗ ಬರುವ ಮೆಲುಗಾಳಿ (5)
14. ಹಣೆಯ ಮೇಲೆ ಕಣ್ಣನ್ನು ಹೊಂದಿದವ (5)
15. ಫಲ ನೀಡಿದ ಪರಿಣಾಮ (3)
17. ಮಾಲೆ ಹಾಕಿಕೊಂಡು ಸಾಲು ಮಾಡಿದ ಸರದಿ (3)
21. ಗಣಿತವನ್ನು ಬರೆಯಲು ಸಾಧನ (3)
23. ಕೈಲಾಸಕ್ಕೆ ಹೋಗಲು ಮಾಡಬೇಕಾದ ಕೆಲಸ (3)
25. ಮಜ ಮಾಡಲೇ ಜನುಮ ನೀಡಿದವ (3)
26. ಪಂಡಿತನ ಜೊತೆಗೆ ಇದ್ದರೂ ಈತ ದಡ್ಡ (3)
27. ಮಗ ಹಾಡಿದ ಕಾವ್ಯವಾಚನ (3)
28. ಅಪ್ಪಿಕೊಳ್ಳಲಿ ಎಂದಾಗ ಬಂದವ ಅನಾಥ (3)
29. ಮನದಲ್ಲೇ ಇರುವ ಕೊಳೆಯಾದದ್ದು (3)
30. ಜತೆಗೆ ಬಂದ ಬೆಳ್ಳಿ (3)

—ಮಲ್ಲಿಕಾ ಪ್ರಹ್ಲಾದ್

ವನಿತಾ ಪದಸಂಪದ — 50



ಹೆಸರು ..........................................................

ವಿಳಾಸ ..........................................................

..........................................................

..........................................................

# ವಾರ್ತಾ ವನಿತಾ

ನಾಗಮಂಡಲದ ವಾಸವಿ ಯುವತಿ ಮಂಡಲಿಯವರು ಗೋಕುಲಾಷ್ಟಮಿ ಪ್ರಯುಕ್ತ ಮಕ್ಕಳಿಗೆ ಕೃಷ್ಣನ ಅಲಂಕಾರ ಸ್ಪರ್ಧೆಯನ್ನು ಏರ್ಪಡಿಸಿದರು.

ಶೆಡ್ತೀಕೆರೆಯ ಮಹಿಳಾ ಸಮಾಜದವರು ಇತ್ತೀಚೆಗೆ ಯೋಗಾಸನ ತರಬೇತಿ ಶಿಬಿರವೊಂದನ್ನು ನಡೆಸಿದರು.








ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯವರು ಕಳೆದ ಮೇ ತಿಂಗಳಲ್ಲಿ ನಡೆಸಿದ ಕನ್ನಡ ಟೈಪ್‌ರೈಟಿಂಗ್ ಜ್ಯೂನಿಯರ್ ಗ್ರೇಡ್ ಪರೀಕ್ಷೆಯಲ್ಲಿ ನಾಲ್ಕನೇ ರ್‍ಯಾಂಕ್ ಗಳಿಸಿದ ಕೊಡಾಜೆ ಪ್ರಭಾ ವಾಣಿಜ್ಯ ವಿದ್ಯಾ ಶಾಲೆಯ ವಿದ್ಯಾರ್ಥಿನಿ ಎಸ್. ಎಸ್. ಸ್ವರ್ಣಲತಾ

ಬೆಂಗಳೂರಿನ ಆರ್ಟ್ ಟೀಚರ್ಸ್ ಕ್ಲಬ್‌ನಲ್ಲಿ ಇತ್ತೀಚೆಗೆ ಶ್ರೀಮತಿ ಮೋನೋಕ್ರೊಮಾಟಿಕ್ ಪೈಂಟಿಂಗ್ ಮತ್ತು ಕೇಶಾಲಂಕಾರವನ್ನೂ ಸುಪ್ರಭ ಮತ್ತು ಬೃಂದ ಅವರು ಗೀತ ಪ್ರವಚನವನ್ನೂ ನಡೆಸಿಕೊಟ್ಟರು.





ದಿ. 24–8–1992ರಂದು ರಾಜಾಜಿನಗರದ ಯುವತಿ ಮತ್ತು ಮಹಿಳಾ ಮಂಡಳಿಯ ಸದಸ್ಯೆಯರಿಗೆ ಅತಿ ಉಪಯುಕ್ತವಾದ ಸೋಪುಪುಡಿ, ಫಿನಾಯಿಲ್, ಲಿಕ್ವಿಡ್ ಸೋಪ್ ತಯಾರಿಕಾ ತರಗತಿಯನ್ನು ಉಚಿತವಾಗಿ ನಡೆಸಿದರು.



ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ಬೆಂಗಳೂರು ಇವರು ನಡೆಸಿದ ವಾಣಿಜ್ಯ ಪರೀಕ್ಷೆಯಲ್ಲಿ ಉಡುಪಿ ತಾಲೂಕಿನ ಕಲ್ಯಾಣಪುರ ಮಾಡರ್ನ್ ವಿದ್ಯಾಲಯದ ವಿದ್ಯಾರ್ಥಿನಿ ಕುಮಾರಿ ಶರ್ಮಿಳಾ ಎನ್. ರಾವ್ ಇವರು ಇಂಗ್ಲೀಷ್ ಟೈಪ್‌ರೈಟಿಂಗ್‌ನಲ್ಲಿ ಪ್ರಥಮ ದರ್ಜೆಯಲ್ಲಿ ರ್‍ಯಾಂಕ್ ಪಡೆದರು.



ಹೊಸಬೆಟ್ಟು ಗ್ರಾಮದ ವನಿತಾ ಸಮಾಜದ ವತಿಯಿಂದ ಸ್ವಾತಂತ್ರ್ಯ ದಿನಾಚರಣೆ ಮತ್ತು ಬಾಲವಾಡಿ ಮಕ್ಕಳಿಗೆ ಹೊಸಬೆಟ್ಟು ಗ್ರಾಮಸಂಘದಲ್ಲಿ ಸಮವಸ್ತ್ರ ವಿತರಿಸಲಾಯಿತು.



ಬಿಜಾಪುರದ ಶ್ರೀದೇವಿ ಉದಯ ಮಹಿಳಾ ಮಂಡಲದಲ್ಲಿ ಇತ್ತೀಚೆಗೆ 'ತಾಯಿ–ಮಗು' ವಿಚಾರ ಸಂಕಿರಣ ನಡೆಯಿತು. ಹಾಗೂ ಕೊನೆಯಲ್ಲಿ ಆರೋಗ್ಯವಂತ ತಾಯಿ ಮಕ್ಕಳನ್ನು ಗೌರವಿಸಲಾಯಿತು.



ಹುಬ್ಬಳ್ಳಿಯ ಇನ್ನರ್‌ವ್ಹೀಲ್ ಕ್ಲಬ್ ಪರವಾಗಿ ಹುಬ್ಬಳ್ಳಿ–ಧಾರವಾಡ ವಲಯದ ಮಹಿಳೆಯರಿಗಾಗಿ ಹುಬ್ಬಳ್ಳಿಯ ಮಹಿಳಾ ವಿದ್ಯಾಪೀಠದಲ್ಲಿ 22–8–92ರಂದು ರಂಗೋಲಿ ಸ್ಪರ್ಧೆ ಏರ್ಪಡಿಸಲಾಗಿತ್ತು.

ಮಂಡ್ಯದ ರೋಹಿಣಿ ಮಹಿಳಾ ಮಂಡಲಿಯು 25–8–1992ರಂದು ಮಂಡ್ಯದ ಕಲ್ಲಹಳ್ಳಿ ಬಡಾವಣೆಯಲ್ಲಿ ವಿಶ್ವ ಹಿಂದು ಪರಿಷತ್ ಆಶ್ರಯದಲ್ಲಿ ನಡೆಸುತ್ತಿರುವ ಪ್ರಾಥಮಿಕ ಶಾಲೆಗೆ ಆರು ಬೆಂಚುಗಳನ್ನು ದಾನ ಮಾಡಿತು.





ಬಿಜಾಪುರದ ಸುಪ್ರಿಯಾ ಮಹಿಳಾ ಮಹಾ ಮಂಡಳದ ಸದಸ್ಯರು ದಿ–3–10–1992ರಂದು ಗ್ಯಾಂಗ ಚಾವಡಿ ಕೆ.ಎಸ್.ಆರ್.ಟಿ.ಸಿ. ಕಾಲನಿಯಲ್ಲಿ ಗಿಡ ನೆಡುವ ಕಾರ್ಯಕ್ರಮ ನಡೆಸಿದರು.

ಮನೆಗೆ ಬರುವ ಸೂಕ್ಷ್ಮ ಸೌಂದರ್ಯ ಅರಿವ ಕಲೆ; ಸಮಾಜ ಹಾಗೂ ನಿಸರ್ಗ ಶಕ್ತಿಗಳೊಂದಿಗೆ ಸೌಹಾರ್ದಯುತವಾಗಿ ಬೆರೆತು ಬಂದಾಗಲೇ ಅದು "ಜೀವಂತ ಕಲೆ" ಯಾಯಿತು!

ಇಂತಹ ಅನುಪಮ ಕಲೆಯೊಂದಿಗೆ ಬೆರೆತು ಕಲೆಯಲ್ಲಿಯೇ ಹೊಸ ಜಗತ್ತನ್ನು ಕಂಡು, ನೋಡುವ ನೇತ್ರಗಳಿಗೆ ಅಪಾರ ಆನಂದ ನೀಡುವ ಶ್ರೀಮತಿ ಹೇಮಾಶೇಖರ್ (38)ರವರ ಕೈ ಚಳಕದಿಂದ ಸೃಷ್ಟಿಯಾದ ವಿವಿಧ ಕಲಾ ದೃಶ್ಯಗಳು ಮೈ ಮರೆಯುವಂತೆ ಮಾಡಿದರೆ ಅದು ಹೇಮಾ ಶೇಖರ್‌ರವರ ಅದ್ಭುತ ಕಲಾಸಾಹಸಕ್ಕೆ ಪುರಾವೆ ಎನ್ನಿಸುತ್ತದೆ.

ಕೆ. ಲಿಂಗಪ್ಪ ಹಾಗೂ ಕರಕುಶಲ ಉತ್ತಮ ಕಲಾವಿದೆ ಎನಿಸಿದ ಲಕ್ಷ್ಮಿದೇವಮ್ಮ ದಂಪತಿಗಳ ಪುತ್ರಿ ಹೇಮಾಗೆ ತಮ್ಮ ತಂದೆ ಮಾಡಿ ಇಟ್ಟಿದ್ದ ಪೇಯಿಂಟಿಂಗ್ ನೋಡಿ ತಾನೂ ಅವರಂತೆಯೇ ಕಲಾಕಾರಳಾಗಬೇಕೆಂಬ ಬಯಕೆ ಚಿಗುರೊಡೆಯಿತು.

ಪೇಯಿಂಟಿಂಗ್ ಕಲಿಯುವ ಆಸೆ ದೂರ ಉಳಿದರೂ ಹೆತ್ತವರು ಮಾಡುತ್ತಿದ್ದ ಕೆಲಸವನ್ನು ಆಸ್ಥೆಯಿಂದ ಗಮನಿಸಿ ತಮ್ಮ 11ನೇ ವರ್ಷದಲ್ಲಿ ನೋಟ್ ಬುಕ್‌ವೊಂದನ್ನು ನೋಡಿಕೊಂಡು 'ಗಣಪತಿ' ಚಿತ್ರವನ್ನು ಗ್ಲಾಸ್ ಪೆಯಿಂಟಿಂಗ್ ಮಾಡಿದ್ದನ್ನು ನೋಡಿದ ಇವರ ದೊಡ್ಡಪ್ಪನ ಮಗಳು ಗಣಪತಿ ಚಿತ್ರವನ್ನು ನೋಡಿ ಮೆಚ್ಚಿಕೊಂಡು ಈ ಚಿತ್ರ ತಮಗೇ ಇರಲಿ ಎಂದು ಇಟ್ಟುಕೊಂಡಿದ್ದನ್ನು ನೆನಪು ಮಾಡಿಕೊಂಡ ಈ ಕಲಾವಿದೆ ಇಂದು ಕಲಾರಂಗದಲ್ಲಿ ತಮ್ಮದೇ ಆದ ಅದ್ವಿತೀಯ ಸ್ಥಾನ ಪಡೆದಿರುವುದಕ್ಕೆ ಇವರಲ್ಲಿನ ಏಕಾಗ್ರತೆ, ಶ್ರದ್ಧೆ, ಮುಖ್ಯ ಕಾರಣ.

19ನೇ ವಯಸ್ಸಿನಲ್ಲಿ ದ್ವಿತೀಯ ಬಿ.ಎಸ್ಸಿ ವ್ಯಾಸಂಗ ಮಾಡುತ್ತಿದ್ದ ಹೇಮಾರವರು ಇಂಜಿನೀಯರ್ ಟಿ.ಎಲ್.ಚಂದ್ರಶೇಖರ್‌ರವರನ್ನು ಕೈ ಹಿಡಿದಾಗ ತಮ್ಮ ಕಲಾಸೇವೆಗೆ ಇನ್ನು ವಿದಾಯ ಹೇಳಬೇಕಾಗಬಹುದೆಂಬ ಅಳುಕೂ ಹೇಮಾರವರಲ್ಲಿ ಅಡಗಿತ್ತು.

ಬಿಜಾಪುರ ಜಿಲ್ಲೆ ಕಾಕನೂರಿನಲ್ಲಿ ಪತಿಗೆ ಕೆಲಸ. ಇಲ್ಲಿಗೆ ಸಮೀಪದ ರಾಮದುರ್ಗಕ್ಕೊಮ್ಮೆ ಹೋಗಿದ್ದಾಗ ಆ ಊರಿನ ಶಿಕ್ಷಕ ದಂಪತಿಗಳಿಬ್ಬರು ಮಣ್ಣಿನ ಅಚ್ಚಿನಲ್ಲಿ ಗಣಪತಿ ಮಾಡುವುದನ್ನು ನೋಡುತ್ತಾ ಹಾಗೆಯೇ ನಿಂತ ಹೇಮಾರವರು ಕೊನೆಗೊಮ್ಮೆ ಆ ದಂಪತಿಗಳನ್ನು ಕೇಳಿಯೂ ಬಿಟ್ಟರು. 'ನಾನೂ ಹಾಗೆಯೇ ಗಣಪತಿ ಮಾಡ್ತೀನಿ, ಮಣ್ಣು ಕೊಡ್ತೀರಾ' ಎಂದಾಗ ಆ ದಂಪತಿಗಳು ಸ್ವಲ್ಪ ಮಣ್ಣನ್ನು ಕೊಡ 'ಹೋದರು. ಇಲಿ ಮಾಡ್ಕೊಂಡ ಬನ್ನಿ - ಆಮೇಲೆ ಗಣಪತಿ ಮಾಡುವಿರಂತೆ' ಎಂದು ಆದೇಶಿಸಿದರು. ಹೇಮಾರವರಿಗೆ ಭಯ ಸಾಗರ ಬಂತು. ಮನೆಗೆ ಬಂದವರೇ 'ಇಲಿ' ನಿರ್ಮಿಸುವ ಚಿಂತೆ ಹಚ್ಚಿಕೊಂಡರು. ಪತಿ ಎದುರಿಗೆ 'ಇಲಿ' ಮಾಡುತ್ತಾ ಕುಳಿತರೆ ಪ್ರಹಾರೆಂಬ ಭಯ ಬೇರೆ. ರಾತ್ರಿ ಮಲಗಿದ್ದರೂ ನಿದ್ರೆ ಹತ್ತಿರ ಸುಳಿಯಲಿಲ್ಲ. ಪತಿದೇವರಿಗೆ ನಿದ್ರೆ ಆವರಿಸಿತ್ತು. ಮೆಲ್ಲಗೆ ಎದ್ದು ವೇಳೆ ನೋಡಿದರು. ಮಧ್ಯರಾತ್ರಿ ಎರಡು ಗಂಟೆ ತೋರಿಸುತ್ತಿತ್ತು; ಪತಿಗೆ ಅರಿವಾಗದಂತೆ ಬೇರೊಂದು ಕೊಠಡಿಗೆ ಬಂದು ಎರಡು ತಾಸು ಶ್ರಮ ಪಟ್ಟು ಮಣ್ಣಿನಿಂದ ಇಲಿ ನಿರ್ಮಿಸಿದಷ್ಟೇ ಅಲ್ಲದೆ 'ಗಣಪತಿ'ಯನ್ನೂ ಮಾಡಿ ಮಾರನೇ ಬೆಳಿಗ್ಗೆ ಶಿಕ್ಷಕ ದಂಪತಿಗಳಿಗೆ ತಂದು ತೋರಿಸಿದಾಗ ಆ ದಂಪತಿಗಳು ಸಂತೋಷ, ಆಶ್ಚರ್ಯದಿಂದ ಆನಂದ ಬಾಷ್ಪ ಹರಿಸಿದರು.

# ಕಲೆಯಲ್ಲಿಯೇ ಜಗ ಕಾಣುವ ಹೇಮಾಶೇಖರ್

ಹೇಮಾರವರ ಅಪಾರಶ್ರದ್ಧೆ, ಆಸಕ್ತಿಯನ್ನು ಗುರುತಿಸಿದ ಶಿಕ್ಷಕ ದಂಪತಿಗಳು ಆ ಗಣಪತಿಗೆ ಬಣ್ಣಗಳ ಲೇಪನ ಮಾಡಿ ಪ್ರತಿ ವರ್ಷ ಅಲ್ಲಿ ಜರುಗುವ ಸಾರ್ವಜನಿಕ ಗಣಪತಿ ಮೆರವಣಿಗೆಯೊಂದಿಗೆ ಹೇಮಾರವರ ನಿರ್ಮಿತ ಗಣಪತಿಯೂ ಸ್ಥಾನ ಪಡೆಯುವಂತೆ ಮಾಡಿದರು.

ಅನಂತರ ಶಿಕ್ಷಕ ದಂಪತಿಗಳು ಹೇಮಾರವರನ್ನು ಆಶೀರ್ವದಿಸಿ 'ಹೇಳಿಸಿಕೊಳ್ಳದೆ ಗಣಪತಿ ನಿರ್ಮಿಸಿದ್ದೀರಿ. ಈ ವಿದ್ಯೆಯನ್ನು ಮುಂದುವರಿಸಿಕೊಂಡು ಕಲಾಸೇವೆ ಮಾಡಿ' ಎಂದೂ ಹಾರೈಸಿದರು. ಅಂದಿನಿಂದ ಹೇಮಾರವರು ಒಂದು ಅಡಿ ಗಣಪತಿಯನ್ನು ನಿರ್ಮಿಸಿ ಪ್ರತಿವರ್ಷವೂ ಕಳೆದ 9 ವರ್ಷದಿಂದ ನಿರ್ಮಾಣ ಮಾಡಿ ಬೇರೆಯವರಿಗೆ ನೀಡುತ್ತಾ ಬಂದಿದ್ದಾರೆ.

ಹೇಮಾರವರು ನಿರ್ಮಿಸುವ ಗಣಪತಿ ಪ್ರತಿ ವರ್ಷವೂ ಒಂದೇ ರೂಪವನ್ನು ಹೊಂದಿರದೆ ನಾಟ್ಯ ಗಣಪತಿ, ಕಮಲದ ಹೂನೊಳಗಿನ ಗಣಪತಿ, ಪೀಠ ಗಣಪತಿ, ಪದ್ಮಾಸನ ವಿನಾಯಕ... ಹೀಗೆ ವಿವಿಧ ಪ್ರಕಾರಗಳನ್ನು ಒಳಗೊಂಡಿದೆ.

ಹೇಮಾರವರ ಸಂತಸ ತಮ್ಮ [illegible] ಗುರು ಸೂಫಿ ಹಾಗೂ ಕಲಾ [illegible] ರಾಮನರಸಯ್ಯನವರು. ತಮಗೆ [illegible] ಸಹಕಾರವನ್ನು ಕೃತಜ್ಞತೆಯಿಂದ ಸ್ಮರಿಸುವ ಹೇಮಾರವರು ಕಲಾವಿದೆ ಸುಮಿತ್ರರವರ ಬಳಿ ತರಕಾರಿ ಕೆತ್ತನೆ, ಕಲೆಯನ್ನು ಕಲಿಯಲು 10 ದಿನಗಳ ಕಾಲ ಮೈಸೂರಿನಿಂದ 120 ಕಿ.ಮೀ. ದೂರದ ಬೆಂಗಳೂರಿಗೆ ಹೋಗಿ ಬರುತ್ತಿದ್ದರೆಂದರೆ ಇವರಲ್ಲಿನ ಆಸಕ್ತಿಯನ್ನು ಗುರುತಿಸಬಹುದಾಗಿದೆ.

ತಮ್ಮ ಕಲಾಪ್ರದರ್ಶನದಿಂದ ದಿನದಿಂದ ದಿನಕ್ಕೆ ಪ್ರವರ್ಧಮಾನಕ್ಕೇರುತ್ತಿದ್ದ ಹೇಮಾ ಶೇಖರ್‌ರವರು ಪ್ರಶಸ್ತಿ, ಬಹುಮಾನಗಳನ್ನು ಎಲ್ಲೆಡೆ ಕೊಳ್ಳೆ ಹೊಡೆಯತೊಡಗಿದರು.

1989ರಲ್ಲಿ ಮೈಸೂರು ದಸರಾ ವಸ್ತು ಪ್ರದರ್ಶನದಲ್ಲಿ ಇವರ ಕಲೆಯನ್ನು ಗುರುತಿಸಿದ ಆಯ್ಕೆ ಸಮಿತಿ 'ಚಾಂಪಿಯನ್ ಅವಾರ್ಡ್' ಪ್ರಕಟಿಸಿದರು. ಆದರೆ ಆ ಅವಾರ್ಡ್ ಇಂದಿನ ವರೆವಿಗೂ ನಿಡಿಲ್ಲ. "ಇಲ್ಲಿ ರಾಜಕೀಯ ನಡೆಯುತ್ತಿದೆ. ನನಗೆ ತುಂಬಾ ಅನ್ಯಾಯವಾಯ್ತು" ಎಂದು ನೋವಿನೊಂದಿಗೆ ಹೇಮಾ ಶೇಖರ್ ಹೇಳಿಕೊಂಡರು.

ರವೆಯಿಂದ ಗಾಂಧಿ, ಬೀಜಗಳಿಂದ ಹೂ, ಬೆಂಡಿನಿಂದ ರಾಧಾಕೃಷ್ಣ ಕೆಟ್ಟಿರುವ ಮೈದಾ ಹಿಟ್ಟಿನಿಂದ ಹೂವು, ಚಿಂದಿ ಬಟ್ಟೆಗಳಿಂದ ಪಗಡೆ ಹಾಸು, ತಂತಿಗಳಿಂದ ಗೊಂಬೆಗಳು, ಉಲ್ಲನ್‌ವೇಸ್ಟ್‌ನಿಂದ ಗೊಂಬೆ, ಮೇಣದಿಂದ ಮೇಣದ ಬತ್ತಿ, ಬಾಟಿಕ್ (ಅಂಬಾಲಿಕೆ, ಶಿಲಾಬಾಲಿಕೆ) ಹೀಗೆ ಐನೂರಕ್ಕೂ ಹೆಚ್ಚು ರೀತಿಯ ವಿಭಿನ್ನ ಕಲೆಗಳು ಇವರ ಕೈಚಳಕದಿಂದ ಹೊಸ ರೂಪ ಪಡೆದು ಪ್ರದರ್ಶನಕ್ಕೆ ಸಿದ್ಧವಾಗುತ್ತದೆ.

ಬೆಂಗಳೂರು ತೋಟಗಾರಿಕಾ ಇಲಾಖೆ ಏರ್ಪಡಿಸಿದ್ದ ಫಲಪುಷ್ಪ ಪ್ರದರ್ಶನದ ತರಕಾರಿ ಕೆತ್ತನೆ ವಿಭಾಗದ ಸ್ಪರ್ಧೆಯಲ್ಲಿ ತಮ್ಮ 19 ಕೃತಿಗಳಲ್ಲಿ 17 ಕೃತಿಗಳಿಗೆ ಬಹುಮಾನ ಪಡೆದು ಫಲಕ ತಮ್ಮದಾಗಿಸಿಕೊಂಡರು.

ನೀರಿನ ಮೇಲೆ ರಂಗೋಲಿ ಬಿಡುವ ಕಲೆ ಇವರ ವಿಶಿಷ್ಟತೆ ಎನಿಸಿದ್ದು ದೂರದರ್ಶನ












ದಲ್ಲೂ ಈ ಕಲೆ ಪ್ರದರ್ಶನಗೊಂಡು ಲಕ್ಷಾಂತರ ಮಂದಿ ನೋಡುಗರನ್ನೂ ಆಕರ್ಷಿಸಿದೆ.

ಕೆಲವೇ ತಾಸಿನಲ್ಲಿ ಮನಮೋಹಕವಾದ ಕರಕುಶಲ ಕಲೆಯನ್ನು ಮಾಡಿ ತೋರಿಸುವ ಈ ಅತ್ಯದ್ಭುತ ಕಲಾವಿದೆ. ಕಳೆದ 10 ವರ್ಷಗಳಿಂದಲೂ ಕ್ಯಾಮೆಲ್ ಪೇಯಿಂಟಿಂಗ್ ಶಿಕ್ಷಕಿಯಾಗಿ ಕೆಲಸ ನಿರ್ವಹಿಸುತ್ತಿದ್ದಾರೆ. ಹತ್ತಕ್ಕೂ ಹೆಚ್ಚು ಮಹಿಳಾ ಸಮಾಜಗಳಲ್ಲಿ

ಚಿತ್ರಗಳು : ಎಸ್. ತಿಪ್ಪೇಸ್ವಾಮಿ

ಕ್ಯಾಮೆಲ್ ಪೇಯಿಂಟಿಂಗ್, ತರಕಾರಿ ಹಾಗೂ ಬಿಸಾಡುವ ವಸ್ತುಗಳನ್ನು ಕಲೆಗೆ ಮಾರ್ಪಡಿಸುವ ಡೆಮಾನ್‌ಸ್ಟ್ರೇಷನ್ ಮಾಡಿ ಮೆಚ್ಚಿಗೆ ಪತ್ರ ಪಡೆದಿರುವುದೂ ಹೆಗ್ಗಳಿಕೆಯಾಗಿದೆ. ಹೀಗೆಯೇ ಶಿಕ್ಷಕರಿಗೂ ಪ್ರತ್ಯೇಕ ಡೆಮಾನ್‌ಸ್ಟ್ರೇಷನ್ ನಡೆಸಿದ್ದಾರೆ.

ಕರಕುಶಲ ಅಭಿವೃದ್ಧಿ ನಿಗಮವು 1991 ಫೆಬ್ರವರಿ 19ರಿಂದ 23ರ ವರೆಗೆ ಮದರಾಸಿನ ಗೀತಾ ಭವನ್‌ನಲ್ಲಿ ಏರ್ಪಡಿಸಿದ್ದ 'ಅಖಿಲ ಭಾರತ ಕರಕುಶಲವಸ್ತು ಪ್ರದರ್ಶನ'ಕ್ಕೆ ಮೈಸೂರು ಜಿಲ್ಲೆಯಿಂದ, ಅಖಿಲಭಾರತ ಕರಕುಶಲ ನಿಗಮದ ಸಹಾಯಕ ನಿರ್ದೇಶಕರಾದ ಶ್ರೀ ಮೋನಪ್ಪನವರ ಪ್ರೋತ್ಸಾಹ, ಸಹಕಾರದಿಂದ ಏಕೈಕ ಬಾಟಿಕ್ ಕಲಾವಿದರಾಗಿ ಆಯ್ಕೆಗೊಂಡು ಐದು ಸಾವಿರ ರೂಪಾಯಿ ಮೊತ್ತದ ತಮ್ಮ ವಿವಿಧ ಬಾಟಿಕ್ ಕಲೆಯನ್ನು ಪ್ರದರ್ಶನ ಮಾಡಿದ್ದೂ ಅಲ್ಲದೆ ಮಾರಾಟ ಮಾಡಿ ನೂತನ ದಾಖಲೆಯೊಂದನ್ನು ಸ್ಥಾಪಿಸಿದರು.

1990ರ ಸೆಪ್ಟೆಂಬರ್ 25ರಿಂದ 5 ದಿನಗಳ ಕಾಲ ದಸರಾ ಮಹೋತ್ಸವದ ಅಂಗವಾಗಿ ಭಾವೈಕ್ಯತಾ ಶಿಬಿರದಲ್ಲಿ ಶಿಬಿರಾರ್ಥಿಗಳಿಗೆ ಕರಕುಶಲತೆ ಬಗ್ಗೆ ತರಬೇತಿ ನೀಡಿದ ಕೀರ್ತಿಯೂ ಇವರಿಗಿದೆ. ಮೈಸೂರು ಬಾಲ ಭವನದ ಪದಾಧಿಕಾರಿಗಳಾದ ಶ್ರೀಮತಿ ಪದ್ಮಿನಿ ಶಂಕರ್‌ರವರು, ಭಾವೈಕ್ಯತಾ ಶಿಬಿರದಲ್ಲಿ ಹೇಮಾರವರ ಪ್ರತಿಭೆಯನ್ನು ಗುರುತಿಸಿದ್ದು, ಮಕ್ಕಳಿಗಾಗಿ ಒಂದು ತಿಂಗಳು ನಡೆಸಿದ ಬೇಸಿಗೆ ಶಿಬಿರದಲ್ಲಿ ಕರಕುಶಲ ಮತ್ತು ಪೇಯಿಂಟಿಂಗ್ ತರಬೇತಿ ನೀಡಲು ಅನುವು ಮಾಡಿ ಕೊಟ್ಟಿತು.

ಮೈಸೂರು ಜಿಲ್ಲಾ ತೋಟಗಾರಿಕಾ ಸಂಘ ಪ್ರತಿವರ್ಷವೂ ಏರ್ಪಡಿಸುವ ದಸರಾ ಫಲಪುಷ್ಪ ಪ್ರದರ್ಶನದಲ್ಲಿ ತಮ್ಮ ಕೃತಿಗಳಿಗೆ ಹೆಚ್ಚು ಬಹುಮಾನ ಪಡೆದು ಮತ್ತೊಂದು ಚರಿತ್ರಾರ್ಹ ದಾಖಲೆ ಮಾಡಿದರು.

ಕೇವಲ ಕಲಾಕಾರರಾಗಿ ಉಳಿಯದ ಹೇಮಾಶೇಖರ್ ಉತ್ತಮ 'ಯೋಗಪಟು' ಎಂಬ ಹೆಗ್ಗಳಿಕೆಗೂ ಪಾತ್ರರಾಗಿದ್ದಾರೆ. ಜಿಲ್ಲಾ ಮಟ್ಟದ ಯೋಗಾಸನ ಸ್ಪರ್ಧೆಯಲ್ಲೂ ಪ್ರಥಮ ಬಹುಮಾನ ಪಡೆದಿದ್ದಾರೆ. ರಾಜ್ಯ ಮಟ್ಟದಲ್ಲಿ 4ನೇ ಸ್ಥಾನ ಪಡೆದು ವನಿತೆಯೂ 'ಯೋಗ'ದಲ್ಲಿ ವಿಕ್ರಮ ಸಾಧಿಸಬಲ್ಲಳೆಂಬುದನ್ನು ತೋರಿಸಿಕೊಟ್ಟಿದ್ದಾರೆ. ರಾಷ್ಟ್ರೀಯ ಮಟ್ಟಕ್ಕೆ ಹೋಗುವ ಪ್ರಯತ್ನದಲ್ಲೂ ಸಾಗಿದ್ದಾರೆ. ತಮ್ಮ ಪ್ರಯತ್ನದಲ್ಲಿ ಯೋಗ ಗುರು ಪಶುಪತಿರವರ ಆಶೀರ್ವಾದ, ಉತ್ತೇಜನವೂ ಕಾರಣವಾಗಿದೆ ಎಂದು ಹೇಮಾಶೇಖರ್ ಸ್ಮರಿಸುತ್ತಾರೆ.

ಎತ್ತ ನೋಡಿದರೂ ಕಲೆಯ ಬಿಂಬವನ್ನೇ ಕಾಣಬಹುದಾದ ಇವರ ಮನೆಗೆ ಬಂದವರೆಲ್ಲಾ, ಅದ್ಭುತ ಕಲಾ ಪ್ರದರ್ಶನಕ್ಕೆ ಮೆಚ್ಚುಗೆ ಸೂಚಿಸಿದ್ದಾರೆ.

ಹಿರಿಯ ರಾಜಕಾರಣಿಗಳಾದ ಬಿ. ರಾಚಯ್ಯ, ಆರ್. ಗುಂಡೂರಾವ್, ಕೆ.ಜಿ. ಜಾರ್ಜ್ ದಂಪತಿಗಳು, ಕಲಾವಿದರಾದ ತೂಗುದೀಪ ಶ್ರೀನಿವಾಸ್ ದಂಪತಿಗಳು, ರತ್ನಾ ಅರಸ್, ಶೀಲಾ ಇರಾನಿ, ದೇವಕಿ ಸಿಂಗ್, ಲೀಲಾ ಆಂಜನಪ್ಪ ಮುಂತಾದವರು ಇವರ ಕಲಾ ಚಾತುರ್ಯವನ್ನು ಮುಕ್ತ ಕಂಠದಿಂದ ಶ್ಲಾಘಿಸಿದ್ದಾರೆ.

ಆಕಾಶವಾಣಿ ಕಾರ್ಯಕ್ರಮದಲ್ಲಿ ಹಲವಾರು ಬಾರಿ ಭಾಗವಹಿಸಿರುವ ಹೇಮಾಶೇಖರ್ ಮೈಸೂರು ಆಕಾಶವಾಣಿ ಕಲಾವಿದೆಯಾಗಿಯೂ ಇತ್ತೀಚೆಗೆ ಆಯ್ಕೆಗೊಂಡಿದ್ದಾರೆ.

ದಸರಾ ವಸ್ತು ಪ್ರದರ್ಶನದಲ್ಲೊಮ್ಮೆ ಇವರು ಅಡಿಗೆ ಸ್ಪರ್ಧೆಯಲ್ಲಿ ಕೇವಲ ಮೂರು ತಾಸಿನಲ್ಲಿ 19 ರೀತಿಯ ಪಚಡಿ ಮಾಡಿ ಪ್ರಥಮ ಪ್ರಶಸ್ತಿ ಪಡೆದು ತೀರ್ಪುಗಾರರಾಗಿದ್ದ ಕೇಂದ್ರ ಆಹಾರ ಸಂಶೋಧನಾ ಕೇಂದ್ರದ ಅಧಿಕಾರಿಗಳ ಮೆಚ್ಚುಗೆ ಪಡೆದರು.

**ನಗೆ ಹನಿ**

**ತಾಯಿ : ತಗೋ ಮರಿ ಈ ಔಷಧಿ ಕುಡಿದ್ಬಿಡು**

**ಮಗು : ಬೇಡಮ್ಮಾ ಈ ಔಷಧಿ ತುಂಬಾ ಕಹಿ ಇದೆ.**

**ತಾಯಿ : ಹಾಗನ್ಬಾರ್ದಮ್ಮಾ ಸಿಹಿ ಇದೆ ಅನ್ಕೊಂಡು ಕುಡಿದ್ಬಿಡು.**

**ಮಗು : ಹಾಗಾದ್ರೆ ನಾನು ಕುಡಿದ್ಬಿಟ್ಟೇ ಅಂತಾ ನೀನೂ ಅಂದ್ಕೊಂಡ್ಬಿಡು!! ಅಷ್ಟೆ!!**

**—ಲೀಲಾ ಚಂದ್ರಶೇಖರ, ನಾಸಿಕ್**

ನಿಷ್ಪ್ರಯೋಜಕ ಎಂದು ಅಗಿದು ಉಗಿಯುವ ಕಬ್ಬಿನ ಸಿಪ್ಪೆಯೂ ಇವರ ಕೈಚಳಕದಿಂದ ವಿವಿಧ ಆಕಾರದ ಕೃತಿಗಳಾಗಿ ಉದ್ಭವವಾಗಿದೆ.

ವಧುವಿಗೆ ಅಲಂಕಾರ ಮಾಡುವ ಹವ್ಯಾಸ ಹೊಂದಿರುವ ಇವರು ತಮ್ಮ ಸಮಾಜದಲ್ಲಿ ಉಚಿತವಾಗಿ ಕಲಾ ತರಗತಿ ನಡೆಸಿ ಅದರಿಂದ ಬಂದ ಆದಾಯವನ್ನು ಮಹಿಳಾ ಸಮಾಜಕ್ಕೇ ನೀಡಿದ ಉದಾರತೆ ಇವರಲ್ಲಿದೆ.

ಉತ್ತಮ ಅಭಿನೇತ್ರಿಯೂ ಆಗಿರುವ ಇವರು ಕಾಲೇಜಿನ ನಾಟಕಗಳಲ್ಲಿ ಅಭಿನಯಿಸಿ ಪ್ರಶಸ್ತಿ ಪಡೆದಿದ್ದಾರೆ. ದಿಢೀರೆಂದು ಯಾವುದೇ ವಿಷಯದ ಬಗ್ಗೆ ಭಾಷಣ ಮಾಡುವ ಕಲೆಯನ್ನು ಮೈಗೂಡಿಸಿಕೊಂಡಿರುವ ಹೇಮಾಶೇಖರ್‌ರವರಿಗೆ ಸಭಾ ಕಂಪನ ಎಂದರೇನು? ಎಂಬುದೇ ಅರಿವಾಗಿಲ್ಲವಂತೆ.

ಕಲೆ ಅಭ್ಯಸಿಸಲು ಶ್ರದ್ಧೆ, ಏಕಾಗ್ರತೆ, ಆಸಕ್ತಿ ಅತಿ ಮುಖ್ಯ ಎನ್ನುವ ಹೇಮಾರವರು ತಮ್ಮ ಸಾವಿನ ನಂತರ ತಮ್ಮ ನೇತ್ರಗಳನ್ನು ಪಡೆದುಕೊಳ್ಳುವಂತೆ ಬೆಂಗಳೂರಿನ ಮಿಂಟೋ ಆಸ್ಪತ್ರೆಗೆ ಲಿಖಿತ ಮನವಿ ನೀಡಿ ವನಿತಾ ಸಮೂಹಕ್ಕೆ 'ದಾರಿದೀಪ'ವಾಗಿದ್ದಾರೆ.

ವೃದ್ಧರಿಗೆ ಏನಾದರೂ ಸಹಾಯ ಮಾಡಬೇಕು ಎಂಬ ಆಸೆ ಹೊಂದಿರುವ ಇವರ ಬಳಿ' ಕಲೆ ಕಲಿತವರು ಇಂದು ಅದೇ ವೃತ್ತಿಯಲ್ಲಿ ಬದುಕು ಸಾಗಿಸುತ್ತಿರುವ ಉದಾಹರಣೆಗಳೂ ಇವೆ.

ಇಂದಿನ ಯುವತಿಯರಿಗೆ ಇಂತಹ ಅನುಪಮ ಕಲೆ ಕರಗತ ಮಾಡಿಕೊಳ್ಳಬೇಕೆಂಬ ಉತ್ಸಾಹ ಕಡಿಮೆ ಎಂದು ವಿಷಾದದಿಂದ ನುಡಿಯುವ ಹೇಮಾಶೇಖರ್ ಪ್ರಸ್ತುತ ಟೆರಿಶಿಯನ್ ಹಾಗೂ ಮಹಾರಾಣಿ ಕಾಲೇಜಿನಲ್ಲಿ ಸಂಜೆ ವೇಳೆ ಕರಕುಶಲ ತರಗತಿ ನಡೆಸುತ್ತಿದ್ದಾರೆ.

ಮಕ್ಕಳ ಕೂಟ, ಅಹಲ್ಯಾ ಸಮಾಜ, ರಾಘವೇಂದ್ರ ಯೋಗಕೇಂದ್ರದ ಆಜೀವ ಸದಸ್ಯರಾಗಿಯೂ ಸೇವೆ ಸಲ್ಲಿಸುತ್ತಿರುವ ಇವರಿಗೆ ಆರತಿಗೊಂದು, ಕೀರ್ತಿಗೊಂದು ಮಕ್ಕಳೂ ಇವೆ.

ಬೇಕರಿ ತರಗತಿ ಸಹಾ ನಡೆಸುವ ಇವರು ಕ್ರೀಡಾ ಕ್ಷೇತ್ರದಲ್ಲೂ 'ತಾರೆ' ಎನ್ನಿಸಿ ಕೊಕ್ಕೋ, ಥ್ರೋಬಾಲ್, ರಿಂಗ್, ಟೆನಿಸ್, ಚೆಸ್, ಕೇರಂಗಳಲ್ಲೂ ಸಾಕಷ್ಟು ಪರಿಶ್ರಮ ಹೊಂದಿದ್ದಾರೆ.

ತಮ್ಮ ಮನೆಯ ತುಂಬೆಲ್ಲಾ ಬೆಳ್ಳಿ ಕರಂಡಗಳು ಪ್ರಶಸ್ತಿ ಫಲಕಗಳು, ಚಿನ್ನದ ಪದಕಗಳೊಂದಿಗೆ ತಮ್ಮ ಕಲಾಕೃತಿಗಳನ್ನೂ ಒಪ್ಪ ಓರಣವಾಗಿ ಇಟ್ಟು, ನೋಡುವವರಿಗೆ ಯಾವುದೋ ಲೋಕಕ್ಕೆ ಹೋದಂತ ಭ್ರಮೆ ಹುಟ್ಟಿಸುತ್ತದೆ.

ಇಷ್ಟೆಲ್ಲಾ ಆದರೂ ಹೇಮಾಶೇಖರ್ ನಿಗರ್ವಿ. ನಾನು ಕಲಿಯಬೇಕಾದ್ದು ಇನ್ನೂ ಬೇಕಾದಷ್ಟಿದೆ. ನಾನಿನ್ನೂ ವಿದ್ಯಾರ್ಥಿನಿಯಾಗಿಯೇ ಇದ್ದೇನೆ' ಎನ್ನುತ್ತಾರೆ. ಮೈಸೂರಿನ ಸಿದ್ಧಾರ್ಥ ನಗರದಲ್ಲಿ ವಾಸವಿರುವ ಇವರು 'ತಾವು ಇಂದು ಏನಾದರೂ ಕಿಂಚಿತ್ತು ಸಾಧನೆ ಮಾಡಿದ್ದೇನೆಂದರೆ ಅದಕ್ಕೆ ತಮ್ಮ ಪತಿ'ಯ ಸಂಪೂರ್ಣ ಸಹಕಾರ, ಪ್ರೋತ್ಸಾಹವೇ ಮುಖ್ಯ ಕಾರಣ ಎಂದು ಭಕ್ತಿಯಿಂದ ನುಡಿದಾಗ ಸಂದರ್ಶನದ ಸಮಯದಲ್ಲಿ ಹತ್ತಿರದಲ್ಲೇ ಕುಳಿತಿದ್ದ ಇವರ ಪತಿ ಚಂದ್ರಶೇಖರ್ ಹೇಳಿದರು. 'ನನ್ನದೇನಿಲ್ಲ ಆಕೆಯ ಆಸಕ್ತಿಯೇ ಆಕೆ ಕಲಾವಿದೆಯಾಗಲು ಕಾರಣ. ನಾನು ನೆಪ ಮಾತ್ರ' ಎಂದು ಹೇಳಿ ತಮ್ಮ ದೊಡ್ಡತನ ತೋರಿದರು.

—ಸರಸ್ವತಿ ಮೋಹನ



# ನಿಮ್ಮ ಮನೆಗೆ ನೀವ














ನಿಜ. ಆ್ಯಂಕರ್ ಶೀಘ್ರ ಹೊಲಿಗೆ ಸಾಧನದಿಂದ ನಿಮ್ಮ ಮನೆಯ ಗೋಡೆಗಳ ಮೇಲೆ ರಂಗುರಂಗಿನ ಹೊಸ ಪ್ರಪಂಚವನ್ನೇ ರಚಿಸಿ ಬಿಡಬಹುದು. ನೀವೇ. ರಮಣೀಯ ಸೌಂದರ್ಯ, ಮುದ್ದಾದ ಪ್ರಾಣಿ ಪ್ರಪಂಚ, ಬೆಡಗಿನ ಬಂಗಲೆಗಳು . ನಿಮ್ಮ ಕ್ರಿಯಾತ್ಮಕ ಪ್ರತಿಭೆಗೆ ಸಾಟಿಯಾಗಬಲ್ಲ ಇನ್ನೂರಕ್ಕೂ ಮಿಗಿಲಾದ ವಿನ್ಯಾಸಗಳು, ಆಯ್ಕೆ ನಿಮ್ಮದೇ.

ಇದು ತೀರಾ ಸುಲಭ ಕೂಡಾ. ಬರೆದಿಟ್ಟ ನಿರ್ದೇಶನದಂತೆ ಹೊಲಿಗೆಗಳನ್ನು ಜೋಡಿಸುತ್ತಾ ಹೋದಲ್ಲಿ ನೀವೇ ಬೆರಗಾಗುವಂತೆ, ರಂಗು ರಂಗಿನ ಚಿತ್ರಗಳು ಮೂಡಿಬರುತ್ತವೆ.

ಪ್ರತಿ ಕಿಟ್ ಸ್ವಯಂಪೂರ್ಣವಾಗಿದೆ ವಿನ್ಯಾಸ ಮುದ್ರಿಸಲ್ಪಟ್ಟ ಕ್ಯಾನ್‌ವಾಸ್ ಹಾಳೆ, ವಿನ್ಯಾಸಕ್ಕೆ ಬೇಕಾದ ರಂಗಿನ ದಾರಗಳು, ಹಂತ ಹಂತದಲ್ಲೂ ಸಹಾಯಕ್ಕೆ ಒದಗುವ ನಿರ್ದೇಶನ ಮತ್ತು ಇದಕ್ಕೆಂದೇ ಮಾಡಿದ ವಿಶೇಷ ಸೂಜಿ.

ಎಲ್ಲಾ ಡಿಪಾರ್ಟ್‌ಮೆಂಟ್ ಮಳಿಗೆಗಳಲ್ಲೂ, ಆಟದ ಸಾಮಾನಿನ ಅಂಗಡಿಗಳಲ್ಲೂ, ಆ್ಯಂಕರ್ ದಾರದ ವಿತರಕರಲ್ಲೂ ದೊರೆಯುತ್ತದೆ.

Chaitra-K-203/92 K.A.-3

* ಜೆ. ಅಂಡ್ ಪಿ. ಯು. ಕೆ. ಯ ನೊಂದಾಯಿತ ಮಾರಾಟ ಚಿಹ್ನೆ.

# ಮಾಡಿದ ಅಪ್ರತಿಮ ಕಲಾಕೃತಿ



ಪ್ರತಾಪನಿಗಾಗಿ ಶಾಲೆಯಿಂದ ಅಡ್ಮಿಷನ್ ಫಾರಂ ತರುವ ಕೆಲಸವಿದ್ದುದರಿಂದ ಊರ್ಮಿಳ ಮನೆಯ ಕೆಲಸವನ್ನು ಆದಷ್ಟು ಬೇಗ ಮಾಡತೊಡಗಿದಳು.

ಲಕ್ಷ್ಮಣನಿಗೆ ಮಂಗಳೂರಿನಿಂದ ಮದ್ರಾಸಿಗೆ ವರ್ಗವಾಗಿತ್ತು. ಮಗನನ್ನು ಉತ್ತಮ ಶಾಲೆಗೆ ಹಾಕಬೇಕೆಂಬುದು ಊರ್ಮಿಳೆಯ ಆಸೆ. ಹೆಸರಾಂತ "ಇಂದಿರಾ ಮೆಮೊರಿಯಲ್ ಹೈಯರ್ ಸೆಕೆಂಡರಿ ಶಾಲೆ"ಯಲ್ಲಿ ಸೇರಿಸಬೇಕೆಂದು ನಿಶ್ಚಯಿಸಿದಳು.

ಪತಿಯನ್ನು ಬ್ಯಾಂಕಿಗೆ ಕಳುಹಿಸಿ, ಪ್ರತಾಪನೊಡನೆ ಶಾಲೆಯ ದಿಕ್ಕಿಗೆ ಕಾಲು ಹಾಕಿದಳು. ಶಾಲೆಯೊ ಬಹಳ ದೊಡ್ಡದಾಗಿತ್ತು. ಅಲ್ಲಿದ್ದ ನಿಶ್ಶಬ್ದತೆಯೆ ಅಲ್ಲಿನ ಶಿಸ್ತಿಗೆ ಸಾಕ್ಷಿಯಾಗಿತ್ತು. ಪ್ರಿನ್ಸಿಪಾಲರ ಆಫೀಸ್ ರೂಮಿನ ಬಳಿ ದೊಡ್ಡ 'ಕ್ಯೂ' ನೆರೆದಿತ್ತು.

ವಿಶಾಲವಾದ ಕೋಣೆ. ಮೇಜಿನ ಮೇಲೆ ಹರಡಿಕೊಂಡಿರುವ ಫೈಲುಗಳು. ಕೋಣೆಯೊಳಗೆ ಕಾಲಿರಿಸುವ ಮೊದಲೆ ಮಿಸ್. ವೈದೇಹಿ ಎಂ. ಎ., ಎಂ. ಇಡಿ., ಎಂದಿದ್ದ ಬೋರ್ಡ್ ಊರ್ಮಿಳೆಯ ಕಣ್ಣಿಗೆ ಬಿತ್ತು. ಮನಸ್ಸಿನಲ್ಲಿ ಸ್ವಲ್ಪ ಗೊಂದಲ ವೆದ್ದಿತು. ತನ್ನ ಸಹಪಾಠಿ ವೈದೇಹಿ ಏನಾದರೂ ಈ ಶಾಲೆಯ ಪ್ರಿನ್ಸಿಪಾಲ್ ಇರಬಹುದೆ ಎಂಬ ಸಂದೇಹ ಬಾರದಿರಲಿಲ್ಲ. ಅಷ್ಟರಲ್ಲಿ ಊರ್ಮಿಳೆಯ ಸರದಿ ಬಂದುದರಿಂದ ಪೀಯೊನ್ ಅವಳನ್ನು ಒಳಗೆ ಕಳುಹಿಸಿದನು. ಪ್ರತಾಪನು ತಾಯಿಯನ್ನು ಹಿಂಬಾಲಿಸಿದನು.

ಕೈಯಲ್ಲಿದ್ದ ಫೈಲಿನಿಂದ ತಲೆ ಎತ್ತಿ ನೋಡಿದಳು ವೈದೇಹಿ. ಆಶ್ಚರ್ಯದಿಂದ ಸ್ತಬ್ಧಳಾದಳು. ಊರ್ಮಿಳೆಗೂ ಮೊದಲಿನ ಸ್ಥಿತಿಗೆ ಬರಲು ಕೆಲವು ನಿಮಿಷಗಳು ಹಿಡಿಸಿದವು! ತನ್ನ ಜೀವದ ಗೆಳತಿಯಾದ ಅಪ್ಸರೆಯಂತಿದ್ದ ಅಂದಿನ ವೈದೇಹಿ ಎಲ್ಲಿ! ತನಗಿಂತ ಬಹಳ ಹಿರಿಯಳಾಗಿ ಕಾಣುತ್ತಿರುವ ಇಂದಿನ ವೈದೇಹಿ ಎಲ್ಲಿ! ಇಬ್ಬರ ಬಾಯಿಂದಲೂ ಮಾತು ಹೊರಬೀಳದೆ ಒಬ್ಬರನ್ನೊಬ್ಬರು ನೋಡುವುದರಲ್ಲಿಯೆ ಕೆಲವು ಕ್ಷಣಗಳು ಉರುಳಿದವು. ಪ್ರತಾಪನು "ಗುಡ್ ಮಾರ್ನಿಂಗ್, ಮಿಸ್"; ಎಂದುದನ್ನು ಕೇಳಿ ಇಬ್ಬರೂ ವಾಸ್ತವ ಪ್ರಪಂಚಕ್ಕೆ ಬಂದರು.

"ಇವನೊಡನೆ ಅಪ್ಲಿಕೇಶನ್ ಫಾರಂ ಕೇಳಲು ಬಂದವಳು ನಿನ್ನನ್ನು ಇಲ್ಲಿ ನೋಡುವೆನೆಂದು ಕನಸಿನಲ್ಲಿಯೂ ನೆನೆಸಿರಲಿಲ್ಲ ವೈದೇಹಿ" ಅರಳಿದ ಕಣ್ಣುಗಳಿಂದ ನುಡಿದಳು ಊರ್ಮಿಳ.

"ವರ್ಷಗಟ್ಟಲೆ ಅಗಲಿದ್ದು ಮತ್ತೆ ನಾವು ಸಂಧಿಸುವಂತಾದುದು ಸುಯೋಗವೆ ಸರಿ. ಆದರೆ ಈಗ ನನ್ನನ್ನು ನೋಡಲು ಕಾದು ನಿಂತಿರುವ ಪೋಷಕರ ಕ್ಯೂವನ್ನು ನೆನೆದು ನಾನು ಸ್ವಲ್ಪ ಸಂಯಮದಿಂದಿರಬೇಕಾಗಿದೆ. ಈ ವಿಸಿಟಿಂಗ್ ಕಾರ್ಡ್ ನಿನ್ನ ಬಳಿ ಇರಲಿ. ಮತ್ತೆ ಸಂಜೆ ಬರುವೆ ತಾನೆ?"

"ಷ್ಯೂರ್. ಆರು ಘಂಟೆಗೆ ನಿಮ್ಮ ಮನೆಗೆ ಬರುವೆ".

ಪ್ರತಾಪ್‌ನ ಹಿಂದಿನ ತರಗತಿಯ ಒಳ್ಳೆಯ ಮಾರ್ಕ್ಸ್, ತಂದೆಯ ಟ್ರಾನ್ಸ್‌ಫರ್‌ನ ಕೆಲಸ ಎಲ್ಲಾ ನೋಡಿ ವೈದೇಹಿ, ಏಳನೆ ತರಗತಿಯಲ್ಲಿ ಅಡ್ಮಿಟ್ ಮಾಡಲು ಸಮ್ಮತಿಸಿ, ಅಪ್ಲಿಕೇಶನ್ ಫಾರಂ ಕೊಟ್ಟಳು.

ಮನಸ್ಸಿಲ್ಲದ ಮನಸ್ಸಿನಿಂದ ಗೆಳತಿಯಿಂದ ಬೀಳ್ಕೊಂಡ ಊರ್ಮಿಳ ದಾರಿಯಲ್ಲಿ ಅನ್ಯಮನಸ್ಕಳಾಗಿಯೆ ಅಡಿಯುತ್ತಿದ್ದಳು. "ಅಯ್ಯೋ! ವೈದೇಹಿ ಇನ್ನೂ ಅವಿವಾಹಿತಳಾಗಿರುವುದೆಂದರೇನು? ಯಾರನ್ನಾದರೂ ಪ್ರೀತಿಸಿ ಸಫಲವಾಗದೆ ಭಗ್ನ ಹೃದಯಿಯಾಗಿ ಇದ್ದು ಬಿಟ್ಟಳೆ?" ಎಂದು ಒಂದು ಮನವೆನ್ನುತ್ತಿದ್ದರೆ, "ಛಿ! ಛಿ! ಕಾಲೇಜಿನಲ್ಲಿಯೆ 'ಲವ್–ಗಿವ್' ಎನ್ನುವುದರ ಬಗ್ಗೆ ಉರಿದು ಬೀಳುತ್ತಿದ್ದಳವಳು. ಅಂತಹವಳು ಆ ದಾರಿಯಲ್ಲಿ ನಡೆದಿರಲಾರಳು" ಎಂದು ಇನ್ನೊಂದು ಮನ ಹೇಳುತ್ತಿತ್ತು. ವೇಗವಾಗಿ ಬರುತ್ತಿದ್ದ ಕಾರೊಂದು ಬಹಳ ಸಮೀಪ ಬಂದು ಊರ್ಮಿಳೆಯ ಯೋಚನಾ ಲಹರಿಗೆ "ಬ್ರೇಕ್" ಹಾಕಿತು.

"ಅಮ್ಮಾ! ಏನಮ್ಮಾ ನೀನು! ಜಾಗ್ರತೆಯಾಗಿ ಬರಬಾರದೆ? ಆ ಪ್ರಿನ್ಸಿಪಾಲರು ನಿನಗೆ ಈ ಹಿಂದೆಯೆ ಪರಿಚಿತರೆ? ಅಂತ ಆಗಿನಿಂದ ಕೇಳುತ್ತಲೆ ಇದ್ದೇನೆ".

"ಎಲ್ಲಾ ಮನೆಗೆ ಹೋಗಿ ಮಾತನಾಡೋಣ. ಈಗ ಸುಮ್ಮನೆ ಬಾ. ನನ್ನ ಸುಮ್ನೆ ಪೀಡಿಸಬೇಡ."

ಒಂದರ ಹಿಂದೆ ಒಂದು ತೇಲಿ ಬಂತು. ವೈದೇಹಿ ಅವಳೊಡನೆ ಕಾಲೇಜಿನಲ್ಲಿ ಓದುವಾಗ, ಅಧ್ಯಯನದಲ್ಲಿ ಪ್ರಥಮಸ್ಥಾನ ಪಡೆಯುವುದು ಮಾತ್ರವಲ್ಲದೆ ಕ್ರೀಡಾ ಸ್ಪರ್ಧೆಗಳಲ್ಲೂ ವರ್ಷ ವರ್ಷ ಚಾಂಪಿಯನ್‌ಶಿಪ್ ಗಿಟ್ಟಿಸುತ್ತಿದ್ದಳು. ತರಗತಿಯ, ವಿದ್ಯಾರ್ಥಿನಿಯರ ಮಧ್ಯೆ ಎದ್ದು ಕಾಣುವಂತಿತ್ತು ಅವಳ ರೂಪ. ಹತ್ತಿರದ ನೆಂಟರಿಷ್ಟರೆಲ್ಲ ವೈದೇಹಿಯ ತಾಯಿಯ ಬಳಿ, "ಅಂಬುಜಾಗೆ ಏನು ಕಮ್ಮಿ? ಅದೃಷ್ಟವಂತೆ! ವೈದೇಹಿಯ ಕೈ ಹಿಡಿಯಲು ನಾ ಮುಂದು, ತಾ ಮುಂದು ಎಂದು ಬಂದು ನಿಲ್ಲುವ ಗಂಡುಗಳಿಗೆ ಕೊರತೆಯಿರಲಾರದು" ಎಂದು ಹೇಳುತ್ತಿದ್ದುದೂ ಉಂಟೆಂದು ಕೇಳಿದ್ದಳವಳು. ಇಂದಿರಾ ಮೆಮೋರಿಯಲ್ ಶಾಲೆ ಸಮೀಪಿಸಿದೊಡನೆ ಊರ್ಮಿಳೆಯ ಯೋಚನಾ ಸರಣಿಗೆ ತಡೆ ಬಂದಿತು. ಮನೆಯನ್ನು ಹುಡುಕಲು ಅವಳಿಗೆ ಹೆಚ್ಚಿನ ಕಷ್ಟವಾಗಲಿಲ್ಲ. ಕರೆ ಗಂಟೆಯ ಶಬ್ದ ಕೇಳಿ ವೈದೇಹಿ ಹೊರ ಬಂದಳು. ಆತ್ಮೀಯವಾಗಿ ಮಾತನಾಡಲು ಅನುಕೂಲವಾಗುವಂತೆ ಒಳಕೋಣೆಗೆ ಕರೆದೊಯ್ದು ಕುಳ್ಳಿರಿಸಿದಳು. ಸ್ವಲ್ಪ ಹೊತ್ತು ಮಾತನಾಡುತ್ತಿದ್ದು

# ದೇವರಿಲ್ಲದ ಆಲಯ

ಮನೆಗೆ ತಲುಪಿದ ಅವಳಿಗೆ ಯಾವುದರಲ್ಲಿಯೂ ಆಸಕ್ತಿ ಕಾಣಿಸಲಿಲ್ಲ. ಯಾಂತ್ರಿಕವಾಗಿ ದಿನಚರಿಯ ಕೆಲಸದಲ್ಲಿ ಪಾಲ್ಗೊಂಡಳು. ಲಕ್ಷ್ಮಣ ಸಂಜೆ ಹಿಂದಿರುವಾಗಲೆ ಉಪಹಾರ, ಕಾಫಿ ತಯಾರಾಗಿತ್ತು. ಗೆಳತಿಯನ್ನು ಕಾಣ ಹೋಗಲು ಊರ್ಮಿಳಾ ತಯಾರಾಗಿ ನಿಂತಿದ್ದಳು. ಉಪಾಹಾರ ಮುಗಿಸಿ ಕೈಯಲ್ಲಿ ಮ್ಯಾಗಝೈನ್ ಹಿಡಿದು ಕುಳಿತಿದ್ದ ತಂದೆಯ ಬಳಿ ಓಡಿಬಂದ ಪ್ರತಾಪ ಬಹಳ ಹುಮ್ಮಸ್ಸಿನಿಂದಲೆ ಆರಂಭಿಸಿದ, "ಡ್ಯಾಡಿ, ಹೊಸ ಸ್ಕೂಲ್‌ನ ಪ್ರಿನ್ಸಿಪಾಲ್ ಮಮ್ಮೀಗೆ ಮೊದಲೆ ಪರಿಚಯದವರಂತೆ..." ಲಕ್ಷ್ಮಣ ಊರ್ಮಿಳೆಯ ಕಡೆ ಪ್ರಶ್ನಾರ್ಥಕವಾಗಿ ನೋಡಿದ.

"ಹೌದೂ ಅಂದ್ರೆ, ನಾ ಹೇಳ್ತಿದ್ನಲ್ಲ, ನನ್ನ ಬೆಸ್ಟ್ ಫ್ರೆಂಡ್ ವೈದೇಹಿ, ಇಲ್ಲೇ ಇಂದಿರಾ ಮೆಮೊರಿಯಲ್ ಸ್ಕೂಲ್‌ನಲ್ಲಿ ಪ್ರಿನ್ಸಿಪಾಲ್ ಆಗಿದ್ದಾಳೆ. ಥಕ್ಕನೆ ನೋಡಿದ್ರೆ ಅವಳ ಗುರುತು ಸಿಗೋದಿಲ್ಲ. ಆ ರೀತಿ ಬದಲಾಯಿಸಿದ್ದಾಳೆ. ಮನೆ ಅಡ್ರೆಸ್ ಕೊಟ್ಟಿದ್ದಾಳೆ. ಅವಳನ್ನ ನೋಡಿ ಬೇಗ ಬಂದ್ಬಿಡ್ತೀನಿ. ಪ್ರತಾಪನ ಮೇಲೆ ಒಂದು ಕಣ್ಣಿರಲಿ. ಹೋಗಿ ಬರಲಾ?"

"ನಾನು ಬೇಡ ಅನ್ನೋದಿಲ್ಲ ಅನ್ನೋ ಗ್ಯಾರಂಟಿಯಲ್ಲಿಯೆ ನೀನು ಹೊರಟು ನಿಂತಿದ್ದೀಯಲ್ಲ, ಜಾಗ್ರತೆ. ಬರೋದಕ್ಕೆ ಬಹಳ ಲೇಟ್ ಮಾಡಬೇಡ".

"ಸರಿ, ಸರಿ... ಬರ್ತೀನಿ."

ದಾರಿಯಲ್ಲಿ ಅಡಿಯಿರಿಸುತ್ತಿದ್ದಂತೆ ಊರ್ಮಿಳೆಯ ಮನೋಪಟಲದಲ್ಲಿ ಗತ ಜೀವನದ ಸ್ಮೃತಿ

ಒಳ ಹೋದ ವೈದೇಹಿ ತಟ್ಟೆಯಲ್ಲಿ ಪೂರಿ, ಪಲ್ಯವನ್ನಿಟ್ಟು, ಬಟ್ಟಲಲ್ಲಿ ಮೈಸೂರ್‌ಪಾಕನ್ನಿಟ್ಟು ತೆಗೆದುಕೊಂಡು ಬಂದಳು. ಗೆಳತಿ ತನ್ನ ಪ್ರೀತಿಯ ಮೈಸೂರ್‌ಪಾಕನ್ನು ಮರೆತಿಲ್ಲವೆಂದು ಊರ್ಮಿಳೆಗೆ ಆಶ್ಚರ್ಯವಾಯಿತು. ವೈದೇಹಿಯ ಉಪಚಾರದಲ್ಲಿ ಉಪಾಹಾರದ ತಟ್ಟೆ ಖಾಲಿಯಾಯಿತು.

"ಮೇಲಿಂದ ಮೇಲೆ ಆಗುವ ಬ್ಯಾಂಕಿನ ಟ್ರಾನ್ಸ್‌ಫರ್‌ನ ಗಲಾಟೆಯಲ್ಲಿ ನಿನ್ನೊಡನೆ ಪತ್ರದ ಮೂಲಕ ಕೂಡ ಕಾಂಟಾಕ್ಟ್ ಇಟ್ಟುಕೊಳ್ಳಲಾಗಲಿಲ್ಲ. ಆಕಸ್ಮಿಕವಾಗಿ ನಾವಿಬ್ಬರೂ ಒಬ್ಬರನ್ನೊಬ್ಬರು ನೋಡುವಂತಾದುದು ದೇವರಿಚ್ಛೆ! ಇನ್ನಾದರೂ ಹೇಳು ವಿದ್ದೀ, ನೀನು ಹೇಗೆ ಇರುವೆ? ತಂಗಿ ಮಾಂಡವಿ ಹೇಗಿದ್ದಾಳೆ? ನಿನ್ನ ತಂದೆ, ತಾಯಿ ನಿನ್ನ ತಮ್ಮ ಕೌಶಿಕನೊಡನೆ ಇರುವರೆ?" ಪ್ರಶ್ನೆಗಳ ಸರಮಾಲೆಯೇ ಹೊರ ಬಿತ್ತು ಊರ್ಮಿಳೆಯ ಬಾಯಿಯಿಂದ! ವೈದೇಹಿಯ ಮುಖದ ಮೇಲಿದ್ದ ಕೃತಕ ಸಂತೋಷ ಮಾಯವಾಯಿತು.

ಭಾರವಾದ ಮನಸ್ಸಿನಿಂದ ಗಂಭೀರ ಧ್ವನಿಯಲ್ಲಿ ಆರಂಭಿಸಿದಳು ವೈದೇಹಿ. "ಊರ್ಮಿಳಾ, ಎಲ್ಲ ಹೆಣ್ಣು ಮಕ್ಕಳು ಮದುವೆಯ ವಿಷಯದಲ್ಲಿ ಸಂಕೋಚಪಡುವಂತೆ ನಾನೂ ಸಂಕೋಚಿಸುತ್ತಿದ್ದೇನೆಂದು ತಿಳಿದು ತಾಯಿ, ತಂದೆ ಇಬ್ಬರೂ ನೆಂಟಸ್ತಿಕೆ ನೋಡುವ ವಿಷಯದಲ್ಲಿ ಮುಂದುವರಿದರು. ಅಚ್ಯುತರಾವ್‌ರವರ ಒಬ್ಬನೇ ಮಗ ಅಜಯ್ ಅಡ್ವೋಕೇಟ್ ಆಗಿ ಪ್ರಾಕ್ಟೀಸ್ ಮಾಡ್ತಾ ಇದ್ದ. "ಜಾತಕಗಳು ಅತ್ಯುತ್ತಮವಾಗಿ ಹೊಂದಿಕೊಳ್ಳುತ್ತವೆ. ಹುಡುಗಿಯ ಫೋಟೋ ನೋಡಿ ತೃಪ್ತಿ



ಯಾಯಿತು. ಹುಡುಗಿಯನ್ನು ನೋಡಲು ಅನುಕೂಲವಾದ ದಿನ ತಿಳಿಸಿ" ಎಂದು ಪತ್ರವು ಬಂದಿತು. ವಿವಾಹ ಬಂಧನದಲ್ಲಿ ಸಿಲುಕದೆ ಸ್ವಲ್ಪ ಕಾಲವಾದರೂ ಸ್ವತಂತ್ರವಾಗಿರ ಬೇಕೆಂದು ಬಯಸಿದ ನನ್ನ ಮನಸ್ಸಿಗೆ ವಿರುದ್ಧವಾಗಿ ನಡೆದ ತಂದೆಗೆ ಚೆನ್ನಾಗಿ ಬುದ್ಧಿ ಕಲಿಸಬೇಕೆನಿಸಿತು. ವರನ ಮನೆಯವರು ನೋಡಲು ಬರುವರೆಂದು ತಿಳಿಸಿದ ದಿನ 'ಲೀವ್' ತೆಗೆದುಕೊಳ್ಳಲು ಸಾಧ್ಯವಿಲ್ಲ ಎಂದು ಖಡಾಖಂಡಿತವಾಗಿ ಹೇಳಿ 'ಪರ್ಮಿಷನ್' ತೆಗೆದುಕೊಂಡು ಬೇಗ ಹಿಂದಿರುಗುವೆನೆಂದು ಹೇಳಿ ಹೊರಬಿದ್ದೆ. ನನ್ನ ದಾರಿ ನೋಡುತ್ತಿದ್ದ ಅವರಿಗೆ ನಿರಾಶೆಯೇ ಕಾದಿತ್ತು. ನಾನು ಭಾರ್ಗವಿ ಯೊಡನೆ ಅವಳ ಮನೆಯತ್ತ ಕಾಲು ಹಾಕಿದೆ. ಭಾರ್ಗವಿ ಚಿಕ್ಕ ವಯಸ್ಸಿನಲ್ಲಿ ವಿವಾಹವಾಗಿ ಜೀವನದಲ್ಲಿ ಬಹಳ ಕಹಿಯುಂಡ ಅದೇ ಶಾಲೆ ಯಲ್ಲಿ 'ಕೆಲಸಮಾಡುವ ಸಹೋದ್ಯೋಗಿ. ಅವಳ ದಾಂಪತ್ಯ ಜೀವನ ವಿಫಲವಾಗಿ ಅದರ ಕಹಿನೆನ ಪಾಗಿ ಉಳಿದಿದ್ದ ಮಗಳು ಉಷೆಯೊಡನೆ ಮನೆ ಮಾಡಿಕೊಂಡಿದ್ದಳು. ಸದ್ಯಕ್ಕೆ ವೈವಾಹಿಕ ಜೀವನ ದಲ್ಲಿ ಕಾಲಿಡುವುದು ಬೇಡವೆನಿಸಿದ ನನಗೆ ಅವಳ ಪೂರ್ಣ ಪ್ರೋತ್ಸಾಹವಿತ್ತು. ನಿನ್ನಂತಹ ರೂಪ ವತಿಯ ಕೈ ಹಿಡಿಯಲು ಹುಡುಗ ಅದೃಷ್ಟವಂತ ನಾಗಿರಬೇಕೆಂದು ಬಾರಿಬಾರಿಗೆ ಹೇಳುತ್ತಿದ್ದಳು. ನನ್ನ ದಾರಿ ಕಾದು ನಿರಾಶರಾದ ವರನ ಮನೆ ಯವರು ಹೊರಟು ಹೋದರು. "ಹುಡುಗಿಗೆ ಈಗಾಗಲೆ ಬೇರೆ ಯಾರಾದರೂ ಮನಸ್ಸಿಗೆ ಹಿಡಿಸಿರಬಹುದು, ಕೆಲಸದಲ್ಲಿ ಬೇರೆ ಇರೋವಾಗ ಹೇಗೆ ಹೇಳುವುದು?" ಎನ್ನುವ ಇತ್ಯರ್ಥಕ್ಕೆ ಬಂದರು ಹುಡುಗನ ಮನೆಯವರು. ನನ್ನನ್ನು ನೋಡಿದ ತಂದೆಯವರು ಹೆಸರಿಗೆ ತಕ್ಕಂತೆ 'ಉಗ್ರನರಸಿಂಹ' ಆಗಿಬಿಟ್ಟರು. ನಮಗೆ ಅವರ ಸಂಬಂಧ ಬೆಳೆಸುವ ಋಣವಿಲ್ಲ. ಅದಕ್ಕೆ ದೇವರು ಅವಳಿಗೆ ಆ ಬುದ್ಧಿಕೊಟ್ಟ ಅಂತ ಕಾಣ್ಸತ್ತೆ". ಅಂತ ಅಮ್ಮ ರಾಯಭಾರ ಮಾಡಿದರು.

ಆ ನಂತರ ಹುಡುಗ ನೋಡಲು ಅಂದವಾಗಿಲ್ಲ ಎಂದು ಒಂದು, ಸಂಬಳ ಬಹಳ-ಕಡಿಮೆ ಎಂದು ಮತ್ತೊಂದು, ಕಲಿತದ್ದು ಸಾಕಾಗಲಿಲ್ಲವೆಂದು ಮಗ ದೊಂದು ಸುಮಾರು ನೆಂಟಸ್ತಿಕೆಗಳು ತಪ್ಪಿದವು.

ಕಾಲಚಕ್ರ ಉರುಳುತ್ತ ಹೋದಂತೆ ಸೌಂದರ್ಯ ಅಳಿಯುತ್ತ ಹೋಗುವುದೆಂಬ ಕಠೋರ ಸತ್ಯ ನನ್ನ ಮನಸ್ಸಿಗೆ ಹೊಳೆಯಲಿಲ್ಲ. ಕೊನೆಯದಾಗಿ ನನ್ನನ್ನು ನೋಡಲು ಬಂದಿದ್ದ ಚಾರ್ಟರ್ಡ್-ಅಕೌಂಟೆಂಟ್ ಆಗಿದ್ದ ಸದಾನಂದ ಆಕಸ್ಮಿಕವಾಗಿ ಮಾಂಡವಿಯನ್ನು ನೋಡಿ ಮನೆಯವರೊಡನೆ ಊರಿಗೆ ಹೋದವನು ಮಾಂಡವಿಯ ಕೈ ಹಿಡಿ ಯಲು ಸಿದ್ಧವಾಗಿರುವುದಾಗಿ ಪತ್ರ ಹಾಕಿದಾಗ ಜೀವನದಲ್ಲಿಯೇ ದೊಡ್ಡ 'ಶಾಕ್' ಸಂಭವಿಸಿ ದಂತೆನಿಸಿತು. ಹಿರಿಯವಳನ್ನು ಮನೆಯಲ್ಲಿರಿಸಿ-ಕೊಂಡು ಕಿರಿಯವಳಿಗೆ ಮದುವೆ ಮಾಡಿಕೊಡು ವುದು ಸರಿಯಲ್ಲವೆಂದು ವಾದಾಡಿದ ತಾಯಿಗೆ, ಹಾಗಾದರೆ ಇಬ್ಬರನ್ನೂ ಮನೆಯಲ್ಲಿಟ್ಟುಕೊಂಡು ಕೂಡ್ಡೋಣವೆ ಎಂದು ತಂದೆಯು ಮರು ಪ್ರಶ್ನೆ ಬಾಯ್ಮುಚ್ಚಿಸಿತ್ತು. ಕನ್ನಡಿಯ ಎದುರಿನಲ್ಲಿ ನಿಂತು ಅಲಂಕರಿಸಿಕೊಳ್ಳುತ್ತಿದ್ದ ನನಗೆ ಅಲ್ಲಲ್ಲಿ ಕಾಣುತ್ತಿದ್ದ ಬಿಳಿಯ ಕೂದಲು, ಕಣ್ಣಿನ ಕೆಳಗಿನ ಕಪ್ಪುವರ್ತುಲ, ಕೆನ್ನೆಯಲ್ಲಿ ಬೀಳುತ್ತಿದ್ದ ಗುಳಿಗಳು, 'ನಿನಗೆ ವಯಸ್ಸಾಗುತ್ತ ಬಂದಿತೆಂ'ದು ಅಣಕಿಸುವಂತಿದ್ದವು. ಮಾಂಡವಿಯ ವಿವಾಹದ ಅನಂತರ ತಾಯಿ ಯವರು ಹೆಚ್ಚು ಸಮಯ ಉಳಿಯಲಿಲ್ಲ. ತಮ್ಮ ಕೌಶಿಕನ ಕತೆ ಏನೆನ್ನಲಿ? ತಾನು ಕೆಲಸದಲ್ಲಿದ್ದ ಆಫೀಸಿನಲ್ಲಿಯೆ ಸ್ಟೆನೊವಾಗಿದ್ದ 'ಮಾರ್ಗರೇಟ್' ಅನ್ನೇ ರಿಜಿಸ್ಟರ್ ಮ್ಯಾರೇಜ್ ಮಾಡಿಕೊಂಡ, ತಂದೆಯವರಿಗೂ ಮುದಿ ವಯಸ್ಸಿನಲ್ಲಿ ತಲೆಯ ಮೇಲೆ ಕಲ್ಲು ಎತ್ತಿ ಹಾಕಿದಂತಿತ್ತು. ಅವನು ಮಾಡಿದ್ದು ಸರಿಯಲ್ಲವೆಂದಾಗ ಕೋಪದಿಂದ, "ವೈದೇಹಿ ಅಕ್ಕನಿಗೆ ಕಾದರೆ ನನ್ನ ಅರವತ್ತರ ಶಾಂತಿ ಹಾಗೂ ಮದುವೆ ಎರಡೂ ಒಂದೇ ಬಾರಿ ಆದೀತೆ'ನ್ನುತ್ತ ವಕ್ರವಾಗಿ ನಗುತ್ತಿದ್ದ. ಕನ್ಯಾಸೆರೆ ಯಿಂದ ವಿಮುಕ್ತನಾಗಲಿಲ್ಲ ಎಂಬ ಮನೋ-ರೋಗದಿಂದ ಹಾಸಿಗೆ ಹಿಡಿದಿದ್ದ ತಂದೆಯವರು ಹೆಚ್ಚು ದಿನ ಬದುಕಲಿಲ್ಲ.

"ಮದುವೆಯೇ ಬೇಡ ಎಂಬ ಭಾವನೆ ಇಲ್ಲದಿ ದ್ದರೂ ಚಿರ ಕನ್ನಿಕೆಯಾಗಿ ಉಳಿದಿರುವ ನಿನ್ನ ವೈದೇಹಿಯನ್ನು ನೋಡಿ ಏನೆನ್ನಿಸುತ್ತದೆ ಊರ್ಮಿ ಹೇಳು, ಪ್ಲೀಸ್ ಹೇಳು." ವೈದೇಹಿ ತಲೆ ಎತ್ತಿ ಊರ್ಮಿಳೆಯ ವ್ಯಾಕುಲಗೊಂಡಿದ್ದ ಮುಖದತ್ತ ದೃಷ್ಟಿ ಹರಿಸಿ ಕೇಳ ತೊಡಗಿದಳು. ಇಬ್ಬರ ಕಣ್ಣುಗಳೂ ನೀರು ನಿಂತಿದ್ದ ಮಡುವಂತಾಗಿತ್ತು.

ಊರ್ಮಿಳೆಗೆ, ವೈದೇಹಿಯ ವೈವಾಹಿಕ ಜೀವನ ದಲ್ಲಿ ಕಾಲಿಡುವಂತಹ ಸಂದರ್ಭದಲ್ಲಿ ವಿಫಲ ದಾಂಪತ್ಯ ಜೀವನ ನಡೆಸಿದ ಭಾರ್ಗವಿಯ ಪ್ರಭಾವವು ಸಾಕಷ್ಟು ಬೀರಿತ್ತು ಎನ್ನಿಸದೆ ಇರಲಿಲ್ಲ ಓ! ತನ್ನ ಜೀವನದ ತಿರುವೇ ಬೇರೆಯಾಗಿತ್ತು! ಹಿರಿಯವರು ನಿಶ್ಚಯಿಸಿದ ಲಕ್ಷ್ಮಣನನ್ನೆ ತುಟಿ ಎರಡು ಮಾಡದೆ ಕೈ ಹಿಡಿದಿದ್ದಳು. ಆದರೆ ಅದಕ್ಕಾಗಿ ಪಶ್ಚಾತ್ತಾಪ ಪಡುವಂತಾಗಿರಲಿಲ್ಲ. ಬದಲಾಗಿ ಹಾಲು ಜೇನಿನ ಹೊಳೆಯುಂತಿತ್ತು ತನ್ನ ಸಂಸಾರ! ವೈದೇಹಿ ಜೀವನದ ಸಂಗಾತಿಯನ್ನು ಆರಿಸುವ ವಿಷಯದಲ್ಲಿ ನಡೆದುಕೊಂಡ ರೀತಿ ಸರಿಯುಲ್ಲವೆಂದು ಹೇಳಲು ಊರ್ಮಿಳೆಯ ನಾಲಗೆ ಮೇಲೆ ಏಳಲೇ ಇಲ್ಲ! ಚಿರ ಕನ್ನಿಕೆಯಾದ ಗೆಳತಿಯ ಮನೆಯಿಂದ ಹೊರ ಬೀಳುವಾಗ ಆ ಮನೆ "ದೇವರಿಲ್ಲದ ಆಲಯ" ದಂತೆ ಎನಿಸಿತು.

— ಶ್ರೀಮತಿ ಪ್ರಫುಲ್ಲ ಅತುಲೇಂದ್ರನಾಥ

"ಪ್ರೀತಿಯ ಅಕ್ಕ ಸುನೀಗೆ, ನಿನ್ನ ತಂಗಿಯಿಂದ ನಮಸ್ಕಾರಗಳು. ನಾನು ಈ ಹಿಂದೆ ನಿನಗೆ ಅಣ್ಣಾ ಅತ್ತಿಗೆಯರ ವಿಷಯವನ್ನು ತಿಳಿಸಿ ಪತ್ರ ಬರೆದಿದ್ದೆ. ಆದರೂ ಇನ್ನೊಮ್ಮೆ-ಬರೆಯುತ್ತಿದ್ದೇನೆ. ಅಮ್ಮ ಇತ್ತೀಚೆಗೆ ತುಂಬಾ ಕಠೋರಳಾಗುತ್ತಿದ್ದಾಳೆ. ದಿನವೂ ಅತ್ತಿಗೆಯನ್ನು ದೂರದಿದ್ದರೆ ಅವಳಿಗೆ ತಿಂದ ಅನ್ನ ಮೈಗೆ ಹತ್ತುವದಿಲ್ಲವೆಂದು ತೋರುತ್ತೆ. ಅಮ್ಮನ ಒರಟು ಮಾತುಗಳನ್ನು ಕೇಳಿ ಕೇಳಿ ನನಗೇ ತಲೆಚಿಟ್ಟು ಹಿಡಿದುಹೋಗಿದೆ. ಇನ್ನು ಅತ್ತಿಗೆ ಅದ್ಹೇಗೆ ಸಹಿಸಿಕೊಳ್ಳುತ್ತಾಳೋ. ದಿನವೂ ಕಣ್ಣೀರಿನಲ್ಲಿ ಕೈ ತೊಳೆಯುತ್ತಿದ್ದಾಳೆ. ಅಣ್ಣಾ ಇತ್ತ ಅಮ್ಮನನ್ನೂ ಎದುರಿಸಲಾರ ಅತ್ತಿಗೆಯನ್ನೂ ನೋಯಿಸಲಾರ. ನುಂಗಲೂ ಆಗದ ಉಗುಳಲೂ ಆಗದ ಬಿಸಿತುಪ್ಪದಂತೆ. ಸುಂದರವಾದ ನಮ್ಮ ಸಂಸಾರಕ್ಕೆ ಕಾರ್ಮೋಡ ಕವಿದಂತೆ ಆಗಿದೆ. ಇದಕ್ಕೆ ನೀನೊಬ್ಬಳೆ ಏನಾದರೊಂದು ಪರಿಹಾರವನ್ನು ಕಂಡು ಹಿಡಿಯಬಲ್ಲೆ. ಎಂದು ನನಗನ್ನಿಸುತ್ತಿದೆ. ಈ ಸಮಸ್ಯೆಯನ್ನು ಬಗೆಹರಿಸುವದು ನಿನ್ನೊಬ್ಬಳಿಂದಲೇ ಸಾಧ್ಯ. ದಯವಿಟ್ಟು ಬಿಡುವು ಮಾಡಿಕೊಂಡು ಹೊರಟು ಬಾ."

ಪತ್ರವನ್ನು ಓದುತ್ತಿದ್ದಂತೆ ಸುನೀತಾ ಯೋಚನೆಯ ಬಲೆಯಲ್ಲಿ ಬಿದ್ದಳು. ಈ ಸಮಸ್ಯೆಯನ್ನು ನಾನ್ಹೇಗೆ ಬಗೆಹರಿಸಲಿ? ಇದು ನನ್ನಿಂದ ಸಾಧ್ಯವೇ? ನನ್ನ ತವರು ಮನೆ ಮೊದಲಿನಂತೆ ನಗು ನಗುತಲಿರುವ ನಂದನವನವನ್ನಾಗಿ ಮಾಡಲು ನನ್ನಿಂದ ಸಾಧ್ಯವೇ?

ಯಾಕಾಗಬಾರದು? ಪ್ರಯತ್ನಕ್ಕೆ ಫಲ ಇದ್ದೇ ಇದೆ. ಕಷ್ಟಪಟ್ಟರೆ ಯಾವುದನ್ನಾದರೂ ಸಾಧಿಸಬಹುದು ಎಂದು ಗೊತ್ತಿರುವಾಗ ನಾನ್ಯಾಕೆ ಪ್ರಯತ್ನಿಸಿ ನೋಡಬಾರದು? ಎಂದುಕೊಂಡ ಅವಳ ಮನಃಪಟಲದ ಮುಂದೆ ತವರಿನ ಚಿತ್ರಗಳೆಲ್ಲ ಹಾದುಹೋಗತೊಡಗಿದವು...

ಮಲೆನಾಡಿನ ಪುಟ್ಟ ಹಳ್ಳಿ ತನ್ನ ತವರು. ಮಾವು, ಹಲಸು, ತೆಂಗು, ಕಂಗು ಮುಂತಾದ



# ಪ್ರೇಮ ತಪವಾಗಿರಲಿ

— ಸುನಂದಾ ನಾಯಕ

ಮರಗಳಿಂದ ತುಂಬಿ ತುಳುಕುವ, ಅಲ್ಲಲ್ಲಿ ಹರಿಯುವ ಝರಿ-ತೊರೆಗಳ ಮಂಜುಳ ನಿನಾದ, ದಟ್ಟವಾದ ಗಿಡ-ಮರಗಳ ಹಸಿರಿನಲ್ಲಿ ಸ್ವಚ್ಛಂದವಾಗಿ, ನಿರ್ಭಯವಾಗಿ ಹಾರಾಡುವ ಹಕ್ಕಿಗಳ ಚಿಲಿಪಿಲಿ ಸದ್ದು, ಕಾಡು ಹೂಗಳ ಸುವಾಸನೆಯನ್ನು ಹೊತ್ತು ತರುವ ಆಹ್ಲಾದಕರವಾದ ಮಂದಾನಿಲ, ಅದನ್ನೆಲ್ಲ ನೆನೆಸಿಕೊಂಡರೆ ತನ್ನ ಮೈಯ ನರನರಗಳೆಲ್ಲಾ ಪುಳಕಿತಗೊಳ್ಳುವವು. ತವರಿನ ನೆನಪು ಮಧುರವಾದ ಜೇನು ಸವಿದಂತೆ.

ಅಣ್ಣ ನಾಗರಾಜ, ತಾನು ಹಾಗೂ ತಂಗಿ ಸುಜಾತಾ ಮೂವರೇ ಮಕ್ಕಳು. ತಾವು ಚಿಕ್ಕವರಿದ್ದಾಗಲೇ ತಂದೆ ತಮ್ಮನ್ನಗಲಿ ಹೋಗಿದ್ದರು. ಅಮ್ಮನೇ ಇದ್ದ ಹೊಲಗದ್ದೆಗಳಲ್ಲಿ, ಗಂಡಾಗಿ ದುಡಿದು ನಮ್ಮನ್ನೆಲ್ಲ ಬೆಳೆಸಿದವಳು. ಅಡಿಕೆ, ತೆಂಗು, ಬಾಳೆಯ ತೋಟ ಹಾಗೂ 5–6 ಎಕರೆ ಭತ್ತದ ಗದ್ದೆ ಇದ್ದುದರಿಂದ ಅಪ್ಪನಿಲ್ಲ ಎನ್ನುವ ಕೊರತೆ ಬಿಟ್ಟರೆ, ಯಾವುದಕ್ಕೂ ತೊಂದರೆ ಇರಲಿಲ್ಲ. ಅಣ್ಣಾ ಕೃಷಿ ವಿಜ್ಞಾನದಲ್ಲಿ ಪದವಿ ಮುಗಿಸಿ ಬಂದರೂ ಅಮ್ಮ ಅಣ್ಣಾನನ್ನು ಊರುಬಿಟ್ಟು ಹೋಗಲು ಬಿಡಲಿಲ್ಲ. "ಇದ್ದ ತೋಟ ಹೊಲಗದ್ದೆಗಳೇ ಬೇಕಾದಷ್ಟು ಇರುವಾಗ ಅದನ್ನೇ ರೂಢಿಸಿಕೊಂಡರೆ ಬೇಕಾದಷ್ಟಾದೀತು. ಸುಮ್ಮನೆ ಸರಕಾರಿ ನೌಕರಿ ಹಿಡಿದು ಊರೂರು ಅಲೆಯುವುದೇಕೆ" ಎಂದ ಅಮ್ಮನ ಮಾತಿಗೆ ಅಣ್ಣಾನೂ ಒಪ್ಪಿದ್ದ.

ಅತ್ತಿಗೆ ರಾಧಾ ನನ್ನ ಗೆಳತಿ. ನನ್ನ ಜೊತೆಯಲ್ಲಿಯೇ ಓದಿದವಳು. ಆದರೆ ಅವಳಿಗೆ ತಾಯಿ ಇರಲಿಲ್ಲ. ಮಲತಾಯಿಯ ದೌರ್ಜನ್ಯದಲ್ಲಿ ಬೆಂದು ಬಸವಳಿದು ಹೋಗಿದ್ದಳು. ಯಾವಾಗಲೂ ನನ್ನೊಡನೆ ತಾನು ದಿನವೂ ಅನುಭವಿಸುವ ಯಾತನೆಯನ್ನು ಹೇಳಿಕೊಂಡು ದುಃಖಿಸುತ್ತಿದ್ದಳು. ಅದನ್ನೆಲ್ಲ ನಾನು ದಿನವೂ ಅಮ್ಮ, ಅಣ್ಣಾ, ತಂಗಿಯರ ಮುಂದೆ ತಂದು ಹೇಳುತ್ತಿದ್ದೆ. ಅವಳು ಅನುಭವಿಸುವ ಕಷ್ಟ ಕಂಡು ನಮ್ಮ ಮನೆಯವರೆಲ್ಲರಿಗೂ ಅವಳ ಮೇಲೆ ಕರುಣೆ, ಸಹಾನುಭೂತಿ, ಅನುಕಂಪಗಳು ಅವರಿಗರಿವಿಲ್ಲದೇ ಬೆಳೆದುಬಂದಿದ್ದವು. ಅಣ್ಣಾ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಅವಳನ್ನು ಪ್ರೀತಿಸಲೂ ತೊಡಗಿದ್ದ. ಅವಳ ಓದು ಎಸ್. ಎಸ್. ಎಲ್. ಸಿಗೆ ಮುಕ್ತಾಯ

ಗೋಡಿತ್ತು. ಆದರೆ ನಾನು ಮುಂದಿನ ಓದಿಗೆ ಶಿವಮೊಗ್ಗೆಯ ಹಾಸ್ಟೆಲ್‌ಗೆ ಸೇರಿದ್ದೆ.

ಅಮ್ಮ ಅಣ್ಣನ ಮದುವೆಯ ಪ್ರಸ್ತಾಪ ಎತ್ತಿದಾಗ ಅಣ್ಣ, ತಾನು ಮದುವೆಯಾಗುವದಾದರೆ ರಾಧಾಳನ್ನು ಮಾತ್ರ ಎಂದುಬಿಟ್ಟ. ಅಣ್ಣನ ಮಾತುಕೇಳಿ ನನಗೂ ತುಂಬಾ ಸಂತೋಷವಾಯಿತು. ಅಣ್ಣನ ಅಭಿಪ್ರಾಯಕ್ಕೆ ಅಮ್ಮನ ಒಪ್ಪಿಗೆಯ ಮುದ್ರೆಯೂ ಬಿದ್ದು, ರಾಧಾ ಅಣ್ಣನ ಮನೆ ಮನ ತುಂಬಿದಳು. ಗೆಳತಿಯಾದ ರಾಧಾ ಅತ್ತಿಗೆಯಾಗಿ ಮನೆಗೆ ಬಂದಾಗ, ಮನೆ ಸಂತೋಷ ಸಂಭ್ರಮಗಳ ಬೀಡಾಗಿತ್ತು. ಮಲತಾಯಿಯ ಚಿತ್ರಹಿಂಸೆಯಿಂದ ಮುಕ್ತಳಾಗಿ ಬಂದ ಅತ್ತಿಗೆಗೆ, ಅಮ್ಮ ತಾಯಿಯಂತೆ, ಪ್ರೀತಿಯಿಂದ ನೋಡಿಕೊಳ್ಳುತ್ತಿದ್ದಳು. "ಮಗಳಂತೆ ನೋಡಿಕೊಳ್ಳುವ ಅತ್ತೆ, ದೇವರಂತಹ ಪತಿ. ಪ್ರೀತಿ ಗೌರವಗಳಿಂದ ಕಾಣುವ ನಿಮ್ಮಂತ ನಾದಿನಿಯರು, ಆಹಾ ನಾನೆಷ್ಟು ಪುಣ್ಯ ಮಾಡಿದ್ದೆ. ಇಂತಹ ಮನೆಗೆ ಸೊಸೆಯಾಗಿ ಬರಲು" ಎಂದು ಅತ್ತಿಗೆ ಆಗಾಗ ಹೇಳಿಕೊಳ್ಳುತ್ತಿದ್ದಳು. ನಾನಾಗ ಹೆಮ್ಮೆಯಿಂದ ಬೀಗುತ್ತಿದ್ದೆ. ಆದರೆ ಈಗ ಆದದ್ದೇನು ?

ಅಣ್ಣ ಅತ್ತಿಗೆಯರ ಮದುವೆಯಾಗಿ ಐದು ವರ್ಷಗಳುರುಳಿದ್ದರೂ ಮನೆಯಲ್ಲಿ ಮುದ್ದುಮಗುವಿನ ಆಗಮನವಾಗಲಿಲ್ಲ. ಆಗಲೇ ಅಮ್ಮನ ಗೊಣಗಾಟ ಶುರುವಾಗತೊಡಗಿತ್ತು. ನಾನು ಅಮ್ಮನನ್ನು "ನಿಧಾನವಾಗಿ ಆಗಬಹುದಮ್ಮಾ ಯಾಕೆ ಅವಳಿಗೆ ಏನಾದರೂ ಅಂದು ಹಿಂಸಿಸುತ್ತೀಯಾ" ಎಂದು ಸುಮ್ಮನಾಗಿಸುತ್ತಿದ್ದೆ.

ಅಷ್ಟರಲ್ಲಿಯೇ ನನ್ನ ಮದುವೆಯೂ ಕೂಡಿ ಬಂತು. ನೋಡಲು ಸುಂದರನಾಗಿದ್ದ ಸತೀಶ ಬೊಂಬಾಯಿಯಲ್ಲಿ ಇಂಜನಿಯರಾಗಿದ್ದ. ಮಂಕು ಕವಿದಂತಿದ್ದ ಮನೆಯಲ್ಲಿ ಮತ್ತೆ ಉಲ್ಲಾಸದ ಗಾಳಿ ಬೀಸ ತೊಡಗಿತು. ಮಗಳ ಮದುವೆಯ ತಯಾರಿಯಲ್ಲಿ ತೊಡಗಿದ ಅಮ್ಮನಿಗೆ ತಾತ್ಕಾಲಿಕವಾಗಿ ಮೊಮ್ಮಗನ ನೆನಪು ಮರೆಯಾಗತೊಡಗಿತು.

ಅಮ್ಮ, ಅಣ್ಣ, ಅತ್ತಿಗೆ, ತಂಗಿ ಸುಜಾತಾ ಎಲ್ಲರೂ ಸಂತಸ ಸಂಭ್ರಮದಿಂದ ನನ್ನ ಮದುವೆ ಮಾಡಿ ಮುಗಿಸಿ ನನ್ನನ್ನು ಬೊಂಬಾಯಿಗೆ ಬೀಳ್ಕೊಟ್ಟರು.

ವರುಷಗಳುರುಳಿದವು. ನಾನೂ ಎರಡು ಮುದ್ದು ಮಕ್ಕಳ ತಾಯಿಯಾದೆ. ಆದರೆ ಅತ್ತಿಗೆಗೆ ಇನ್ನೂ ಮಕ್ಕಳಾಗುವ ಸಾಧ್ಯತೆ ಇಲ್ಲ ಎಂದು ಡಾಕ್ಟರ್ ಹೇಳಿದ್ದಾರೆ ಎನ್ನುವ ಸಂಗತಿ ಗೊತ್ತಾಗಿತ್ತು. ಅತ್ತಿಗೆಗೆ ಮಕ್ಕಳಾಗಲಿಲ್ಲವಲ್ಲಾ ಎನ್ನುವ ನೋವು ಆಗಾಗ ಮನಸ್ಸಿನಲ್ಲಿ ಸುಳಿದರೂ, ನನ್ನ ಸಂಸಾರದ ಸುಖದುಃಖದಲ್ಲಿ ಮಕ್ಕಳ ನೋವು ನಲಿವಿನಲ್ಲಿ ಎಲ್ಲವೂ ಮರೆತುಹೋಗುತ್ತಿತ್ತು. ಆದರೆ ಇತ್ತೀಚೆಗೆ ಸುಜಿಯಿಂದ ಮೇಲಿಂದಮೇಲೆ ಪತ್ರಗಳು ಬರತೊಡಗಿವೆ. ಅಂದರೆ ತವರಿನ ಸ್ಥಿತಿ ತುಂಬ ಹದಗೆಟ್ಟಿರಬೇಕು. ಅಮ್ಮ ವಂಶದ ಕುಡಿಗಾಗಿ ಅತ್ತಿಗೆಯನ್ನು ಅದೆಷ್ಟು ಹುರಿದು ಮುಕ್ಕುತ್ತಿದ್ದಾಳೋ, ಅತ್ತಿಗೆ ಅದೆಷ್ಟು ಕೊರಗುತ್ತಿದ್ದಾಳೊ ಅನಿಸಿ ಸಂಕಟದಿಂದ ಒದ್ದಾಡಿದೆ. ಇದಕ್ಕೆ ಏನಾದರೂ ಉಪಾಯ ಮಾಡಲೇಬೇಕು. ಈಗ ಅಲ್ಲಿಗೆ ಹೋಗಲೇ ಬೇಕು ಅನಿಸಿತು.

ಆಫೀಸಿಗೆ ಒಂದು ತಿಂಗಳು ಲೀವ್ ಬರೆದು ನನ್ನವರ ಒಪ್ಪಿಗೆ ಪಡೆದು ಹೊರಟೆ. ಶಾಲೆಗೆ ಹೋಗುತ್ತಿದ್ದ ಮಕ್ಕಳನ್ನು ಅತ್ತೆ ತಾನು ನೋಡಿಕೊಳ್ಳುತ್ತೇನೆ ಎಂದರು.

* * *

ಬಸ್‌ಸ್ಟಾಂಡಿನಲ್ಲಿ ಅಣ್ಣ ಹಾಗೂ ಸುಜಿ ಕಾಯುತ್ತಿದ್ದರು. ಅವರ ಮುಖ ನೋಡಿದೊಡನೆ ನನ್ನ ಆಯಾಸವೆಲ್ಲ ಮಾಯವಾಯಿತು. ಬಸ್-ಸ್ಟಾಂಡಿನಿಂದ ಎರಡು ಮೈಲು ದೂರವಿತ್ತು ಮನೆ. ಅಣ್ಣ ಗಾಡಿ ಕಟ್ಟಿಸಿಕೊಂಡು ಬಂದಿದ್ದ. ಎತ್ತಿನ ಗಾಡಿಯಲ್ಲಿ ದಿಂಬಿಗೆ ಒರಗಿ ಕುಳಿತು, ಸುತ್ತಮುತ್ತಲಿನ ಪ್ರಕೃತಿ ಸೌಂದರ್ಯವನ್ನು ಸವಿಯುತ್ತಾ, ಅಣ್ಣ ಹಾಗೂ ಸುಜಿಯರ ಆತ್ಮೀಯ ಮಾತುಗಳನ್ನು ಕೇಳುತ್ತಾ ಸಾಗುತ್ತಿದ್ದ ನನಗೆ ರಸ್ತೆ ಸರಿದುದೇ ತಿಳಿಯಲಿಲ್ಲ.

## ಸರದಾರ

ಮೂರು ಬಾರಿ ನೋಡಿನವ್ವ
ಅವಗ ನಾನು ಸೋತೆನವ್ವ
ಬೇರೆ ಯಾರನು ಒಲ್ಲೆನವ್ವ
ಅವಗ ಮನಸು ಕೊಟ್ಟೆನವ್ವ!

ಕ್ವಾರೀ ಮೀಸಿ ಸರದಾರಂವಾ,
ತೀಡಿ ಧೋತರ ಉಟ್ಟಾನಂವಾ,
ಎತ್ತರ ನಿಲುವಿನ ಪುರುಷನಂವಾ,
ನಗೀ ಮೋಡಿ ಹಾಕ್ತಾನಂವಾ!

ಬೆಳ್ಳಿ ಕಡಗ ತೋಟ್ಯಾನಂವಾ,
ಗಿರಕಿ ಚಪ್ಪಲಿ ಹಾಕ್ಯಾನಂವಾ,
ಕೃಷ್ಣನ ಹಾಂಗ ಕಾಣ್ತಾನಂವಾ,
ತುಂಟ ನಗು ಬೀರ್ತಾನಂವಾ!

ನೋಟದಲ್ಲಿ ಒಲುವು ಪ್ರೀತಿ,
ನೋಟದಲ್ಲಿ ಕರುಣೆ ಶಾಂತಿ;
ಕಂಡೆನವ್ವ ಅಭಯ ಮುದ್ರೆ,
ಬೇರೆ ಬೇಡ ಅವನು ಇದ್ರೆ!

ಕಂಡೆನವ್ವ ಧೀರ ಪುರುಷ,
ಬಾಳು ಅವನ ಜೊತಿಗೆ ಸೊಗಸ;
ಮನಸು ಅಲ್ಲೇ ನೆಟ್ಟಿತಲ್ಲೆ,
ಇಲ್ಲಿಯ ಧ್ಯಾಸಾ ಮರೆತೇನಲ್ಲೆ!

ಹೊಳ್ಳಿ ಹೊಳ್ಳಿ ನೋಡ್ತಾನಂವಾ,
ನೋಡಿ ಮಳ್ಳ ಮಾಡತಾನಂವಾ,
ದೇಹದ ಭಾನ ಮರೆಸ್ಯಾನಂವಾ,
ಕನಸಿನಲ್ಲೂ ಕಾಡ್ತಾನಂವಾ!

—ರಂಜನಾ ವಿಜಯ ಕುಲಕರ್ಣಿ
ಬೆಂಗಳೂರು - 79.

ಮಾರನೇ ದಿನ ಅಮ್ಮ ನನ್ನ ಮನೆಯ ಹಾಗೂ ಮಕ್ಕಳ ಸುಖದುಃಖವನ್ನು ವಿಚಾರಿಸುತ್ತಾ, ಸಾವಕಾಶವಾಗಿ ಅತ್ತಿಗೆಯ ವಿಷಯ ತೆಗೆದು ಅವಳಿಗೆ ಹಿಡಿಶಾಪ ಹಾಕಹತ್ತಿದಳು. ಸುನೀ, ಇವಳಿಗಂತೂ ಮಕ್ಕಳಾಗುವ ಹಾಗಿಲ್ಲ. ಬಂಜೆ ಮುಂಡೇದು. ಶಿವಮೊಗ್ಗೆಯ ಡಾಕ್ಟರ್ರಿಗೆ ತೋರಿಸಿದ್ದಾಯಿತು. 'ಇವಳಲ್ಲೇ ದೋಷವಿದೆ' ಎಂದರು. ಹೋಗಿ ಹೋಗಿ ಗೊಡ್ಡೆಮ್ಮೆಯನ್ನು ತಂದಂತಾಯಿತು. ನಮ್ಮ ವಂಶ ಇಲ್ಲಿಗೆ ನಿಂತು ಹೋಗಬಾರದು. ಅದಕ್ಕೆ ನಿನ್ನಣ್ಣನಿಗೆ ಇನ್ನೊಂದು ಮದುವೆ ಮಾಡಬೇಕೆಂದು ನಿರ್ಧರಿಸಿದ್ದೀನಿ" ಎಂದಳು.

ಅಮ್ಮನ ಮಾತಿನಿಂದಲೇ ಅತ್ತಿಗೆ ಎಂತಹ ಮಾನಸಿಕ ಹಿಂಸೆ ಅನುಭವಿಸುತ್ತಿದ್ದಾಳೆಂದು ಅರಿವಾಯಿತು. ಅಮ್ಮನ ಬಗ್ಗೆ ವಿಪರೀತ ಕೋಪವೂ ಬಂದಿತು. ಅಮ್ಮನಾದರೇನು ? ಯಾರಾದರೇನು ? ತಾನೂ ಒಂದು ಹೆಣ್ಣಾಗಿ ಇನ್ನೊಂದು ಹೆಣ್ಣನ್ನು ಈರೀತಿ ಮಾತಿನ ಬಾಣಗಳಿಂದ ಚುಚ್ಚಿ ಚುಚ್ಚಿ ನೋಯಿಸುವುದು ಸರಿಯೇ. ಹೆಣ್ಣಿಂದ ಮೇಲೆ ಎಲ್ಲರೂ ಒಂದೇ. ಮಕ್ಕಳಾಗದಿದ್ದುದಕ್ಕೆ ಅವಳೇನು ಮಾಡಿಯಾಳು. ಬಂದ ಕೋಪವನ್ನು ಅಲ್ಲಿಯೇ ತಡೆಹಿಡಿದು ಏನೊಂದೂ ಮಾತನಾಡದೇ ಅಲ್ಲಿಂದ ಜಾಗ ಖಾಲಿ ಮಾಡಿದೆ.

ಮುಸ್ಸಂಜೆಯ ಸಮಯ. ಸುಜೀ ಹಿತ್ತಲಲ್ಲಿ ಮಲ್ಲಿಗೆ ಮೊಗ್ಗು ಬಿಡಿಸುತ್ತಿದ್ದಳು. ಮಲ್ಲಿಗೆಯ ಸುವಾಸನೆ ಹಿತ್ತಲಲ್ಲಿ ತುಂಬಿ ಮನಸ್ಸಿಗೆ ಮುದ ನೀಡುತ್ತಿತ್ತು. ಮೊಗ್ಗನ್ನು ರಾಶಿ ಹಾಕಿಕೊಂಡು ಮಾಲೆ ಕಟ್ಟಲು ಕುಳಿತ ಸುಜೀ "ಅಕ್ಕಾ" ಎಂದಳು. "ಏನು ?" ಎನ್ನುವಂತೆ ಅವಳ ಮುಖ ನೋಡಿದೆ. "ಅಮ್ಮ ಅಣ್ಣನಿಗೆ ಮದುವೆ ಮಾಡುವ ತಯಾರಿಯಲ್ಲಿ ಇದ್ದಾಳೆ. ಅತ್ತಿಗೆಯೂ ತನ್ನಿಂದ ಈ ವಂಶ ನಿಂತು ಹೋಗುವದು ಬೇಡವೆಂದು ಒಪ್ಪಿಗೆ ನೀಡಿದ್ದಾಳೆ. ಅವಳು ಅನುಭವಿಸುವ ದುಃಖ, ಯಾತನೆ ಸಂಕಟಗಳನ್ನು ನನ್ನಿಂದ ನೋಡಲಾಗುವದಿಲ್ಲ. ಅಣ್ಣ ಅಮ್ಮನ ಕಟು ನುಡಿಗಳನ್ನು ಕೇಳಲಾಗದೇ, ಅತ್ತಿಗೆಯ ಸಂಕಟವನ್ನು ನೋಡಲಾಗದೇ ಇಡೀ ದಿನ ತೋಟದಲ್ಲಿಯೇ ಉಳಿದು ಬಿಡುತ್ತಾನೆ. ಊಟಕ್ಕೆ ಬಂದರೆ ಬಂದ. ಇಲ್ಲದಿದ್ದರೆ ಇಲ್ಲ, ನಾನು ಹೋಗಿ ಕರೆದು ತರಬೇಕು. ಮನೆಯಲ್ಲಿ ಉಸಿರುಗಟ್ಟಿಸುವ ವಾತಾವರಣ. ಒಬ್ಬೊಬ್ಬರ ಮುಖ ಒಂದೊಂದು ದಿಕ್ಕಿಗೆ. ಮನೆಯಲ್ಲಿ ನಗು ಕಾಣದೇ ಏಷ್ಟೋ ವರ್ಷಗಳಾದಂತೆ ಅನ್ನಿಸುತ್ತಿದೆ. ಅಮ್ಮ 'ಮಗು ಮಗು' ಎಂದು ಮತಿಗೆಟ್ಟವರಂತೆ ಕೂಗಾಡುವದನ್ನು ಸಹಿಸಲಾಗುವದಿಲ್ಲ. ಮಕ್ಕಳಿಲ್ಲದಿದ್ದರ ಬದುಕಲು ಸಾಧ್ಯವಿಲ್ಲವೇ ಅಕ್ಕಾ ? ನನಗೆ ಸಾಕಾಗಿ ಹೋಗಿದೆ. ನಮ್ಮ ಮನೆ ಮೊದಲಿನಂತೆ ನಗು ತುಂಬಿ ತುಳುಕುವಂತೆ, ನೆಮ್ಮದಿ ನೆಲಸುವಂತೆ ಮಾಡಲು ಸಾಧ್ಯವೇ ಅಕ್ಕಾ ?" ಎಂದು ನಿಟ್ಟುಸಿರು ಬಿಟ್ಟಳು.

"ಎಲ್ಲವೂ ಸರಿಯಾಗುತ್ತದೆ ಸುಜೀ. ನೀನು ಚಿಂತಿಸಬೇಡ" ಎಂದು ಮಂಕು ಕವಿದ ಅವಳ ಮುಖದ ಮೇಲೆ ಹಾರಾಡುತ್ತಿದ್ದ ಮುಂಗುರುಳನ್ನು ಸವರಿ ಅವಳ ಕೆನ್ನೆ ತಟ್ಟಿದೆ. ಭರವಸೆ ತುಂಬಿದ ಕಣ್ಣುಗಳಿಂದ ನನ್ನನ್ನು ನೋಡತೊಡಗಿದಳು ಸುಜೀ 'ಇದು ಸಾಧ್ಯವೇ' ಎನ್ನುವಂತೆ.

ದನಕರುಗಳೆಂದರೆ ನನಗೆ ಎಲ್ಲಿಲ್ಲದ ಪ್ರೀತಿ. ಅವುಗಳನ್ನು ನೋಡಿ ಬರೋಣವೆಂದು ಕೊಟ್ಟಿಗೆಯ ಕಡೆ ನಡೆದೆ. ಅತ್ತಿಗೆ ದನಕರುಗಳಿಗೆ ಮೇವನ್ನು ಕೊಡುತ್ತಿದ್ದಳು. ಅಲ್ಲಿಯೇ ಇದ್ದ ಕರುವನ್ನು ಎತ್ತಿ ಮುದ್ದಿಸತೊಡಗಿದ್ದಳು. ನನ್ನನ್ನು ನೋಡಿದವಳೇ ಗಲಿಬಿಲಿಗೊಂಡು ತಟ್ಟನೆ ನಿಂತವಳು, ಒಮ್ಮೆಲೆ ನನ್ನ ಕೈ ಹಿಡಿದುಕೊಂಡು ಬಿಕ್ಕಿಬಿಕ್ಕಿ ಅಳಲಾರಂಭಿಸಿದಳು. ಅವಳ ಕಣ್ಣನಿಂದ ಇಳಿಯುತ್ತಿದ್ದ ಒಂದೊಂದು ಹನಿಯೂ ಅವಳು ಅನುಭವಿಸಿದ ಹಿಂಸೆ, ಯಾತನೆ, ಸಂಕಟಗಳನ್ನು ಸಾರಿ ಹೇಳುತ್ತವೆ ಅನ್ನಿಸಿ ಕರುಳು ಹಿಂಡಿದಂತಾಯಿತು. ಸಮಾಧಾನ ಮಾಡಿಕೋ ಅತ್ತಿಗೆ ಎಂದು ಅವಳನ್ನ ಸಂತೈಸಿದೆ.

ಬೆಳದಿಂಗಳ ರಾತ್ರಿ. ಎಲ್ಲರೂ ಊಟಮಾಡಿ ಅಂಗಳದಲ್ಲಿ ಕುಳಿತಿದ್ದೆವು. ಯಾರೊಬ್ಬರೂ ಮಾತನಾಡುತ್ತಿರಲಿಲ್ಲ. ರಾತ್ರಿ ಊಟವಾದ ಕೂಡಲೇ ಅಣ್ಣ ತೋಟವನ್ನೆಲ್ಲಾ ನೋಡಿಕೊಂಡು ಬರುವದು ಹಿಂದಿನಿಂದಲೂ ಬಂದ ವಾಡಿಕೆ. ಅಣ್ಣ ಹೊರಟಾಗ "ನಾನೂ ಬರುತ್ತೇನಣ್ಣಾ" ಎಂದೆ. ಅಣ್ಣ ಬೇಡವೆನ್ನಲಿಲ್ಲ. ಹಾಲು ಚೆಲ್ಲಿದಂತೆ ಬೆಳದಿಂಗಳು ಚೆಲ್ಲಿದ್ದಿತ್ತು. ತಾರೆಗಳ ಜತೆಗೂಡಿ ಚಂದ್ರಮ ಮೆರವಣಿಗೆ ಹೊರಟಂತಿತ್ತು ಆಗಸ. ಗಿಡಮರಗಳ ಸಂದಿನಿಂದ ತೂರಿಬಂದ ಚಂದ್ರನ ಕಿರಣಗಳು ನೆರಳು-ಬೆಳಕಿನಾಟ ಆಡುವಂತೆ ತೋರುತ್ತಿತ್ತು. ಮೌನವಾಗಿ ಪ್ರಕೃತಿಯ ಸೌಂದರ್ಯದಲ್ಲಿ ಲೀನಳಾಗಿ ಸಾಗುತ್ತಿರುವಾಗ ಅಣ್ಣನಿಂದ "ಸುನೀ. ಅಮ್ಮ ನಿನ್ನೊಡನೆ ಎಲ್ಲವನ್ನೂ ಹೇಳಿರಬೇಕು. ಅಮ್ಮ ನನಗೆ ಇನ್ನೊಂದು ಮದುವೆ ಮಾಡಲು ತುದಿಗಾಲಲ್ಲಿ ನಿಂತಿದ್ದಾಳೆ. ಇದಕ್ಕೆ ರಾಧಾಳೂ ಒಪ್ಪಿಬಿಟ್ಟಿದ್ದಾಳೆ. ಮಗುವಿಗೋಸ್ಕರ ರಾಧಾಳ ಬಾಳನ್ನು ಹಾಳುಮಾಡಲು ನನ್ನಿಂದ ಆಗದು. ಏನೇ ಆದರೂ ನಾನು ಈ ಜನ್ಮದಲ್ಲಿ ಇನ್ನೊಂದು ಮದುವೆಯಾಗಲಾರೆ."

ಅಣ್ಣನ ದೃಢ ನಿರ್ಧಾರ ಕಂಡು ಮನಸ್ಸು ಸಂತಸದಿಂದ ಕುಣಿಯಿತು.

"ಅಣ್ಣಾ ನಾನೊಂದು ಮಾತು ಹೇಳಿದರೆ ನೀನು ಕೇಳುತ್ತೀಯಾ" ಎಂದೆ.

"ಮದುವೆಯಾಗುವದೊಂದನ್ನು ಬಿಟ್ಟು ಮತ್ತೇನೂ ಹೇಳಿದರೂ ಕೇಳುತ್ತೇನೆ ಸುನೀ" ಎಂದ.

"ನಿನಗೆ ಅಮ್ಮ ಬೇಕಲ್ಲವೇ, ರಾಧಾಳೂ ಬೇಕಲ್ಲವೇ. ಮನೆಯಲ್ಲಿ ಸುಖ-ಶಾಂತಿ ನೆಲಸಬೇಕಲ್ಲವೇ. ಹಾಗಿದ್ದರೆ ನೀನೊಂದು ಮಗುವನ್ನು ದತ್ತು ತೆಗೆದುಕೊಂಡರೆ ನಿನ್ನ ಸಮಸ್ಯೆಗಳೆಲ್ಲ ಪರಿಹಾರವಾಗುವವು ಎಂದೆ."

"ಅಯ್ಯೋ ಸುನೀ, ಇದನ್ನು ನಾನೂ ಯೋಚಿಸಿ ಅಮ್ಮನೊಡನೆ ಹೇಳಿ ನೋಡಿದೆ. ಆದರೆ ಅಮ್ಮ ಸುತರಾಂ ಇದಕ್ಕೆ ಒಪ್ಪಲಿಲ್ಲ. ಯಾರದೋ ಮಗುವನ್ನು ನಮ್ಮದೆಂದು ಸಾಕು ಎನ್ನುತ್ತೀಯಾ ಎಂದು ಹಾರಾಡಿದಳು. ಆಗ ಆ ವಿಷಯವನ್ನು ಅಲ್ಲಿಯೇ ಬಿಟ್ಟುಬಿಟ್ಟೆ" ಎಂದ.

"ಹೌದಾ, ಹಾಗಾದರೆ ಇದಕ್ಕೆ ನಾನೊಂದು ಉಪಾಯವನ್ನು ಕಂಡು ಹಿಡಿದಿದ್ದೇನೆ. ಅದನ್ನು ನಾನು ಈಗಲೇ ಹೇಳೋಲ್ಲ. ನೀವೆಲ್ಲರೂ ನಾನು ಹೇಳಿದಂತೆ ಕೇಳಬೇಕು. ಅಂದರೆ ಮನೆಯಲ್ಲಿ ಮೊದಲಿನಂತೆ ಸಂತಸ ಸಂಭ್ರಮಗಳು ತುಂಬಿ ತುಳುಕುವದು" ಎಂದೆ.

## ಬಹುಮುಖ ಪ್ರತಿಭೆಯ ಶ್ರೀಮತಿ ಶಕುಂತಲಾ ಭಟ್

''ಆಡು ಮುಟ್ಟದ ಸೊಪ್ಪಿಲ್ಲ...'' ಎಂಬಂತೆ ಶ್ರೀಮತಿ ಶಕುಂತಳಾ ಭಟ್ಟರು ಕೈಯಾಡಿಸದ ಕ್ಷೇತ್ರವಿಲ್ಲ. ಸಾಹಿತ್ಯಕ - ಸಾಂಸ್ಕೃತಿಕ ಸಾಮಾಜಿಕ ರಂಗಗಳಿಗೆ ತಮ್ಮನ್ನು ತಾವು ಸಂಪೂರ್ಣವಾಗಿ ತೊಡಗಿಸಿಕೊಂಡಿರುತ್ತಾರೆ.

ಈ ಉತ್ಸಾಹಿ ಮಹಿಳೆಗೆ ಮೂವತ್ತೇಳರ ಪ್ರಾಯ. S.S.L.C. ವರೆಗಿನ ವಿದ್ಯಾಭ್ಯಾಸ ನಡೆದದ್ದು ಮೈಸೂರಿನಲ್ಲಿ. ಹದಿಮೂರರ ಎಳವೆಯಲ್ಲಿ ಕಂಕಣಬಲ. ಉಡುಪಿ ಅವರ ತವರೂರಾದರೆ ಹಳೆಯಂಗಡಿಯಲ್ಲಿ ಅವರ ಪತಿಗೃಹ. ಸಾಂಪ್ರದಾಯಿಕ ಮನೆತನದಲ್ಲಿದ್ದರೂ ಸಾಹಿತ್ಯಕ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳ ನೆಲೆ ಅತ್ತ ಅವರ ಆಸಕ್ತಿ.

ತಾಲೂಕು ಜಿಲ್ಲಾ ರಾಜ್ಯಮಟ್ಟದ ಯುವ ಮೇಳಗಳಲ್ಲಿ ಭಾಗವಹಿಸಿ ಹಲವಾರು ಬಹುಮಾನಗಳನ್ನು ಪಡೆದಿರುತ್ತಾರೆ.

ಹಾಡುಗಾರಿಕೆ.. ನೃತ್ಯ... ನಟನೆ... ರಂಗವಲ್ಲಿ... ಕರಕುಶಲ ವಸ್ತುಗಳ ತಯಾರಿಕೆ ಹಾಗೂ ಏಕಪಾತ್ರಾಭಿನಯಗಳಲ್ಲಿ ಇವರು ನಿಸ್ಸೀಮರು. ಮೇಲಾಗಿ ಆಕಾಶವಾಣಿ ಕಲಾವಿದೆ. ಇವರು ರಚಿಸಿದ ನೃತ್ಯರೂಪಕಗಳು ತುಳು ಹಾಗೂ ಕನ್ನಡ ನಾಟಕಗಳಿಗೆ ಹಲವಾರು ಪ್ರಶಸ್ತಿ ದೊರಕಿದೆ. ನಾಟಕಗಳು ವಿದೇಶದಲ್ಲೂ ಪ್ರದರ್ಶನಗೊಂಡು ಮೆಚ್ಚಿಗೆ ಗಳಿಸಿವೆ. ಹಳೆಯಂಗಡಿ ಮಹಿಳಾ ಹಾಗೂ ಯುವತಿ ಮಂಡಲದಲ್ಲಿ ಅಧ್ಯಕ್ಷೆ ಆಗಿ 'ದುಡಿದಿರುತ್ತಾರೆ. ಮತ್ತು ಮಂಡಲ ಪಂಚಾಯತಿ ಸದಸ್ಯೆ ಕರಾವಳಿ ಲೇಖಕಿಯರ ಸಂಘದ ಸದಸ್ಯೆ ಕರ್ನಾಟಕ ಸಾಹಿತ್ಯ ಪರಿಷತ್ ಇವುಗಳ ಸದಸ್ಯೆ ಆಗಿರುತ್ತಾರೆ.

ಅಖಿಲ ಭಾರತ ತುಳು ಕೂಟ, ಜಿಲ್ಲಾ ಸಾಹಿತ್ಯ ಸಮ್ಮೇಳನ, ಬಾಲಮೇಳ, ಜಿಲ್ಲಾ ಮಟ್ಟದ ವರ್ಧಮಾನ ಕಾವ್ಯಮೇಳಗಳಲ್ಲಿ, ಕವಿಗೋಷ್ಠಿಗಳಲ್ಲಿ ಭಾಗವಹಿಸಿದ್ದಾರೆ. ಹಾಗೂ ಸಂಚಾಲಕಿಯಾಗಿ ದುಡಿದಿರುತ್ತಾರೆ.

ಕುಟುಂಬ ಯೋಜನೆ, ಸಾಕ್ಷರತೆ, ಸಣ್ಣ ಉಳಿತಾಯ, ಆರೋಗ್ಯ ಕಲ್ಯಾಣ, ಈ ಬಗ್ಗೆ ಗ್ರಾಮೀಣರಲ್ಲಿ ಅರಿವು ಮೂಡಿಸುವಲ್ಲಿ ಯಶಸ್ವಿಯಾಗಿರುತ್ತಾರೆ. ಮತ್ತು ಸಂತಾನ ಹರಣ ಚಿಕಿತ್ಸೆ ನೇತ್ರ ಚಿಕಿತ್ಸೆ. ಶಿಬಿರಗಳಲ್ಲಿ ಭಾಗವಹಿಸಿರುತ್ತಾರೆ.

ವಿಧವಾ ವೇತನ. ವೃದ್ಧಾಪ್ಯ ವೇತನ. ಅಂಗವಿಕಲ ವೇತನ, ಪ್ರಕೃತಿ ವಿಕೋಪಕ್ಕೆ ತುತ್ತಾದವರಿಗೆ ಸರಕಾರದಿಂದ ಸಿಗುವ ಸೌಲಭ್ಯಗಳನ್ನು ಹಾಗೂ ಸಾರ್ವಜನಿಕರಿಂದ ಸಿಗುವ ನೆರವನ್ನು ಒದಗಿಸಿ ಕೊಟ್ಟಿರುತ್ತಾರೆ.

ಇವರ ಉತ್ತಮ ಸಮಾಜಸೇವೆಯ ಸಾಧನೆ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳಿಗೆ ಚಿತ್ರದುರ್ಗದಲ್ಲಿ ನಡೆದ ರಾಜ್ಯಮಟ್ಟದ ಯುವ ಮೇಳದ ಸಂದರ್ಭದಲ್ಲಿ 1989ರ ಸಾಲಿನ ಕರ್ನಾಟಕ ರಾಜ್ಯ ಯುವಪ್ರಶಸ್ತಿ ಇವರಿಗೆ ದೊರಕಿದೆ. ಮತ್ತು ಇವರ ಅತ್ಯುತ್ತಮ ಸೇವೆಯನ್ನು ಗುರುತಿಸಿ - ಲಯನ್ಸ್, ಜೇಸೀ, ಹಾಗೂ ಇನ್ನಿತರ ಸಂಘ-ಸಂಸ್ಥೆಗಳು ಇವರನ್ನು ಅಭಿಮಾನದಿಂದ ಸನ್ಮಾನಿಸಿವೆ. ಇವರು ಬರೆದಿರುವ ಕಥೆ-ಕವನ-ವೈಚಾರಿಕ ಲೇಖನಗಳು ನಾಡಿನ ಪ್ರಮುಖ ಪತ್ರಿಕೆಗಳಲ್ಲಿ ಪ್ರಕಟಗೊಂಡಿವೆ. ಬಾನುಲಿಯಲ್ಲಿ ಪ್ರಸಾರವಾಗಿವೆ.

ಇವರ ಚೊಚ್ಚಲ ಕೃತಿ 'ಹಣತೆ' ಕಾದಂಬರಿಗೆ ರಾಜ್ಯಮಟ್ಟದಲ್ಲಿ ಏರ್ಪಡಿಸಿದ್ದ ಸ್ಪರ್ಧೆಯಲ್ಲಿ ಅಂಬರೀಶ್ ಕನ್ನಡ ಸಾಹಿತ್ಯ ಪ್ರಶಸ್ತಿಯೂ, ''ಅತಿಥಿ'' ಕವನ ಸಂಕಲನಕ್ಕೆ ರಾಜ್ಯಮಟ್ಟದಲ್ಲಿ ನಡೆದ ಕವನ ಸಂಕಲನ ಸ್ಪರ್ಧೆಯಲ್ಲಿ ದ್ವಿತೀಯ ಬಹುಮಾನ ಲಭಿಸಿದೆ.

ಕರಾವಳಿ ಉತ್ಸವದಲ್ಲಿ ನಡೆದ ಜಿಲ್ಲಾ ಮಟ್ಟದ ಪುಷ್ಪ ರಂಗವಲ್ಲಿಯಲ್ಲಿ ಪ್ರಥಮ ಬಹುಮಾನ ಲಭಿಸಿದೆ.

ಹೊಗಳಿಕೆಗೆ ಹಿಗ್ಗದೆ, ತೆಗಳಿಕೆಗೆ ಕುಗ್ಗದೆ.. ಗೃಹಿಣಿಯಾಗಿದ್ದುಕೊಂಡು ಇವರು ಸಾಧಿಸಿದ ಕಾರ್ಯ ವೈಖರಿ ನಿಜಕ್ಕೂ ಮೆಚ್ಚ ತಕ್ಕದ್ದು.

**— ಮಮತಾ ಶಂಕರ್, ಬೆಂಗಳೂರು**



"ಹಾಗಾದರೆ ನಾನು ನಿನ್ನ ಮಾತನ್ನು ಕೇಳಲು ಸಿದ್ಧ. ಏನಾದರೂ ಮಾಡಿ ನಮ್ಮ ಸಂಸಾರ ಉಳಿಸು" ಎಂದ ಅಣ್ಣ.

* * *

ಅಂದು ಅಮ್ಮನೊಡನೆ ನಗುನಗುತ್ತಾ ಮಾತ ನಾಡುತ್ತಾ ಅಂದೆ. "ಅಮ್ಮಾ, ಮುಂಬೈನಲ್ಲಿ ಒಳ್ಳೊಳ್ಳೆಯ ಡಾಕ್ಟರಿದ್ದಾರೆ. ಈಗ ವಿಜ್ಞಾನವೂ ಮುಂದುವರಿದಿದೆ. ನಾನಾ ವಿಧದ ಪ್ರಯೋಗ ದಿಂದ ಎಷ್ಟೋ ಮಂದಿಗೆ ಮಕ್ಕಳಾದುದನ್ನು ನಾನು ನೋಡಿದ್ದೇನೆ. ಅದಕ್ಕೆ ಅಣ್ಣ ಅತ್ತಿಗೆಯನ್ನು ನಾನು ಕರೆದುಕೊಂಡು ಹೋಗುತ್ತೇನಮ್ಮಾ" ಎಂದೆ.

"ಅಯ್ಯೋ ಈ ಬಂಜೆ ಮುಂಡೆಗೆ ಎಲ್ಲಿ ಕರೆದು ಕೊಂಡು ಹೋಗಿ ತೋರಿಸಿದರೂ ಬರುವದು ಒಂದೇ ಉತ್ತರ. ಮಕ್ಕಳಾಗುವ ಭಾಗ್ಯ ಅವಳ ಹಣೆಯಲ್ಲಿ ಬರೆದಿಲ್ಲ. ಅದೇನು ಪಾಪಮಾಡಿ ಹುಟ್ಟಿದ್ದಳೋ ಕಾಣೆ, ನೀನು ಸುಮ್ಮನೆ ಇಲ್ಲದ ತೊಂದರೆಯನ್ನು ತಂದುಕೊಳ್ಳಬೇಡ" ಎಂದಳು.

"ಅಮ್ಮ ನಾನೊಂದು ಬಾರಿ ಅವರನ್ನು ಕರೆದುಕೊಂಡು ಹೋಗಿ ತೋರಿಸುತ್ತೇನೆ. ಆಮೇಲೆ ಆಗದಿದ್ದರೆ ನೀನು ಖಂಡಿತ ಅಣ್ಣನಿಗೆ ಇನ್ನೊಂದು ಮದುವೆ ಮಾಡು. ಆಗ ಅಣ್ಣನನ್ನು ಒಪ್ಪಿಸುವ ಭಾರ ನನ್ನದು" ಎಂದುಕೂಡಲೇ ಅಮ್ಮನ ಮುಖ ಊರಗಲವಾ ಯಿತು. ಆದರೂ ತೋರ್ಪಡಿಸಿಕೊಳ್ಳದೇ "ಏನೋಮ್ಮ ನಿನ್ನಣ್ಣನನ್ನು ಕೇಳು" ಎಂದಳು.

ತವರಿನಲ್ಲಿ ದಿನ ಕಳೆದುದೇ ತಿಳಿಯಲಿಲ್ಲ. ಹೋಗುವಾಗ ಅಣ್ಣ ಅತ್ತಿಗೆಯವರನ್ನು ನನ್ನೊಡನೆ ಕರೆದುಕೊಂಡು ಹೊರಟೆ.

ಮುಂಬೈಗೆ ಬಂದಮೇಲೆ ಅಣ್ಣ ಅತ್ತಿಗೆಯ ರನ್ನು ಮೊದಲು ಕರೆದುಕೊಂಡು ಹೋದದ್ದು ಅನಾಥಾಶ್ರಮಕ್ಕೆ. ತಾಯಿತಂದೆಯರ ಪ್ರೀತಿ ಯಿಂದ ವಂಚಿತರಾದ ಆ ಮುದ್ದುಮಕ್ಕಳನ್ನು ನೋಡುವಾಗ ಕರುಳು ಹಿಂಡಿದಂತಾಗುತ್ತಿತ್ತು. ಮಗುವನ್ನು ದತ್ತು ತೆಗೆದುಕೊಳ್ಳಲು ಅಲ್ಲಿ ಹೆಸರು ನೊಂದಾಯಿಸಲಾಯಿತು. ಅಣ್ಣ ಅತ್ತಿಗೆ ಇದಕ್ಕೆ ಖುಷಿಯಿಂದ ಒಪ್ಪಿಗೆ ಕೊಟ್ಟರು. ಜೋಡಿ ಹಕ್ಕಿಯಂತೆ ಜಾಲಿಯಾಗಿ ಯಾವ ಚಿಂತೆಯೂ ಇಲ್ಲದೆ ಅಣ್ಣ ಅತ್ತಿಗೆ ಒಂದು ತಿಂಗಳು ಇಡೀ ಮುಂಬೈಯನ್ನೆಲ್ಲ ಸುತ್ತಿದರು.

ಅಣ್ಣ ಊರಿಗೆ ಹೊರಟುನಿಂತಾಗ, ಅತ್ತಿಗೆ ಈಗ ಗರ್ಭಿಣಿಯಾಗಿದ್ದಾಳೆಂದೂ ಡಾಕ್ಟರು ಅವಳಿಗೆ ಪ್ರಯಾಣ ಮಾಡಬಾರದೆಂದು ಹೇಳಿದ್ದಾ ರೆಂದೂ, ಅದಕ್ಕೆ ಅತ್ತಿಗೆ ಡೆಲಿವರಿ ಆದಮೇಲೆಯೇ ಬರುತ್ತಾರೆ ಎಂದೂ ಅಮ್ಮನಿಗೆ ಹೇಳುವಂತೆ ತಿಳಿಸಿದೆ. ಅಣ್ಣ ಮುಸಿಮುಸಿ ನಗುತ್ತಾ ಅತ್ತಿಗೆಯ ಮುಖ ನೋಡಿದ. ಅತ್ತಿಗೆ ನಾಚಿ ತಲೆತಗ್ಗಿಸಿದಳು.

ಅಣ್ಣ ಹೋದಮೇಲೆ ಅತ್ತಿಗೆ ಒಬ್ಬಳೇ ಬೇಜಾರು ಪಡಬಹುದೆಂದು ಅವಳನ್ನು ಅಲ್ಲಿಯೇ ಇದ್ದ ಮಹಿಳಾ ಮಂಡಳದ ಸದಸ್ಯೆಯನ್ನಾಗಿ ಮಾಡಿದೆ. ಈಗ ಅತ್ತಿಗೆಯಲ್ಲಿ ಮೊದಲಿನ ಪುಕ್ಕಲು ತನ ಮಾಯವಾಗಿ ಅಲ್ಲಿ ಧೈರ್ಯ ಛಲ ದಿಟ್ಟತನ ಗಳು ನೆಲೆಸಿದ್ದವು. ಬಾಳನೊಡನೆ ಹೋರಾಡುವ ಛಲ ಧೈರ್ಯ-ಸ್ಥೈರ್ಯಗಳು ಮೂಡಿದ್ದವು. ಒಬ್ಬಳೇ ಬೊಂಬಾಯಿಯನ್ನು ಸುತ್ತಿಬರುವಷ್ಟು ಧೈರ್ಯಸ್ಥೆಯಾಗಿದ್ದಳು.

## ಬಾರ್ಸಿಲೋನಾ ಬಾಸು




ಬಾರ್ಸಿಲೋನಾ ಹೋದ ಭಾರತೀಯ ಅಧಿಕಾರಿ ಗಳಿಗೆ ಹೇರಳ ಬಿಡುವಿತ್ತು. ಆದರೂ ಪ್ರತಿಕ್ಷಣವೂ ಅವರು ಗಡಿಬಿಡಿಯಲ್ಲೇ ಇದ್ದರು. ತಮ್ಮ ಕ್ರೀಡಾ ಪಟುಗಳಿಗೆ ತಯಾರು ಮಾಡುವಲ್ಲಿ, ಕ್ರೀಡಾಂ ಗಣದಲ್ಲಿ ಅವರ ಆಟವನ್ನು ನೋಡುವಲ್ಲಿ ಅವರಿಗೆ ಆಸಕ್ತಿ ಇದ್ದಂತಿರಲಿಲ್ಲ. ಅವರ ಕಣ್ಣೆಲ್ಲ ಅಲ್ಲಿ ದೊರೆಯುವ 'ಟಿ' ಶರ್ಟ್‌ಗಳ ಮೇಲೆ ಕೇಂದ್ರೀ ಕೃತವಾಗಿತ್ತು. ಅದಕ್ಕಾಗಿ ಕೆಲ ಕೋಚ್‌ಗಳಲ್ಲಿ ಪರಸ್ಪರ ಪೈಪೋಟಿಯೇ ನಡೆದಿತ್ತಂತೆ. ಕೋಚ್ ಒಬ್ಬರಿಗೆ "ಟಿ" ಶರ್ಟ್ ದೊರೆಯದಿದ್ದುದರಿಂದ ಮೂರು ದಿನಗಳ ಕಾಲ ಅವರು ಎಬ್ಬಿಸಿದ ರಗಳೆ ಅಂತಿಂತಹುದಲ್ಲ. ಇದರಿಂದಾಗಿ ತಾನು ತರಬೇತಿ ನೀಡಿದ ಕ್ರೀಡಾ ಪಟುವಿಗೆ ಅಭ್ಯಾಸ ಮಾಡಿಸುವಲ್ಲಿ ಆತ ಅಸಡ್ಡೆ ತೋರಿದರಂತೆ.

ನಿಮ್ಮ ತಂಡದ ಆಟ ಚೆನ್ನಾಗಿರಲಿಲ್ಲ ಎಂದು ಪರಸ್ಪರ ಹೀಗಳೆದು, ಕಟಕಿಯಾಡುವ ವಿಷಯದಲ್ಲಿ ಕೆಲ ಭಾರತೀಯ ಕೋಚ್‌ಗಳು ವಿಶೇಷ ಸಾಮರ್ಥ್ಯ ಪ್ರದರ್ಶಿಸಿದರು. ಕೊನೆಗೆ ಎಲ್ಲರೂ ಕೆಂಡ ಕಾರಿದ್ದು ಹಾಕಿ ತಂಡದ ಮೇಲೆ. ಹಾಕಿ ತಂಡದವರನ್ನು ಬಾಯ್ದಣಿಯುವವರೆಗೂ ಬಯ್ದಿದ್ದೇ ಬಯ್ದಿದ್ದು. ಹಾಕಿ ಸೋಲೇ ಭಾರತೀಯ ಆಟಗಾರರ ಸೋಲಿಗೆ ಮುಖ್ಯ ಕಾರಣ ಎಂಬ ರೀತಿಯಲ್ಲಿ ವರ್ತಿಸಿದರು.

"ನಮ್ಮ ಆಟ ಚೆನ್ನಾಗಿರಲಿಲ್ಲ ನಿಜ. ಆದರೆ ಪ್ರತಿಯೊಬ್ಬರೂ ನಮ್ಮ ಗಾಯಗಳ ಮೇಲೆ ಉಪ್ಪು ಸವರುವುದು ಸರಿಯಲ್ಲ" ಎಂದು ಹಾಕಿ ಆಟಗಾರ ರೊಬ್ಬರು ನೊಂದು ನುಡಿದರು.

'ಹಾಕಿ' ಸೆಮಿಫೈನಲ್‌ಗೆ ಮುಟ್ಟಿದ್ದರೆ ಇತರ ಸ್ಪರ್ಧೆಯಲ್ಲಿ ನಮ್ಮ ಕಳಪೆತನವನ್ನು ಅಷ್ಟಾಗಿ ಯಾರೂ ಗಮನಿಸುತ್ತಿರಲಿಲ್ಲ ಎಂದು ಒಬ್ಬ ಅಧಿಕಾರಿ ಹೇಳಿದರು.

"ಆದರೆ ನಿಮ್ಮ ಸ್ವಂತ ತಂಡದವರ ಸಾಮರ್ಥ್ಯದ ಬಗ್ಗೆ ಏನು ಹೇಳುತ್ತೀರಿ?" ಎಂದು ಕೇಳಿದ ಪ್ರಶ್ನೆಗೆ

"ಓ! ನಾವು ವಿಶ್ವದರ್ಜೆಯ ಆಟಗಾರರನ್ನು ಸಂಧಿಸಿದೆವು" ಎಂದು ಬಿಂಕದಿಂದ ನುಡಿದ ತಮ್ಮಲ್ಲಿ ತರಬೇತಿ ಪಡೆದವರ ಕಳಪೆ ಆಟವನ್ನು ಹಗುರವಾದ ನಗೆಯಲ್ಲಿ ತೇಲಿಸಿದ ಕೋಚ್‌ಗಳ ಜಾಣ್ಮೆಯನ್ನು ಎಷ್ಟು ಹೊಗಳಿದರೂ ಸಾಲದು. ಕಾರಣ ಕ್ರೀಡೆಯಲ್ಲಿ ಸೋಲು–ಗೆಲುವು ಮುಖ್ಯವಲ್ಲ. ಅದರಲ್ಲಿ ಪಾಲು ಗೊಳ್ಳುವುದೇ ಮುಖ್ಯ; ನುಣುಚಿಕೊಳ್ಳಲು ಈ ಮಾತಿನ ಅನುಕೂಲ ಇರುವಾಗ, ಅದನ್ನೂ ಸೂಕ್ತ ಸಮಯಗಳಲ್ಲಿ ಬಳಸದಿದ್ದರೆ ಒಲಿಂಪಿಕ್‌ಗೆ ಹೋಗಿ ಏನು ಭಾಗ್ಯ?!

ಒಂಬತ್ತು ತಿಂಗಳು ಮುಗಿಯುತ್ತಿದ್ದಂತೆ ಅಣ್ಣ ಬಂದ. ಅವರೇ ಇಬ್ಬರೂ ಒಂದು ಒಳ್ಳೆಯ ದಿನ ಅನಾಥಾಶ್ರಮಕ್ಕೆ ಹೋಗಿ ಮಗುವನ್ನು ತಂದರು. ಒಂದಲ್ಲ ಎರಡು. ಒಂದು ಗಂಡು, ಒಂದು ಹೆಣ್ಣು. ನನ್ನ ಕಣ್ಣನ್ನು ನಾನೇ ನಂಬದಾದೆ. ನನ್ನ ಆಶ್ಚರ್ಯ ಕಂಡು ಅತ್ತಿಗೆ 'ಒಂದು ಮಗುವನ್ನೇ ತಂದರೆ ಇನ್ನೊಂದು ಮಗುವಿಗಾಗಿ ಇನ್ನೊಮ್ಮೆ ಬರಬೇಕಾ ದೀತು. ಅದಕ್ಕೆ ಎರಡನ್ನೂ ತಂದೆವು' ಎಂದು ಸಂತಸದಿಂದ ನಕ್ಕಳು. ಅತ್ತಿಗೆ ಸಂತೋಷದ ಕಡಲಾಗಿದ್ದಳು.

ಕೋರ್ಟಿನಲ್ಲಿ ಮಕ್ಕಳನ್ನು ತಮ್ಮದಾಗಿಸಿ ಕೊಂಡು, ಪ್ರಪಂಚವನ್ನೇ ಗೆದ್ದಂತೆ ಅಣ್ಣ ಅತ್ತಿಗೆ ಹೊರಟುನಿಂತರು. ಹೋಗುವಾಗ ಅತ್ತಿಗೆ ಕೃತಜ್ಞತೆಯ ಭಾವದಿಂದ, ಕಂಬನಿ ತುಂಬಿದ ಕಣ್ಣುಗಳಿಂದ ನನ್ನನ್ನು ನೋಡುತ್ತ ಅಂದಳು. 'ಸುನೀ, ನೀನೂ ಸುಜೀ ಇಬ್ಬರೂ ನನಗೆ ನಾದಿನಿಯರಲ್ಲ, ದೇವರಂತೆ, ಇಬ್ಬರೂ ಕೂಡಿ ಮುಳುಗುತ್ತಿದ್ದ ನನ್ನ ಬಾಳಿಗೆ ಒಂದು ದಾರಿಯನ್ನು ತೋರಿಸಿದಿರಿ. ಕತ್ತಲಾದ ನನ್ನ ಬಾಳಿಗೆ ಬೆಳಕನ್ನು ಕೊಟ್ಟಿರಿ. ನಿಮ್ಮನ್ನು ನಾನೆಂದೂ ಮರೆಯಲಾರೆ. ಎಷ್ಟೋ ಮಂದಿ ನಾದಿನಿಯರು ಅತ್ತಿಗೆಯರ ಬಗ್ಗೆ ಇಲ್ಲಸಲ್ಲದ್ದನ್ನೆಲ್ಲ ಹೇಳಿ ಜಗಳ ತಂದು ಖುಷಿಪಡುವವರೇ ಹೆಚ್ಚಾಗಿರುವಾಗ, ನೀವಿಬ್ಬರೂ ನನ್ನನ್ನು ಅದೆಷ್ಟು ಪ್ರೀತಿ ಗೌರವಗಳಿಂದ ನೋಡಿ ಕೊಂಡಿರಿ. ನಿಮ್ಮಂತಹ ನಾದಿನಿಯರು ಎಲ್ಲರ ಮನೆಯಲ್ಲಿಯೂ ಇದ್ದರೆ ಮನೆ ನಂದಗೋಕುಲ ವಾಗಬಹುದು. ನಿಮ್ಮ ಋಣ ನಾನೆಂದಿಗೂ ತೀರಿಸಲಾರೆ" ಎನ್ನುವುದೇ. "ನನ್ನ ತವರು ತಂಪಾಗಿರಲಿ ಎನ್ನುವದನ್ನೇ ನನ್ನ ಹಾರೈಕೆ" ಎಂದು ಮನಸ್ಸಿನಲ್ಲಿಯೇ ಅಂದುಕೊಂಡೆ.

ಮತ್ತೆ ಆಫೀಸು, ಮನೆ, ಮಕ್ಕಳು ಎನ್ನುವ ದರಲ್ಲಿ ತಿಂಗಳು ಕಳೆಯಿತು. ಮತ್ತೆ ಮತ್ತೆ ಸುಜೀಯ ಪತ್ರ.

"ಅಮ್ಮನಿಗೆ ಈಗ ಮೊಮ್ಮಕ್ಕಳನ್ನು ಮುದ್ದಾಡುವದೇ ಕೆಲಸ. ಅವರೊಡನೆ ತಾನೂ ಒಂದು ಮಗುವಾಗಿ ಬಿಟ್ಟಿದ್ದಾಳೆ. ರಘು ಥೇಟ್ ಅಪ್ಪನಂತೆ ಹಾಗೂ ರಶ್ಮಿ ತನ್ನಂತೆ ಆಗಿದ್ದಾಳೆ ಎಂದು ಯಾವಾಗಲೂ ಹೇಳುತ್ತಿರುತ್ತಾಳೆ. ಅಮ್ಮನ ಮಾತು ಕೇಳಿ ಅಣ್ಣ ಅತ್ತಿಗೆಯ ಮುಖ ನೋಡಿ ನಗುತ್ತಾನೆ. ಅತ್ತಿಗೆ ನನ್ನ ಮುಖ ನೋಡಿ ನಗು ತ್ತಿರುತ್ತಾಳೆ. ಹೌದಲ್ಲವಾ ಅಕ್ಕಾ, ರಘು ಅಪ್ಪ ನಂತೆ ರಶ್ಮಿ ಅಮ್ಮನಂತೆ?"

'ತುಂಟ ಸುಜೀ ನೀನೂ ಜೋರಾಗಿದ್ದೀಯಾ' ಅನ್ನಿಸಿ ನಗುಬಂತು. ನಗುನಗುತ್ತಿರುವ ಅಣ್ಣ, ಅತ್ತಿಗೆ ಸುಜಿ, ಅಮ್ಮ ಕಣ್ಮುಂದೆ ಬಂದರು. ಮನಸ್ಸು ತವರಿನತ್ತ ಹಾರಿಹೋಗಿತ್ತು. ಇವರು ಬಂದು ಕರೆದಾಗಲೇ ವಾಸ್ತವ ಲೋಕಕ್ಕೆ ಮರಳಿದೆ. ●




## -'ಪಾಕ ಪ್ರವೀಣರು

ಸರ್ಕಾರಿ ಕೆಲಸದಲ್ಲಿರುವ ಸ್ಫುರದ್ರೂಪಿ ಹುಡುಗನೊಂದಿಗೆ ನನ್ನ ಮದುವೆ ನಿಶ್ಚಯವಾದಾಗ ತುಂಬಾ ಸಂತೋಷವಾಯಿತು. ಆದರೆ ಅವರು ಸ್ವಯಂ ಪಾಕ ಮಾಡಿಕೊಳ್ಳುತ್ತಾರೆ, "ಪಾಕಪ್ರವೀಣರು" ಎಂದು ಗೊತ್ತಾದಾಗ ಸ್ವಲ್ಪ ಭಯವಾಯಿತು. ಏಕೆಂದರೆ "ಅಡಿಗೆ ಬಲ್ಲವನ ಹೆಂಡತಿಯಾಗಬೇಡ" ಅಂತಾರೆ. ನಾನು ಸಹ ಚೆನ್ನಾಗಿ ಅಡಿಗೆ ಮಾಡುತ್ತಿದ್ದೆ. ಆದರೂ ಅಡಿಗೆ ಬಲ್ಲವರನ್ನು ತೃಪ್ತಿಗೊಳಿಸೋದು ಕಷ್ಟ ಅಂತ ಗೊತ್ತಿತ್ತು. ಅಂತೂ ಹೆದರುತ್ತಾ ಗಂಡನ ಮನೆಗೆ ಬಂದೆ. ನಾವಿದ್ದದ್ದು ಇಬ್ಬರೇ. ಹೊಸದರಲ್ಲಿ ಸುಮ್ಮನೆ ಊಟ ಮಾಡುತ್ತಿದ್ದರು. ಕೆಲ ದಿನಗಳ ನಂತರ ಒಂದೊಂದೇ ಪ್ರಾರಂಭ ಮಾಡಿದರು. ಎಷ್ಟು ಚೆನ್ನಾಗಿ ಮಾಡಿದ್ರೂ ಸಹ 'ಹಾಗಾಗಬೇಕಿತ್ತು' 'ಹೀಗೆ ಮಾಡಬೇಕಿತ್ತು' ಅನ್ನುತ್ತಿದ್ರು. "ಟೀ" ಅಂತು ಕುದಿಸಿಲ್ಲ. ಸಕ್ಕರೆ ಕಮ್ಮಿ "ಥೂ" ಒಂದೊಂದು ಸಾರಿ ಬೇಜಾರಾಗಿ "ನೀವೇ ಮಾಡ್ರಿ ಗೊತ್ತಾಗುತ್ತೆ. ಹೇಗೆ ಮಾಡ್ತೀರಾ ಅಂತ" ಅನ್ನಬೇಕು ಅನಿಸುತ್ತಿತ್ತು. ಆದರೆ ಹೆದರಿ ಮನಸ್ಸಲ್ಲೇ "ಇವರು ಭಾರಿ ಮಾಡ್ತಾರೆ" ಅಂತ ಬೈದು ಕೊಳ್ಳುತ್ತಿದ್ದೆ.

ಹೀಗಿರುವಾಗ ಒಂದು ಸಾರಿ ಅಂತಹ ಅವಕಾಶ ಒದಗಿ ಬಂತು. ಅಂದು ನಾನು ಮೂರು ದಿನಗಳ ರಜ ತೆಗೆದುಕೊಂಡೆ. ಬೆಳಿಗ್ಗೆ ಎದ್ದವರೇ ಏನು ತಿಂಡಿ ಮಾಡಲಿ ಅಂದ್ರು. ಪಾಪ ಅವರಿಗೂ ಮಾಡಲು ಕಷ್ಟವಾಗಬಾರದೆಂದು "ಉಪ್ಪಿಟ್ಟು ಮಾಡಿ ಸುಲಭ" ಅಂದೆ. ನನಗೆ ಉಪ್ಪಿಟ್ಟೆಂದರೆ ಅಲರ್ಜಿ, ಬಿಸಿ ಇದ್ದಾಗ ಸ್ವಲ್ಪ ತಿನ್ನುತ್ತಿದ್ದೆ ಅಷ್ಟೆ. ಆರಿದ್ದಂತೂ ಸೇರುತ್ತಲೇ ಇರಲಿಲ್ಲ. ಸರಿ ತಯಾರಿ ಪ್ರಾರಂಭಿಸಿದರು. ನೀರುಳ್ಳಿ, ಹಸಿಮೆಣಸು, ತಾವೇ ಹೆಚ್ಚಿಕೊಂಡರು. ರವೆ ಹುರಿದು ಒಗ್ಗರಣೆ ಮಾಡಿ ಉಪ್ಪಿಟ್ಟು ತಯಾರಾಯಿತು. ಜೊತೆಗೆ "ಟೀ" ಒಂದು ತಟ್ಟೆಯಲ್ಲಿ ಉಪ್ಪಿಟ್ಟು ಹಾಕಿ ತಂದರು. "ಅಷ್ಟೊಂದು ಬೇಡ. ನನಗೆ ಉಪ್ಪಿಟ್ಟು ಸೇರಲ್ಲ" ಅಂದೆ. "ಇದು ನಾನು ಮಾಡಿರೋದು ಅಮ್ಮೋರೆ ತಿಂದು ನೋಡ್ರಿ ಹೇಗಿದೆಂತ" ಅಂದ್ರು "ಯಾರು ಮಾಡಿದ್ದಾದ್ರೂ ಅಷ್ಟೆ ನನಗೆ ಸ್ವಲ್ಪ ಸಾಕು" ಅಂತ ಪ್ಲೇಟ್ ತಗೊಂಡು ಸ್ವಲ್ಪ ಉಪ್ಪಿಟ್ಟು ಬಾಯಿಗಿಟ್ಟೆ. "ಓಹ್"! ಅದೆಂತಹ ರುಚಿ. ಉಪ್ಪಿಟ್ಟು ಚೆನ್ನಾಗಿ ಇರುತ್ತೆ ಅಂತ ಆಗಲೇ ಅನಿಸಿದ್ದು. ಉಪ್ಪಿಟ್ಟು ಸೇರಲ್ಲ ಅನ್ನೋದೆ ಮರೆತು ಹೋಯ್ತು. ಮತ್ತೊಮ್ಮೆ ಹಾಕಿಸಿಕೊಂಡು ತಿಂದೆ. ಇಷ್ಟು ಚೆನ್ನಾಗಿ ಇವರು ಮಾಡುತ್ತಾರೆಂದು



ಶ್ರೀ ಎಂ. ಸತ್ಯನಾರಾಯಣ ರಾವ

ಕನಸಲ್ಲೂ ನೆನಸಿರಲಿಲ್ಲ. ಏನ್ ಮಾಡಿದ್ದನ್ನು ಬಡಿಯುತ್ತಾರೆ ಅಂದುಕೊಂಡಿದ್ದೆ. ತಿಂಡಿಯ ನಂತರ "ಟೀ" ಕೊಟ್ರು. ಅದು ಅಷ್ಟೆ ಅದ್ಭುತ ಸ್ವಾದವುಳ್ಳದ್ದಾಗಿತ್ತು. ಅವರು ಟೀ ಕುಡಿಯುವಾಗ ಲೆಲ್ಲಾ "ಸಕ್ಕರೆ ಕಡಿಮೆ ಹಾಕ್ತೀಯ, ಚೆನ್ನಾಗಿ ಕುದಿಸಿಲ್ಲ" ಅನ್ನುತ್ತಿದ್ದರು. ಅವರು ಮಾಡಿದ "ಟೀ" ಕುಡಿದಾಗ ನನ್ನ ತಪ್ಪಿನ ಅರಿವಾಯ್ತು. ಅಂದಿನಿಂದ ಅವರಿಂದ ಅನೇಕ ಅಡಿಗೆ, ತಿಂಡಿಗಳನ್ನು ಕಲಿತೆ ಎನ್ನಲು ನನಗೆ ಖಂಡಿತಾ ನಾಚಿಕೆ ಇಲ್ಲ, ಹೆಮ್ಮೆ ಆಗುತ್ತೆ. ಅಡಿಗೆ ಮನೆಯನ್ನೂ ಸಹ ಸ್ವಚ್ಛವಾಗಿಟ್ಟಿರುತ್ತಾರೆ. ನೆಲ ಒರೆಸುವ ಬಟ್ಟೆ ಮಾತ್ರ, ಒರೆಸಿ ಒರೆಸಿ ಒಂದು ಮೂಲೆಯಲ್ಲಿ ತಳ್ಳಿರುತ್ತಾರೆ. 4ನೇ ದಿನ ನಾನು ಅದನ್ನು ಎಸೆದು ಬೇರೆ ಬಟ್ಟೆ ಒರೆಸಲು ಇಡುತ್ತೇನೆ. ಇಂದಿಗೂ ಸಹ ಅವರಷ್ಟು ಚೆನ್ನಾಗಿ ಉಪ್ಪಿಟ್ಟು ಮಾಡಲು ನನಗೆ ಎಷ್ಟೇ ಪ್ರಯತ್ನಿಸಿದರೂ ಬರುತ್ತಿಲ್ಲ. ನನ್ನ ಮಗ "ಅಮ್ಮನಿಗಿಂತ ಅಪ್ಪ ಉಪ್ಪಿಟ್ಟು ಚೆನ್ನಾಗಿ ಮಾಡುತ್ತಾರೆ" ಅಂದಾಗ ನಾಚಿಕೆ ಆಗತ್ತೆ.

ಎಷ್ಟು ರುಚಿಯಾಗಿ ಮಾಡಿದರೂ ಹಾಗಿದೆ, ಹೀಗಿದೆ ಅಂದಾಗ "ಥೂ ! ಅಡಿಗೆ ಬಲ್ಲವನ ಹೆಂಡತಿ ಆಗಬಾರದು" ಎನಿಸುತ್ತದೆ. ಆದರೆ ಆ ಮೂರು ದಿನಗಳಲ್ಲೂ ಸಹ "ರಸಗವಳ" ಸವಿಯುವಾಗ ನಾನೆಂತಹ ಅದೃಷ್ಟವಂತೆ, ಎಂತಹ ನಳ ಮಹಾರಾಜ ನನ್ನ ಗಂಡ ಎನಿಸುತ್ತದೆ. ಮತ್ತು ತಿಂಗಳಿಗೆ ಎರಡು ಬಾರಿ ಆದರೂ ರಜಾ ತಗೋಬೇಕು, ಇವರ ಕೈ ಅಡಿಗೆ ಉಣ್ಣಲು ಅಂದು ಕೊಳ್ಳುತ್ತೇನೆ. ನನ್ನ ಪಾಲಿಗಂತೂ ಇವರೊಬ್ಬ "ನಳ" ಯಾ "ಭೀಮ" ಅಂತ ಹೆಮ್ಮೆಯಿಂದ ಹೊಗಳಿಕೊಳ್ಳುತ್ತೇನೆ. ನೋಡಿ ಎಂತಹ ಅದೃಷ್ಟ ವಂತೆ ನಾನು.

-ಭಾಗ್ಯ ಎಸ್ ರಾವ್
ಆನೇಕಲ್



## ಕಹಿ ಕಹಿ ಹಲ್ವ

ನನಗೆ ಮದುವೆಯಾದ ಹೊಸತು. ತಂದೆ ಮನೆಯಲ್ಲಿ ಅಡುಗೆ ಮನೆಗೆ ತಲೆ ಹಾಕಿರಲಿಲ್ಲ. ಹೈಸ್ಕೂಲು ವಿದ್ಯಾಭ್ಯಾಸ ಮುಗಿದ ಕೂಡಲೇ ಪತಿರಾಯರು ಕರಗ್ರಹಣ ಮಾಡಿದುದರಿಂದ ಆರಂಭದಲ್ಲಿ ಸ್ವಂತ ಮನೆಯ ಅಢಿಗೆ ಎಡವಟ್ಟು ಅನಿಸಿತ್ತು. ಪತಿರಾಯರಿಗೆ ಮುಂಗೋಪ. "ಇದು ಬೇಯಲಿಲ್ಲ. ಇದು ಸೀತು ಹೋಗಿದೆ" ಎಂದು ಊಟ ಮಾಡದೆ ಹೋಗುತ್ತಿದ್ದರು. ಒಂದೊಂದು ಸಾರಿ "ನಿನ್ನದು ನೋಣಪಾಕ, ನಳಪಾಕ ಅಲ್ಲ" ಎನ್ನುತ್ತಿದ್ದರು.

ಒಂದು ದಿನ ಬೆಂಗಳೂರಿನಲ್ಲಿರುವ ಅವರ ಬಾಲ್ಯ ಸ್ನೇಹಿತರು ಆಗ ತಾನೇ ಮದುವೆಯಾದ ಅವರ ಹೆಂಡತಿಯೊಂದಿಗೆ ಬರಲಿದ್ದಾರೆ ಎನ್ನುವ ಹರ್ಷದಾಯಕ ಸುದ್ದಿಯೊಂದಿಗೆ ನನ್ನವರು ಬಂದಾಗ ಎದೆಯಲ್ಲಿ ಅವಲಕ್ಕಿ ಕುಟ್ಟಲಾರಂಭಿಸಿದ್ದು ನನಗೇ. ನಿಭಾಯಿಸೋದು ಹೇಗೆ ಎಂಬುದಷ್ಟೇ ನನ್ನ ಚಿಂತೆ. "ಗೋಪೂಗೆ ನೇಂದ್ರ ಬಾಳೆ ಹಣ್ಣಿನ ಹಲ್ವ ಎಂದರೆ ತುಂಬ ಪ್ರೀತಿ.

ಅನ್ನೇ ಮಾಡಬೇಕು'' ಎನ್ನುತ್ತ ಸಕ್ಕರೆ, ಬಾಳೆಹಣ್ಣು, ತುಪ್ಪ ತಂದೇ ಬಿಟ್ಟರು. ಹೆದರಿ ನಡುಗಿದೆ ನಾನು. ತ್ರಿಳಿಯೋದಿಲ್ಲವೆಂದರೆ ಕೆಂಡಾಮಂಡಲವಾಗುತ್ತಾರೆ.

ನನ್ನ ಆತ್ಮಸಾಕ್ಷಿಗೆ ವಿರುದ್ಧವಾಗಿ ನಾನು ಹೊಟ್ಟೆನೋವಿನ ಸೋಗು ತೊಟ್ಟು ಬೆನ್ನು ಮೇಲಾಗಿ ಮಲಗಿಬಿಟ್ಟೆ. ಭಾರೀ ಸಮಜಾಯಿಷಿ ಮಾಡಿದರು. "ಹುಳದ ಉಪದ್ರ ಇದ್ದೀತು. ಮಜ್ಜಿಗೆಯಲ್ಲಿ ಇಂಗು ಕದಡಿ ಕುಡಿ'' ಎಂದರು. ಜೀರಿಗೆ ಕಷಾಯ ಕುಡಿ ಎಂದರು. ಒಂದಕ್ಕೂ ಉತ್ತರಿಸದೆ 'ಹಾಂ, ಹೂಂ' ಎಂದು ನರಳುತ್ತ ಮಲಗಿದೆ.

ಅದರಿಂದ ಅವರಿಗೆ ಬಂತು ಕೋಪ. "ನನ್ನಿಂದ ಏನು ಅಡಿಗೆ ಮಾಡಲು ಸಾಧ್ಯವಿಲ್ಲ ಅಂದು ಕೊಂಡೆಯಾ? ನೀನು ಸಾಯುವ ವರೆಗೂ ಹಾಸಿಗೆ ಹಿಡಿದೇ ಬಿದ್ದಿರು'' ಎಂದು ಶಪಿಸಿದರು. ಹಲ್ವ ತಯಾರಿಸಲು ವಲಲ ಭೀಮನಾಗಿ ತಕ್ಷಣ ಕಾರ್ಯ ಸನ್ನದ್ಧರಾದರು. ಮಲಗಿದಲ್ಲೇ ಅರೆಗಣ್ಣು ತೆರೆದು ಅವರ ಕಾರ್ಬಾರೆಲ್ಲಾ ನೋಡುತ್ತಾ ಇದ್ದೆ.

ದಪ್ಪ ಪಾತ್ರೆ ತಂದರು. ಬಾಳೆಹಣ್ಣುಗಳನ್ನು ಸುಲಿದು ಅದಕ್ಕೆ ಹಾಕಿದರು. ಯಾವಾಗಲೋ ನೇಂದ್ರ



ಆರ್. ಶಾಸ್ತ್ರಿ

ಬಾಳೆಹಣ್ಣಿನ ಹಲ್ವ ಮಾಡುವುದನ್ನು ಪತ್ರಿಕೆಗಳಲ್ಲಿ ಓದಿದ್ದರೋ ಅಲ್ಲ ನಮ್ಮತ್ತೆ ಮಾಡುವುದನ್ನು ಕಂಡಿದ್ದರೋ, ಅಂತೂ ಛಲದಲ್ಲಿ ಇದ್ದ ಸಕ್ಕರೆಯನ್ನೆಲ್ಲ ಒಮ್ಮೆಲೇ ಹಾಕಿ ಒಲೆಯ ಮೇಲಿಟ್ಟು ಧಗಧಗ ಎಂದು ಬೆಂಕಿ ಹಾಕಿದರು. ತುಪ್ಪ ನೀರಾಗಲೆಂದು ಬಾಟ್ಲಿಯನ್ನು ಒಲೆಕಟ್ಟೆಯಲ್ಲಿಟ್ಟರು. ಚೆನ್ನಾಗಿ ಕಾದಿದ್ದ ಬಾಟ್ಲಿಯನ್ನು ಎತ್ತಿಕೊಂಡು ಬಿಸಿ ತಾಳಲಾಗದೆ ಹಾಹಾ ಎನ್ನುತ್ತಾ ಕೈ ಬಿಟ್ಟು ಅರ್ಧಾಂಶ ತುಪ್ಪ ಒಲೆಗೆ, ಉಳಿದುದು ನೆಲಕ್ಕೆ ಬಿತ್ತು. ಬೆವರೊರೆಸಿಕೊಳ್ಳುತ್ತಾ ಮೂಗಿನಲ್ಲಿದ್ದ ನೀರನ್ನು ಮೇಲೆಳೆದುಕೊಳ್ಳುತ್ತಾ ಅವರು ನೆಲಕ್ಕೆ ಬಿದ್ದುದನ್ನು ಚಮಚದಲ್ಲಿ ತೆಗೆಯುವಾಗ ಒಲೆಗೆ ತುಪ್ಪ ಬಿದ್ದುದರಿಂದ ಧಗಧಗನೆ ಬೆಂಕಿ ಮೇಲೇರಿ ಪಾತ್ರೆಯಲ್ಲಿದ್ದ ಬಾಳೆಹಣ್ಣೆಲ್ಲ ಸುಟ್ಟು ಕರಕಲಾಯಿತು.

ಆದರೂ ಛಲ ಬಿಡದ ತ್ರಿವಿಕ್ರಮನಂತೆ ಸೌಟು ಹಿಡಿದು ಸರ್ವಶಕ್ತಿಯನ್ನು ಉಪಯೋಗಿಸಿ ಬಾಳೆ ಹಣ್ಣುಗಳನ್ನು ತಿರುವುವುದಕ್ಕೆ ಆರಂಭಿಸಿ ನನ್ನ ಮೇಲಿನ ಸಿಟ್ಟನ್ನು ಸೌಟಿನ ಮೇಲೆ ತೋರಿಸಿದರು. ಕೊರೊಂ ಕೊರೊಂ ಎಂದು ಪಾತ್ರೆ ಮೊರೆಯಿಡುವಾಗ ಸೌಟು ಮುರಿದೇ ಹೋಯಿತು. ಮನೆಯಲ್ಲಿ ಬೇರೆ ಸೌಟು ಇರಲಿಲ್ಲ. ಹುಡುಕುವ ಅವಸರದಲ್ಲಿದ್ದಾಗ ಒಲೆಯಲ್ಲಿದ್ದುದು ಸುಟ್ಟು ಮನೆಯಿಡೀ ವಾಸನೆ ಬರಲಾರಂಭಿಸಿತು.

'ರೀ ಕೆಳಗಿಳಿಸಿ'' ಎಂದು ಮಲಗಿದಲ್ಲಿಂದಲೇ ಕೂಗಿದೆ. "ನೀನು ಅಲ್ಲೇ ಬಿದ್ದುಕೋ. ತಿನ್ನಲಿಕ್ಕಾಗುವಾಗ ಬಾ'' ಎಂದು ಹಂಗಿಸುತ್ತಾ ಒಲೆಯಿಂದ ಇಳಿಸಿ ಒಂದು ತಟ್ಟೆಗೆ ಸುರುವಿದರು. ಈ ವಿಚಿತ್ರ ಹಲ್ವ ತಣ್ಣಗಾದಾಗ ಗ್ರಾಮೋಫೋನ್ ತಟ್ಟೆಯಂತೆ ಕಪ್ಪಾಗಿ ಕಾಣುತ್ತಿತ್ತು. ಏನು ಮಾಡಿದರೂ ಕೀಳಲು ಬರಲಿಲ್ಲ. ಬಲವಂತವಾಗಿ ಕಿತ್ತಾಗ ತಟ್ಟೆ ಒಂದು ಬದಿಯಲ್ಲಿ ಬಿರುಕು ಬಿಟ್ಟಿತು. ಬಾಯಿಗೆ ಹಾಕಿದರೆ ಕಾಸರಕನ ಕಾಯಿಗಿಂತಲೂ ಕಹಿ!

ನನಗೆ ಅವರ ಮೇಲೆ ಎಷ್ಟು ಮರುಕ ಹುಟ್ಟಿತೆಂದರೆ ಸ್ವಾಭಿಮಾನ ಬಿಟ್ಟು ಎದ್ದು ಬಂದು ಅವರ ಮೈ ಸವರಿ, "ಹೋಗಲೀಂದ್ರೆ. ನನಗೆ ಕ್ಷೀರ ಮಾಡಲಿಕ್ಕೆ ಸರಿಯಾಗಿ ಗೊತ್ತಿದೆ. ಅದನ್ನೇ ಮಾಡೋಣ'' ಎಂದೆ. ಒಪ್ಪಿದರು. ಆ ಮೇಲೆ ಅವರು ಯಾವ ಅಡಿಗೆ ಮಾಡಿದ್ದೂ ನನಗೆ ಗೊತ್ತಿಲ್ಲ.

—ಶಾರದಾ ಆರ್. ಶಾಸ್ತ್ರಿ



## ಪ್ರಕಾಶಗೊಂಡ ಕೈ ಚಳಕ

ನಾನು ಉದ್ಯೋಗಸ್ಥೆಯಾದುದರಿಂದ ಮದುವೆಯಾಗುವವರೆಗೂ ಅಡುಗೆ ಮನೆಯನ್ನೇ 'ಹೊಕ್ಕಿರಲಿಲ್ಲ'! ರವಿವಾರವನ್ನು ಆರಾಮವಾಗಿ ಕಳೆಯುತ್ತಿದ್ದೆ. ಅಮ್ಮ ಇದಕ್ಕೆ ಆಕ್ಷೇಪಿಸಿದರೂ – "ಅಡುಗೆ ತಿಳಿದವರನ್ನೇ ಹುಡುಕಿ ಮದುವೆ ಮಾಡಿ'' ಎಂದು ಮಾತು ಹಾರಿಸುತ್ತಿದ್ದೆ.

ನನಗೆ ಮದುವೆಯಾಗಿ ಪತಿಗೃಹವನ್ನು ಪ್ರವೇಶಿಸಿದಾಗ ಅಡಿಗೆಯ ಕುರಿತಾಗಿಯೇ ದಿಗಿಲು ಉಂಟಾದರೂ ಸುದೈವದಿಂದ ಅತ್ತೆಯೇ ಅಡಿಗೆ ಮನೆಯ 'ಅಧಿಪತಿ' ಎನಿಸಿದ್ದರು.

ಅದೊಂದು ದಿನ ಮಧ್ಯಾಹ್ನದ ಹೊತ್ತು. ಮನೆಯಲ್ಲಿ ನಾವಿಬ್ಬರೇ. ತಿಳಿಸಾರು ಮಾತ್ರ ಮಾಡಿದ್ದೆ. ಆ ಸಮಯ ನನ್ನ ಅಕ್ಕಂದಿರೆಲ್ಲಾ ಪತಿ ಮಕ್ಕಳ ಜೊತೆಗೂಡಿ ಬಂದಾಗ ಅಪಾರ ಆನಂದ. ಆದರೆ.... ಅಡಿಗೆಯ ಬಗ್ಗೆ ಯೋಚಿಸಿದಾಗ ಮುಖ ಕರಾಳವಾಯಿತೆನಗೆ. ಅಪರೂಪಕ್ಕೆ ಬಂದವರಿಗೆ ತಿಳಿಸಾರು ನಾಚಿಕೆಗೇಡು!.... ಹಾಗೆಂದು ಕೈ ಕೈ ಹಿಸುಕಿಕೊಂಡು ದಿಕ್ಕೆಟ್ಟವಳಂತೇ ಕಣ್ಣಲ್ಲಿ ನೀರು ತುಂಬಿ ನಿಂತ ನನ್ನನ್ನು ಕಂಡು ನನ್ನವರಿಗೆ ನಗು! "ನೀನೇನೂ ಹೆದರ್ಬೇಡ! ನಾ ಕೇಳಿದ್ದನ್ನೆಲ್ಲಾ ಒದಗಿಸಿದರೆ ಆಯ್ತು. ನೀ ನೋಡ್ತಾ ಇರು!'' ಎಂದರು. ಮಸಾಲೆ ವಸ್ತುಗಳ ಡಬ್ಬಗಳನ್ನೆಲ್ಲಾ ಅವರ ಮುಂದೆ ಇಟ್ಟೆ. ಅವನ್ನೆಲ್ಲಾ ಸುತ್ತಲಿಟ್ಟು, ಪಾದರಸದಂತೇ ಓಡಾಡುತ್ತಾ ಅವರು ಅಡಿಗೆ ಮಾಡುತ್ತಿರುವುದನ್ನು ಜಾದೂ ನೋಡುವಂತೆ ದಿಟ್ಟಿಸುತ್ತಿದ್ದೆ.

"ನಿಮಗೆ ಅಡಿಗೆ ಮಾಡಲು ಬರ್ತಿದೆಯಾ?'' ಎಂದು ಅಚ್ಚರಿಯಿಂದ ಪ್ರಶ್ನಿಸಿದಾಗ "ನೀನು ಮಾಡುವುದು ನೋಡಿ ಅಷ್ಟಿಷ್ಟು ಕಲಿತಿದ್ದೇನೆ'' ಎಂದು



ಈಶ್ವರಚಂದ್ರ ರಾವ್

ನಗುತ್ತಾ ನುಡಿದು ನನ್ನ ಮುಖ ಉಬ್ಬಿಸಿದರು.

ನನ್ನವರು ಮಾಡಿಟ್ಟ ಅಡಿಗೆಯನ್ನು ಮೂಕ ವಿಸ್ಮಿತಳಾಗಿ ನೋಡಿದೆ. ಬಿಸಿಬೇಳೆ ಭಾತ್, ಮೊಸರನ್ನ, ವೆಜಿಟೇಬಲ್ ಪಲಾವ್... ಇವೆಲ್ಲಾ ಪಾತ್ರೆಯಲ್ಲಿ ಹಬೆಯಾಡುತ್ತಾ ಲಕಲಕ ಹೊಳೆಯುತ್ತಿದ್ದವು. ಊಟ ಮಾಡುತ್ತಿದ್ದಾಗಲಂತೂ ಎಲ್ಲರೂ ನನ್ನನ್ನು (!) ಹೊಗಳಿದ್ದೇ ಹೊಗಳಿದ್ದು. ಅಂದಿನ ಉದ್ದಿನಬೇಳೆಯ ಚಟ್ನಿಯಂತೂ ಈಗಲೂ ಅವರೆಲ್ಲರ ಬಾಯಲ್ಲಿ ನೀರೂರಿಸುತ್ತಿದೆಯಂತೆ. ತಮಗೆ ಅಡಿಗೆ ಗೊತ್ತಿರುವ ವಿಷಯವನ್ನು ಅವರು ಮರೆಮಾಚಿದರೂ ಎಲ್ಲರಿಗೂ ಪ್ರಕಾಶಗೊಳ್ಳುವ ಸಂದರ್ಭ ಒದಗಿತ್ತು.

"ನನಗೆ ಅಡಿಗೆ ತಿಳಿದಿದೆ ಎಂದರೆ 'ಪರಮನೆಂಟಾಗಿ ಸೌಟನ್ನು ನನ್ನ ಕೈಗೆ ಕೊಡ್ತೀ ಅಂತ ಹೇಳಿರಲಿಲ್ಲ'' ಎಂದು ಮತ್ತೆ ಗುಟ್ಟಾಗಿ ನುಡಿದರು. (ನನಗೆ ಅಡಿಗೆ ತಿಳಿದಿಲ್ಲವೆಂದು ನನ್ನಮ್ಮ ಹೇಳಿದ್ದರಂತೆ).

ಈಗಲೂ ವಿಶೇಷ ಅತಿಥಿಗಳು ಊಟಕ್ಕೆ ಆಗಮಿಸಿದರೆ ಆ ದಿನದ ಅಡುಗೆಮನೆಯ ಚಾರ್ಜ್ ಇವರಿಗೆ ವಹಿಸಿಕೊಟ್ಟು ನಾನು ಪರಿಚಾರಕಿಯಾಗಿ ನಿಲ್ಲುತ್ತೇನೆನ್ನಲು ನನಗೇನೂ ಸಂಕೋಚವಿಲ್ಲ. ಆದರೆ ಇವರು ಅಡಿಗೆ ಮುಗಿಸಿ ಹೊರ ಹೋದ ಮೇಲೆ ಡಬ್ಬಗಳನ್ನೆಲ್ಲಾ ಸ್ವಸ್ಥಾನದಲ್ಲಿಟ್ಟು ಒಲೆ ನೆಲ ಶುಚಿಗೊಳಿಸುವಾಗ ಮಾತ್ರ ನನಗೆ ಹಣೆ ತುಂಬಾ ಬೆವರು!

ಉಪ್ಪಿನ ಕಾಯಿಯಿಂದ ಹಿಡಿದು ಪ್ರತಿಯೊಂದು ಅಡಿಗೆ, ತಿಂಡಿಗಳನ್ನು ಕರತಲಾಮಲಕ ಮಾಡಿಕೊಂಡಿದ್ದ ನನ್ನವರ ಮೇಲೆ ನನಗೆ ವಿಶೇಷ ಅಭಿಮಾನ! ಈಗ ನನ್ನವರಿಂದ ರುಚಿಯಾದ ಅಡಿಗೆ ಕಲಿತಿದ್ದೇನೆ.

ಅಂದ ಹಾಗೆ ನನ್ನವರ 'ಕೈರುಚಿ' ನೋಡಲು ನೀವೂ ಬರ್ತೀರಾ? ದಯವಿಟ್ಟು ವಿಷಯ ಗುಟ್ಟಾಗಿರಲಿ!

ಅನಸೂಯ ಈಶ್ವರಚಂದ್ರ

ಸಾಲೆತ್ತೂರು



## ಮರೆಯದ ಯುಗಾದಿ

"ಯುಗ ಯುಗಾದಿ ಕಳೆದರೂ ಯುಗಾದಿ ಮರಳಿ ಬರುತಿದೆ'' ಎಂಬ ಕವಿತೆಯಂತೆಯೇ ಅಂದೂ

ಸಹ ವರ್ಷಾವಧಿಯ ಯುಗಾದಿಯ ಹಬ್ಬ. ನಾವು ಸಂಪ್ರದಾಯಸ್ಥ ಬ್ರಾಹ್ಮಣ ಕುಟುಂಬದವರಾದ್ದರಿಂದ ನಾನು ಸೇರಿದ ಮನೆಯಲ್ಲಿಯೂ ಇವೆಲ್ಲಾ ನಡೆಸುವುದರಿಂದ, ಹಬ್ಬ, ಹುಣ್ಣಿಮೆ, ಪೂಜೆ ಪುರಸ್ಕಾರ ಮಡಿ ಎಲ್ಲವನ್ನೂ ಇನ್ನೂ ಆಚರಣೆ ಮಾಡಿಕೊಂಡು ಬಂದಿದ್ದೇವೆ.

ಹಬ್ಬದ ದಿನವೇ ನನ್ನ ತಿಂಗಳ ರಜಾ ದಿನವೂ ಪ್ರಾರಂಭವಾದ್ದರಿಂದ ಮನೆಯಲ್ಲಿ ಕೇಳಬೇಕೆ? ಸರಿ, ಬೇರೆ ಹಿರಿಯರು ಅಥವಾ ಹೆಂಗಸರು ಯಾರೂ ಇಲ್ಲದುದರಿಂದ ನಮ್ಮವರೇ ಎಲ್ಲಾ ಕೆಲಸ ಮಾಡಬೇಕು. ಮನೆಯಲ್ಲಿ ಹಬ್ಬದ ಸಡಗರದ ಜೊತೆಜೊತೆಗೆ ಗಡಿಬಿಡಿಯೂ ಪ್ರಾರಂಭವಾಯಿತು.

ಮನೆಯಲ್ಲಿ ನಾವು ನಾಲ್ಕು ಜನರೇ ಆದುದರಿಂದ ಇವರೇ ಮಕ್ಕಳಿಗೆ ಎಣ್ಣೆಯೊತ್ತಿ, ನೀರ್ಹಾಕಿ, ತಾವೂ ಸಹ ಸ್ನಾನ ಮುಗಿಸಿ ಅಡಿಗೆ ತಯಾರಿಸಲು ಅಡಿಗೆ ಮನೆ ಹೊಕ್ಕರು. ಮೊದಲು ಅಕ್ಕಿ, ಬೇಳೆ, ತೆಗೆದಿಟ್ಟುಕೊಂಡು, ತರಕಾರಿ ಹೆಚ್ಚಿಕೊಂಡು ಕುಕ್ಕರನ್ನು ಜೋಡಿಸಿ ಒಲೆಯ ಮೇಲಿಟ್ಟರು.

ಬೇರೆ ದಿನವಾದರೆ ಅನ್ನ, ಸಾರು ಅಥವಾ ಹುಳಿ ಮಾಡಿದರೂ ನಡೆಯುತ್ತಿತ್ತು. ಆ ದಿನ ಹಬ್ಬ ಬೇರೆ, ಆದ್ದರಿಂದ ಏನಾದರೂ ವಿಶೇಷ ಅಡಿಗೆ ಮತ್ತು ಸಿಹಿ ಮಾಡಲೇ ಬೇಕಾದ ಸಂದರ್ಭ. ಇದರಿಂದ ಒಂದು ತರಹದ ಆತಂಕವೂ ಸೇರಿತ್ತು.

ನಾನು ಹೊರಗೆ ಕುಳಿತಿದ್ದರೂ ಸಹ ನನ್ನ ಮನದಲ್ಲಿ ದುಗುಡ ತುಂಬಿದ ಬೇಸರ ಮನೆ ಮಾಡಿತ್ತು. ಒಬ್ಬರೇ ಹೇಗೆ ನಿಭಾಯಿಸುವರೋ ಎಂಬ ಆತಂಕ. ಆದರೆ ಏನೂ ಮಾಡುವಂತಿರಲಿಲ್ಲ.

ಒಲೆಯ ಮೇಲೆ ಕುಕ್ಕರಿನಲ್ಲಿ ಅಕ್ಕಿ, ಬೇಳೆ ಬೇಯುವ ವೇಳೆಗೆ ದೇವರ ಪೂಜೆ ಮುಗಿಸಿ, ಹೆಚ್ಚಿಟ್ಟಿದ್ದ ಹುರುಳೀಕಾಯಿಯನ್ನು ಬಾಣಲೆಯಲ್ಲಿ ಎಣ್ಣೆ ಹಾಕಿ ಒಗ್ಗರಿಸಿ ಬೇಯಲು ಹಾಕಿದರು.

ನಾನು ಯಾವಾಗಲೂ ತರಕಾರಿಯನ್ನು ಜಾಸ್ತಿ ನೀರು ಹಾಕಿ ಬೇಯಿಸಬಾರದೆಂದು ಹೇಳುತ್ತಿದ್ದುದರಿಂದಲೋ ಏನೋ, ನೀರನ್ನು ಸಹ ಚಿಮುಕಿಸದೆ, ಬೇಯಿಸಿದ್ದರಿಂದ ಪಲ್ಯ ಸ್ವಲ್ಪ ಸ್ವಲ್ಪ ಕರಕಲಾಗಿ ಬೆಂದಿತ್ತು.



[illegible]

ಸ್ವಭಾವತಃ ನನ್ನ ಪತಿರಾಯರು ಸಮಾಧಾನಿಯಾದುದರಿಂದ ಯಾವೊಂದು ಕೋಪತಾಪವೂ ವ್ಯಕ್ತಪಡಿಸದೆ ಸಮಾಧಾನದಿಂದ ಎಲ್ಲವನ್ನೂ ಮಾಡಿ ಮುಗಿಸಿ, ಎಲ್ಲರಿಗೂ ತಟ್ಟೆಯಿಟ್ಟು ಊಟಕ್ಕೆ ಬಡಿಸಿದರು. ಅನ್ನ, ಸಾರು, ಪಲ್ಯ, ಕೋಸಂಬರಿ, ಪಾಯಸ, ಮೊಸರು ಬಜ್ಜಿ, ಎಲ್ಲವನ್ನೂ ಅಚ್ಚುಕಟ್ಟಾಗಿ ತಯಾರಿಸಿದ್ದರು. ಪಲ್ಯ ಸ್ವಲ್ಪ ಕರುಕಲಾಗಿದ್ದರೂ ತುಂಬಾ ಚೆನ್ನಾಗಿತ್ತು. ಪಾಯಸವಂತೂ ಸವಿದವರಿಗೇ ಅದರ ರುಚಿ ತಿಳಿಯುವುದು. ಅಂತೂ ನಮ್ಮವರು ನಳಪಾಕವನ್ನೇ ಮಾಡಿ ಎಲ್ಲರಿಗೂ ಅದರ ಸವಿಯುಣಿಸಿದ್ದರು.

ಯಾವಾಗಲೂ ನಾನು ಮಾಡಿದ ಅಡಿಗೆಯನ್ನೇ ತಿಂದು ತಿಂದು ನಾಲಗೆ ಜಡ್ಡುಗಟ್ಟಿ ಹೋಗಿತ್ತು. ಈ ನೆವದಿಂದ ಹಬ್ಬದ ದಿನ ಆರಾಮಾಗಿ ಕೈ ಬಾಯಿ ಸುಟ್ಟುಕೊಳ್ಳದೆ ಕೂತು ಉಂಡಿದ್ದರಿಂದ ರುಚಿ ಎರಡು ಪಟ್ಟು ಹೆಚ್ಚಿತ್ತು.

ನನಗಂತೂ ಬೆಳಗಿನ ಮನಸ್ಸಿನ ದುಗುಡವೆಲ್ಲಾ ಮರೆತು ಹೋಗಿ ನಿಜವಾಗಲೂ "ಎಂದು ಮರೆಯಲಾಗದ ಯುಗಾದಿ"ಯಾಗಿ ಇನ್ನೂ ಮನದಲ್ಲಿ ಹಚ್ಚಹಸಿರಾಗಿದೆ.

ಮಕ್ಕಳೂ ಸಹ ಅವರ ತಂದೆಯ ಅಡುಗೆಯನ್ನು ಯಾವಾಗಲೂ ಹೊಗಳುತ್ತಲೇ ಇರುತ್ತಾರೆ.

— ಎಂ. ಆರ್. ಗೀತಾರಾವ್,
ಮುಂಬಯಿ



## ನೀವೂ ಒಮ್ಮೆ ಮಾಡಿ ನೋಡಿ

ನನ್ನವರು ದಿನನಿತ್ಯದಲ್ಲಿ ಅಡಿಗೆಮನೆಯತ್ತ ಇಣುಕಿ ನೋಡುವ ಹವ್ಯಾಸವಿಲ್ಲದವರಾದರೂ ತಿಂಗಳಲ್ಲಿ ಮೂರು ದಿನಗಳು ಮಾತ್ರ ಕಡ್ಡಾಯವಾಗಿ ತಮ್ಮ ಪಾಕಶಾಸ್ತ್ರ ಪ್ರಾವೀಣ್ಯತೆಯನ್ನು ಮೆರೆಸಲೇಬೇಕಾಗುವ ಪರಿಸ್ಥಿತಿ ನಮ್ಮ ಮನೆಯದು. ಏಕೆಂದರೆ ನಮ್ಮ ಕುಟುಂಬದಲ್ಲಿ ಈ ಪದ್ಧತಿ ಅನೂಚಾನವಾಗಿ ನಡೆದು ಬಂದಿದೆಯಾದ್ದರಿಂದ ಪತಿರಾಯರಿಗೆ ಈ ಬವಣೆ ತಪ್ಪಿದ್ದಲ್ಲ. ಆ ಮೂರು ದಿನಗಳು ಅವರು ಮಾಡಿ ಬಡಿಸುವ ಪಾಕ ವಿಶೇಷಗಳನ್ನು ತಿನ್ನುವ ಶಿಕ್ಷೆಯೂ ನಮಗೆ ತಪ್ಪಿದ್ದಲ್ಲ. ಕೆಲವರಿಗೆ ಇಡೀ ಜೀವಮಾನದಲ್ಲಿ ಎಲ್ಲೋ ಅಪರೂಪಕ್ಕೆ ತಮ್ಮ ಪತಿಯ ಕೈಯ ನಳಪಾಕದ ರುಚಿ ಸವಿಯುವ ಇಂತಹ ಅದೃಷ್ಟ, ನನಗೆ ಪ್ರತಿ ತಿಂಗಳೂ ದೊರೆಯುತ್ತಿದೆಯೆಂದರೆ ಬಹುಶಃ ನಿಮ್ಮಲ್ಲಿ ಕೆಲವರಿಗಾದರೂ ಅಸೂಯೆಯಾಗದಿರದು. ಆದರೆ ನನ್ನವರ ಪಾಕಶಾಸ್ತ್ರ ಪಾಂಡಿತ್ಯದ ಪರಿಚಯ ನಿಮಗಾದರೆ ಬಹುಶಃ ಆ ಅಸೂಯೆಯ ಸ್ಥಾನದಲ್ಲಿ ನನ್ನ ಬಗ್ಗೆ ಸ್ವಲ್ಪವಾದರೂ ಮರುಕ ಹುಟ್ಟದೇ ಇರದು.

ಪ್ರತಿ ತಿಂಗಳೂ ಮೂರು ದಿನಗಳಾದರೂ ಅಡಿಗೆ ಮಾಡಬೇಕಾದ ಅನಿವಾರ್ಯತೆಯಿರುವುದರಿಂದಾಗಿಯೋ ಏನೋ ನಮ್ಮವರ ಪಾಕ ಪಾಂಡಿತ್ಯ ಅಗಾಧವಾದದ್ದು, ಅದ್ಭುತವಾದದ್ದು. ಆದರೆ ಪಾಪ! ಒಂದೇ ದೋಷ ಮರೆವು. ಹೀಗಾಗಿ ಅನ್ನಕ್ಕೆ ಎಷ್ಟು ನೀರಿಡಬೇಕು? ಸಾರಿಗೆ ಎಷ್ಟೆಷ್ಟು ಪ್ರಮಾಣದಲ್ಲಿ ಹಾಕಬೇಕು? ಎಂಬ ಮೂಲಭೂತವಾದ ಅಂಶಗಳನ್ನು ಪ್ರತಿತಿಂಗಳೂ,



ವಿಶ್ವನಾಥ್

ಪ್ರತಿದಿನವೂ ಹೇಳಿಕೊಡಬೇಕಾದುದು ನನಗೆ ಅನಿವಾರ್ಯವೇ. ಏನಾದರೇನು? ಎಲ್ಲರಂತಲ್ಲಾ ನನ್ನ ಗಂಡ' ಅಡುಗೆಯ ವಿಷಯದಲ್ಲಿ ಅವರು ಅದ್ಭುತ ಪವಾಡಪುರುಷರು ಎನ್ನುವುದನ್ನು ಯಾರೂ ಅಲ್ಲಗಳೆಯುವಂತಿಲ್ಲ. ಏಕೆಂದರೆ ಅವರು ಮಾಡುವ ಇಡ್ಲಿ ಅನ್ನವಾಗುತ್ತದೆ, ಹುಳಿ ಪಲ್ಯವಾಗಿ ಪರಿವರ್ತನೆಯಾಗುತ್ತದೆ. ಸಾರು ನೀರಾಗುತ್ತದೆ, ಅನ್ನ ಗಂಜಿಯಾಗಿ ಬಿಡುತ್ತದೆ. ಇದೇನು ಕಡಿಮೆ ಸಾಧನೆಯೇ? ಪಾಪ! ಅವರು ಕಷ್ಟಪಟ್ಟು ತಾಳ್ಮೆಯಿಂದ ಮಾಡುವ ಅಡಿಗೆಯನ್ನು ತಿನ್ನುವಷ್ಟು ತಾಳ್ಮೆ ನಿಮಗಿದ್ದರೆ ಸಾಕು. ಮಿಕ್ಕೆಲ್ಲಾ ವಿಷಯ ಸುಲಭ.

ಒಮ್ಮೆ ಹೀಗಾಯಿತು. ಅಂದು ಭಾನುವಾರವಾದ್ದರಿಂದ ಬ್ಯಾಂಕಿಗೆ ರಜೆ. ಬೆಳಗ್ಗೆ ಏಳುತ್ತಲೇ ಬಂತು ಪತಿರಾಯರ ಸುಗ್ರೀವಾಜ್ಞೆ."ಲೇ, ನೋಡೆ, ಈ ದಿನ ನಿನ್ನ ಸಹಾಯ, ಸಲಹೆ ಪಡೆಯದೆ ನಾನೇ ಈ ದಿನ ಸ್ವತಂತ್ರವಾಗಿ ಅಡಿಗೆ ಮಾಡ್ತೇನೆ"

ಸರಿ, ನನಗೆ ಒಳಗೊಳಗೆ ನಗು. ಇರಲಿ, ನೋಡೋಣ, ಇದೂ ಒಂದು ಅನುಭವ ಎಂದುಕೊಂಡೆ.

ಸರಿ, ಪ್ರಯೋಗಶಾಲೆಯಲ್ಲಿ ಪತಿರಾಯರ ಪರದಾಟ ನಡೆಯುತ್ತಿದ್ದಂತೆಯೇ ನನ್ನ ಆತ್ಮೀಯ ಗೆಳತಿ ಪದ್ಮಳ ಅಪರೂಪದ ಆಗಮನವಾಯಿತು. ನನಗಂತೂ ಖುಷಿಯೋ ಖುಷಿ. ಸದ್ಯ ಅಡಿಗೆ ಮನೆಯ ತಾಪತ್ರಯವಿಲ್ಲದೆ ಆರಾಮವಾಗಿ ಹರಟಬಹುದಲ್ಲಾ ಎಂದು. ಸರಿ, ಅವ್ಯಾಹತವಾಗಿ ಸಾಗಿದ್ದ ನಮ್ಮ ಹರಟೆಗೆ ಬ್ರೇಕ್ ಬಿದ್ದಿದ್ದು ನಮ್ಮವರ ಧ್ವನಿಯಿಂದ. ಸತತವಾಗಿ ಎರಡು ಗಂಟೆ ಶ್ರಮಿಸಿ ಅಡಿಗೆ ಮಾಡಿದ್ದ ಪತಿರಾಯರು ಬೆವರೊರೆಸಿಕೊಳ್ಳುತ್ತಲೇ ನುಡಿದರು.

"ನೋಡಿ ಪದ್ಮಾಕ್ಷಮ್ಮನವರೇ, ಈ ದಿನ ಭಾನುವಾರದ ಸ್ಪೆಷಲ್ 'ಬಿಸಿಬೇಳೆ ಭಾತ್'ನ ರುಚಿ ನೋಡಲೇಬೇಕು. ಏಳಿ, ಊಟಕ್ಕೆ" ಎಂದರು. ಜೊತೆಗೆ ನಾನೂ ಧೈರ್ಯವಾಗಿ ದನಿಗೂಡಿಸಿದೆ. "ಹೌದೇ ಪದ್ಮಾ ನೀನು ನನ್ನವರ ಅಡಿಗೆ ರುಚಿ ಸವಿಯಲೇ ಬೇಕು. ಏಕೇಂದ್ರ ನಿನ್ನ ಮನೆಯಲ್ಲಂತೂ ಇಂತಹ ಚಾನ್ಸ್ ಸಿಗೋಲ್ಲಾ ನಿನ್ಗೆ" ಎಂದು ಒತ್ತಾಯಿಸಿದಾಗ ಸಂಕೋಚದಿಂದಲೇ ಊಟಕ್ಕೆ ಕುಳಿತಳು.

ರಾಯರು ದೊಡ್ಡ ಸ್ಟೀಲ್ ಡಬರಿಯಲ್ಲಿ ಬಿಸಿ ಬೇಳೆಬಾತ್ ಹೊತ್ತು ತಂದಾಗ ಅರ್ಧ ಮೆಚ್ಚುಗೆ

(58 ನೇ ಪುಟ ನೋಡಿ)

## ಧಾರಾವಾಹಿ




"ಈ ಎರಡೂವರೆ ವರ್ಷಗಳಲ್ಲಿ ಅವರು ಬರೆದ ಕಾಗದಗಳನ್ನು ತೋರಿಸಲೇನೇ?.. ಊಹೂಂ.. ಈ ವಿಷಯ ಅಂದ್ರೆ ಮದ್ವೆಯ ವಿಷಯದ ಬಗ್ಗೆ ಅವರು ಯೋಚಿಸಿಯೇ ಇರಲಿಲ್ಲ... ಹೀಗೆ ಹಠಾತ್ ಆಗಿ ಮದ್ವೆ ಮಾಡ್ಕೊಂಡು ಬಂದಿದ್ದಾರೆಂದ್ರೇ ಹೇಗೆ ನಂಬುವುದು?..."–ಮೋನಾಳನ್ನು ಹಿಡಿದುಕೊಂಡು ದುಃಖದಿಂದ ಹೇಳಿದಳು.

"ನೋಡು ಸಾಧನಾ... ಸಮಾಧಾನ ತಂದ್ಕೋ.. ಅವರೇನು ನಿಂಗೆ ಆಣೆ ಪ್ರಮಾಣ ಮಾಡಿರಲಿಲ್ಲವಲ್ಲ.. ಹೆಂಡತಿಯಾಗಿ ಬದುಕುವ ಆಸೆಯನ್ನೇ ಇಟ್ಟುಕೊಳ್ಳದ ನೀನು ಸವತಿಯನ್ನು ಕಂಡವಳಂತೆ ಆಡ್ತಾಯಿದ್ದೀಯಲ್ಲ.. ಸರೀನಾ? ನೀನೇ ಯೋಚಿಸು...:"

ಕಣ್ಣೀರು ತುಂಬಿದ ಮುಖ ಮೇಲೆತ್ತಿದ ಸಾಧನಾ, "ನನ್ನನ್ನು ಅರ್ಥ ಯಾರೂ ಮಾಡಿಕೊಳ್ತಾಯಿಲ್ಲವಲ್ಲೇ.... ದೇವರೇ ನಾನೇನು ಹೇಳಲಿ?... ಅವರು ದಾಂಪತ್ಯ ಜೀವನ ನಡೆಸಬಾರದಂತೆ ಕಣೇ... ಹಾಗೇನಾದ್ರೂ ಆದ್ರೆ ಎರಡು ವರ್ಷ ಬದುಕೋರು ಎರಡೇ ತಿಂಗಳಲ್ಲಿ..." –ಮುಂದೆ ಸಾವಿನ ಸುದ್ದಿಯನ್ನು ಹೇಳಲು ಬಾಯಿ ಬಾರದವಳಂತೆ.... ಬಿಕ್ಕಿದಳು. ಮೋನಾಳ ಬಾಯಿ ಕಟ್ಟಿಹೋಯಿತು.

"ಅವರಂತಹ ಸರ್ಜನ್, ವ್ಯಕ್ತಿಗೆ ಹೀಗಾಗಬಹುದೆಂದು ಊಹಿಸಿಕೊಂಡರೇನೇ... ಕೇಳರಿಯದವರಿಗೂ... ಹೊಟ್ಟೆ ಉರಿದಂತಾಗುವಾಗ, ಹತ್ತಿರದಿಂದ ನೋಡಿದ, ಆರಾಧಿಸಿದ, ನನಗೆ... ಹೇಗಾಗಬೇಡಾ... ನಾನ್ಹೇಗೆ ಸಹಿಸಿಕೊಳ್ಳಲೇ?..."

"ಅವರೇ ಡಾಕ್ಟರಲ್ಲವೇನೇ? ತಿಳಿದೂ ತಿಳಿದೂ ಅವರೇಕೆ ಅಪಾಯ ತಂದ್ಕೋತಾರೆ ನೀನೇ ಹೇಳು? ಕಾಯಿಲೆ ವಾಸಿಯಾಗಿರಬಹುದು... ಮನೇಲಿ ಬಲವಂತ ಮಾಡಿರಬಹುದು...."

"ಏನೋ.. ನಂಗೆ... ಒಂಥರಾ ಸಂಕಟವಾಗ್ತಿದೆ ಮೋನಾ.... ನನಗೂ ಬೇಕಾದ ಹಾಗೆ ಎಲ್ಲರಿಗೂ ಬೇಕಾದವರು.. ಅವರಿಗೇನಾದ್ರೂ ಆದ್ರೆ.. ನಾನುಳಿಯಲಾರೆ ಕಣೇ...." – ಸಾಧನಾಳ ಅಳು, ನೋವು... ಮಾತು... ನಿಲ್ಲುವ ಸೂಚನೆಯೇ ತೋರದಿದ್ದಾಗ, ಮೋನಾ,

"ಸಾಧನಾ... ಸ್ನೇಹಿತೇಂತ ಒಂದು ಮಾತು ಹೇಳ್ತೀನಿ ಕೇಳ್ತೀಯಾ?..." – ಸಾಧನಾಳ ಕೈ ಹಿಡಿದುಕೊಂಡು,

"ಒಂದೆರಡು ತಿಂಗಳು ರಜೆ ಹಾಕಿ ಹೋಗು.. ಎಲ್ಲಾ ಮರೆತು ಹೋಗುತ್ತೆ... ಇಷ್ಟು ವರ್ಷಗಳು ಆಸ್ಪತ್ರೆಯಲ್ಲೇ ಕೆಲಸ ಮಾಡುತ್ತಿರುವ ನಿನಗೆ ಸಾವುಗಳ ನೋವು ಹೊಸದೇನಲ್ಲ. ಸಾವು ನಿಶ್ಚಿತ... ನಾವೂ ಹೊರತಲ್ಲ....' ಎಂದು ಸಮಾಧಾನ ಪಡಿಸುವ ನೀನೇ ಏನೂ ಅರಿಯದವಳಂತೆ, ಅಳುತ್ತಾ ಕುಳಿತಿರೋದು ಸರೀನಾ?" –ಹೇಳಿದಳು.

"............."

"ಎಲ್ಲೋ ಕೆಲವರು ತಮ್ಮ ಭಾವನೆಗಳಲ್ಲಿ ಪ್ರಾಮಾಣಿಕವಾಗಿರ್ತಾರೆ.... ನಮ್ಮ ನಮ್ಮ ಬದುಕು, ಅದರ ರೀತಿಗೆ ತಕ್ಕವರನ್ನು ನಾವೇ ಆಯ್ಕೆ ಮಾಡಿಕೊಂಡು, ಬದುಕುವ ರೀತಿಯ ಬಗ್ಗೆ ನಿರ್ಧಾರ ತಳೆದುಕೊಳ್ಳಬೇಕು... ಗಾಳಿಯಲ್ಲಿ ಗೋಪುರ ಕಟ್ಕೊಂಡು, ಚಂದ್ರನೇ ತನ್ನ ಜೀವನಕ್ಕೆ ಬೇಕೂಂದ್ರೆ ಹೇಗೆ ಸಾಧ್ಯ?.. ಒಂದೆರಡು ದಿನ ರಜೆ ಹಾಕಿ ಕುಳಿತು ಯೋಚಿಸು. ಯಾವುದು ನಿಜ, ಸತ್ಯ ಎಂಬುದು ತಿಳಿಯುತ್ತೆ... ಯಾವಾಗಲೂ ಭ್ರಾಮಕಳಾಗಿ ಯಾವುದೋ ಲೋಕದಲ್ಲಿದ್ದವರಂತೆ ಕನಸು ಕಾಣುವ ವಯಸ್ಸೂ ನಮ್ಮದಲ್ಲ... ಒಳ್ಳೆಯದೂ ಅಲ್ಲ...." –ಮೋನಾ ಸಾಂತ್ವನಗೊಳಿಸುವ ಮಾತುಗಳೊಂದಿಗೆ, ಸಾಧನಾಳಿಗೆ ಜೀವನದ ನಿಜವೇನೆಂಬುದನ್ನು ಸ್ವಲ್ಪ ಕಟುವಾಗಿಯೇ ತಿಳಿಸಿ ಹೇಳಿದಳು.

ಸಾಧನಾ ಮೈ ಮೇಲೆ ಹಿಮ ಸುರಿಸಿಕೊಂಡವಳಂತೆ ಕುಳಿತಿದ್ದಳು... ಅವಳ ಅಳು ಈಗ ನಿಂತು, ಮುಖ ಬಿಗುವಾಗಿತ್ತು... ಕಣ್ಣುಗಳಲ್ಲಿ... ಬೆಳಕೇ ಇಲ್ಲವೇನೋ ಎಂಬಂತೆ ಅನ್ನಿಸಿತು ಮೋನಾಳಿಗೆ...

"ರೌಂಡ್ಸ್‌ಗೆ ಬಂದ್ರೂಂತ ಕಾಣುತ್ತೆ... ನೀನೇ ಹೋಗ್ತೀಯೋ ನಾನೇ ಹೋಗಲೋ?..."

"ಊಹೂಂ... ನಾನೇ ಹೋಗ್ತೀನಿ ಮೋನಾ..."–ಎಂದು ಸಾಧನಾ ಎದ್ದು ನಿಂತಳು.

"ಈ ದಿನ ಬೇಡಾ... ನಾನೇ ಹೋಗ್ತೀನಿ..." ಎಂದ ಮೋನಾಳನ್ನು ತಡೆದ ಸಾಧನಾ, "ಈ ದಿನ ನನಗೇನಾಗಿದೆ? ನನ್ನ ವೃತ್ತಿ ಗುರಿ ಏನೆಂಬುದನ್ನು ಮರೆತು ಸ್ವಾರ್ಥಿಯಂತೆ ಅಳುತ್ತಾ ಕುಳಿತಿದ್ದೆ. ... ನನ್ನ ಸ್ನೇಹ, ಕರುಣೆ, ಪ್ರೀತಿಯ ಮಾತುಗಳಿಗಾಗಿ ಅನೇಕರಿದ್ದಾರೆ... ಆ ತೊರೆಯಿನ್ನೂ ಬತ್ತಿಲ್ಲ... ಬತ್ತುವುದೂ ಇಲ್ಲ.. ಅಷ್ಟಕ್ಕೂ... ಡಾಕ್ಟರ್.. ರಮೇಶ್ ಮದ್ವೆಯಾದರೆ... ನಾನು.... ನಾನ್ಯಾಕೆ ಎಲ್ಲಾ ಮುಳುಗಿ ಹೋದವಳಂತೆ ಆಡಬೇಕು? ..ನೀನು ಹೇಳಿದ್ದರಲ್ಲಿ ಎಲ್ಲವೂ ಸತ್ಯ.." –ಎಂದು ಗಂಭೀರವಾಗಿ ನುಡಿದು, ದೃಢವಾದ ಹೆಜ್ಜೆಯಿಡುತ್ತಾ,.. ರೂಮಿನಿಂದ ಹೊರಗೆ ಬಂದಳು.

ಇದುವರೆಗೂ ಎಲ್ಲವೂ ಮುಳುಗಿ ಹೋದವಳಂತೆ ಕುಳಿತಿದ್ದ ಸಾಧನಾಳಿಗೆ... ತಟ್ಟನೆ ಧೈರ್ಯ ದೃಢತೆ ಎಲ್ಲಿಂದ ಬಂತು? ಹೇಗೆ ಬಂತು? ನಾಟಕವಾಡುತ್ತಿದ್ದಾಳೆಯೇ? ಮೋನಾ ದಂಗಾಗಿ ನೋಡುತ್ತಾ ನಿಂತಳು.

ಎಂದಿನಂತೆ ಎಲ್ಲಾ ಕೆಲಸಗಳು ನಡೆದುವು.. ವೈದ್ಯರುಗಳ ಗುಂಪು ರೌಂಡ್ಸ್ ಮುಗಿಸಿ ಹೋಯಿತು... ರೋಗಿಗಳಿಗೆ ಹೇಳಿದ ಚಿಕಿತ್ಸೆ ನೀಡಲಾಯಿತು. ತನ್ನ ಕೆಲಸದಲ್ಲಿ ಒಂದಿಷ್ಟು ಚ್ಯುತಿ ಬರದ ಹಾಗೆ ನಡೆದುಕೊಂಡ ಸಾಧನಾ ಗಂಭೀರವಾಗಿಯೇ.. ಕೆಲಸ ಮುಗಿಸಿದಳು. ಅಪ್ಪಿ ತಪ್ಪಿಯೂ ರಮೇಶನತ್ತ ನೋಡುವ ಪ್ರಯತ್ನ ಮಾಡಲಿಲ್ಲ. ಹಠಕ್ಕಾಗಿಯೋ, ಅಥವಾ ದೌರ್ಬಲ್ಯ ಮುಚ್ಚಿಸುವುದಕ್ಕಾಗಿಯೋ ಎಂಬಂತೆ ತುಟಿ ಬಿಗಿ ಹಿಡಿದು ರಮೇಶನನ್ನು ಪ್ರಯತ್ನಪೂರ್ವಕವಾಗಿಯೇ ನಿರ್ಲಕ್ಷಿಸಿದಳು. ತನಗೇನೂ ಆಗಿಲ್ಲವೆಂಬಂತೆ ಸೋಗು ಹಾಕಿ ಓಡಾಡುತ್ತಿದ್ದ ಸಾಧನಾಳನ್ನು ಕಂಡ ಮೋನಾ ಚಕಿತಳಾದರೂ, ಆ ಸಮಯದಲ್ಲಿ ವ್ಯಕ್ತಪಡಿಸಲು ಹೋಗದೇ ಸುಮ್ಮನಿದ್ದಳು.

ಮಧ್ಯಾಹ್ನ ಊಟದ ಸಮಯದಲ್ಲಿ, ಇದುವರೆಗೂ ತಪ್ಪಿಸಿಕೊಂಡು ತಿರುಗುತ್ತಿದ್ದ ಸಾಧನಾಳನ್ನು ಹಿಡಿದ ಮೋನಾ,

"ಏನಾಗಿದೆಯೇ?..." –ಕೇಳಿದಳು. ಒಮ್ಮೆ ಅವಳತ್ತ ನೇರವಾಗಿ ನೋಡಿದ ಸಾಧನಾ,

"ಇನ್ನೇನಾಗ್ಬೇಕು?.." – ಎಂದು ಕೇಳಿದಳು. ಅವಳ ದನಿ ಒರಟುತನ ಎದ್ದು ಕಾಣಿಸಿದ್ದರೂ, ಮುಖದಲ್ಲಿ ದುಗುಡ ತುಂಬಿತ್ತು. "ನೀನು ಹೀಗೆ ವಿಚಿತ್ರವಾಗಿ ಆಡ್ತಿರು.. ಮೊದ್ಲೇ ಆ ಜೆನ್ನಿ ಬಾಯಿ ಬೊಂಬಾಯಿ... ರಮೇಶನ ಮದ್ವೆಗೂ ನಿನ್ನ ವರ್ತನೆಗೂ ಜೋಡಿಸಿ ದೊಡ್ಡ ಕಥೆ ಹಬ್ಬಿಸಿ ಬಿಡ್ತಾಳೆ. ಮೊದಲೇ ನಿನ್ನ ಮತ್ತು ರಮೇಶನ ಸ್ನೇಹ ಎರಡು ವರ್ಷಗಳ ತನಕ ಮುಂದುವರೆದಿದ್ದು ಅವಳಿಗೆ ಮೆಣಸಿನ ಖಾರ ತಿನ್ನಿಸಿದ ಹಾಗಿತ್ತು...."

ಇಲ್ಲಿಯವರೆಗೆ....

ಮುಂಬಯಿಯಿಂದ ಹಿಂದಿರುಗಿದ ರಮೇಶ್ ಎಂದಿನಂತೆ ಇಲ್ಲದಿರುವುದನ್ನು ಗಮನಿಸಿದ ಸಾಧನಾ ವಿಮಚನೆಗೊಂಡಳು. ಕೊನೆಗೆ ವಿಷಯ ಅರಿಯಲೆಂದು ಒಂದು ದಿನ ಅವನ ಮನೆಗೆ ಹೋದಾಗ ರಮೇಶ್‌ಗೆ ವಿವಾಹವಾದುದನ್ನು ತಿಳಿದು ದಿಗ್ಭ್ರಮೆಗೊಂಡಳು. ಹೃದ್ರೋಗಿಯಾದ ರಮೇಶ್‌ನನ್ನು ಆಕೆ ಪ್ರೀತಿಸಿದ್ದರೂ ವಿವಾಹವಾಗಿ ಸಂಸಾರ ನಡೆಸುವ ಬಯಕೆ ಇರಲಿಲ್ಲ. ಕಾರಣ ವಿವಾಹ ರಮೇಶನ ಪಾಲಿಗೆ ಮರಣಕ್ಕೆ ಆಹ್ವಾನವಾಗಿತ್ತು. ಅವನು ಅದನ್ನು ಸ್ವೀಕರಿಸಿದಾಗ ಆಕೆ ಪೂರ್ತಿ ಎದೆಗುಂದಿದಳು. ದುಃಖಿತಳಾದಳು.

....ಇನ್ನು ಮೇಲೆ

"........."

"ಈಗ ದೊಡ್ಡ ಸಾಮ್ರಾಜ್ಯವನ್ನು ಜಯಿಸಿದವಳಂತೆ, ಆ ಹುಡುಗಿಗೆ ಮೊದ್ಲೇ ಹೇಳಿದೆವು. ಬೇರೆ ಯಾರೇ ಆಗಿದ್ದಿದ್ದರೂ ಇವಳಿಗೆ ನಿರಾಶೆ ಮಾಡ್ತಿರಲಿಲ್ಲವೇನೋ.... ಹೋಗಿ .. ಹೋಗಿ.. ಡಾಕ್ಟರ್ ರಮೇಶನ ಹಿಡ್ಕೊಂಡ್ರೆ ಸಾಧ್ಯವಾದೀತೇ?" – ಎಂದು ಹೇಳ್ಕೊಂಡು ಲೊಚಗುಟ್ಟುತ್ತಿದ್ದಾಳಂತೆ.. ನೀನು ವಾರ್ಡ್ ಚೇಂಜ್ ಮಾಡಿಸ್ಕೊಂಡು... ಹಠದಿಂದೆಂಬಂತೆ ಕೆಲಸ ಮಾಡು. ನಿನ್ನ ಅಂತರಂಗದ ಆಸೆ, ಅವಳಂತೆ ಮದುವೆ, ಪ್ರಣಯವೆಂದಿರಲಿಲ್ಲಾಂತ ಹೇಳು..."




ಸಾಧನಾಳ ತುಟಿಗಳಲ್ಲಿ ವಿಷಾದ ಮೂಡಿತು. "ಒಳ್ಳೆಯದಾಗಿದ್ರೂ ಆಡ್ಕೋತಾರೆ.. ಕೆಟ್ಟ

ದಾಗಿದ್ರೂ ಅಡ್ಜೋಸ್ತಾರ ಕಣೇ. ನನ್ನ ಮಾತು ಕೇಳು.. ರಜೆ ಹಾಕಿ ಸಮಾಧಾನವಾಗಿರು ಸಾಧನಾ...''

"ನಾನು ಪಲಾಯನವಾದಿಯಲ್ಲ... ಮುಂದೆ ಎಂದಾದರೂ ತನಗೆ 'ರಮೇಶ್' ಎಂಬ ವ್ಯಕ್ತಿ ಸಿಗಬಹುದು..... ಮದುವೆಯಾಗಿ ಸುಖವಾಗಿರ ಬಹುದೆಂಬ ಕಲ್ಪನೆಗಳಿಂದ ಈ ಕೆಲಸಕ್ಕೆ ಬರಲಿಲ್ಲವಲ್ಲ? ನನ್ನ ಆಸೆ ಆಕಾಂಕ್ಷೆ ಗುರಿಗಳೇ ಬೇರೆ. ಅದಕ್ಕೆ ಪೂರಕ ವಾಗಿ, ಉತ್ತೇಜನ ಸಿಗುವಂತ ಈ ಘಟನೆ ನಡೆಯಿತು... ನಾನು ನನ್ನನ್ನು ಒಪ್ಪಿಸಿಕೊಂಡೆ....''– ಎಂದು ಒಂದು ಕ್ಷಣ ನಿಲ್ಲಿಸಿದ ಸಾಧನಾ,

"ಪ್ರೀತಿಯನ್ನು ಕಳೆದುಕೊಂಡಿಲ್ಲ... ಪ್ರೀತಿಸುವ ವ್ಯಕ್ತಿ ನನ್ನಿಂದ ದೂರವಾಯಿತು.. ಅಷ್ಟೇ.. ಆದರೆ... ಒಂದೇ ಒಂದು ಸಂದೇಹ..ಒಂದೇ ಒಂದು ಪ್ರಶ್ನೆ ಮೋನಾ, ತಿಳಿದೂ ತಿಳಿದೂ.... ಡಾಕ್ಟರ್ ರಮೇಶ್ ಹೀಗೇಕೆ ಮಾಡಿದರು.?....'' –ಹೇಳುತ್ತಿದ್ದಂತೆಯೇ. ಅವಳ ಗಂಟಲುಬ್ಬಿ ಬಂದಿತು.... ಉಕ್ಕಿ ಬಂದ ಕಂಬನಿಯನ್ನು ತುಟಿ ಕಚ್ಚಿ ಹಿಡಿದು ತಡೆ ಹಿಡಿದಳು.

"ಈಗಲಾದ್ರೂ ಊಟಕ್ಕೆ ಬರ್ತೀಯಾ?''

"ಊಹೂಂ..... ನಂಗೆ ಹಸಿವಿಲ್ಲ...''

"ಹೀಗೆ ಎಷ್ಟು ದಿನಾಂತ ಇರ್ತೀಯಾ?...''

"..........''

"ಹೊಟ್ಟೆ ಹಸಿಯುವ ತನಕ....''

"ನಗೋ ಬದಲು ಅತ್ತು ಬಿಡು ಮಹರಾಯಿತಿ...''

".......''

"ಏನು ಬೋತಾ ಇದ್ದೀಯಾ?''

"ರಜೆ ಹಾಕಿ ಹೋಗೂಂತ ಹೇಳಿದ್ದೆಯಲ್ಲೇ.... ಹೇಗೂ ಬ್ಲಡ್ ಡೊನೇಶನ್ ಕ್ಯಾಂಪ್‌ಗೇಂತಾ... ಯಾವ್ದೋ ಜಾಗಕ್ಕೆ ಹೋಗ್ತಾಯಿದ್ದಾರ.... ಅವರ್ಜೊತೆ ಹೋಗಿ ಬರ್ತೀನಿ... ಜಾಗ ಬದಲಿಸಿದ ಹಾಗಾಗುತ್ತೆ....''

"ಓ.. ಹಾಗಾ.... ಅಷ್ಟೇ ಮಾಡು....''

ಸಾಧನಾ ಊಟದ ಶಾಸ್ತ್ರ ಮಾಡಿ ವಾರ್ಡಿನತ್ತ ನಡೆದಳು. ಅವಳೆದೆಯಲ್ಲಿ ಬಿರುಗಾಳಿ ಎದ್ದಿತ್ತು... ಬೆಳಿಗ್ಗೆಯಿದ್ದ ಹಠ, ದೃಢತೆ ಸಂಜೆ ಕಾಣಲಿಲ್ಲ. ಕಷ್ಟಪಟ್ಟು ಹೂತು ಹೋದಂತಾಗುತ್ತಿದ್ದ ಕಾಲುಗಳನ್ನು ಬಲವಂತವಾಗಿ ಎಳೆದು ಹಾಕುತ್ತಾ.... ಬಹು ಪ್ರಯಾಸದಿಂದ ಡ್ಯೂಟಿ ಮುಗಿಸಿದಳು. ಅವಳ ತಲೆಯಲ್ಲಿ ಒಂದೇ ಭಯ, ಯೋಚನೆ ಸುತ್ತಿ ಸುತ್ತಿ ಬರುತ್ತಿತ್ತು.

"ಏನಾದ್ರೂ.... ಏನಾದ್ರೂ.... ದುಡುಕಿ.. ಹೆಂಡತೀ ಅಂತ.... ದಾಂಪತ್ಯ ಜೀವನಕ್ಕೆ ಆಸೆಪಟ್ಟರೆ... ಉದ್ವೇಗಕ್ಕೆ... ಅವರ ಹೃದಯ ಸ್ಪಂದಿಸೀತೆ? ಹಾಗೆಂದು ಬಡಿತವನ್ನೇ ನಿಲ್ಲಿಸಿಬಿಟ್ಟರೆ?...'' – ಇನ್ನೂ ಏನೇನೋ ಅನುಮಾನ ತಡೆಯದೆ, ತಾರಾಳನ್ನು ಭೇಟಿ ಮಾಡಿ ತನ್ನೆಲ್ಲಾ ಅಳಲು ತೋಡಿಕೊಳ್ಳುವ ಬದಲು, ತನ್ನನ್ನು ಕಾಡುತ್ತಿದ್ದ ಪ್ರಶ್ನೆಯನ್ನು ಕೇಳಿದಳು. ಮೃದುವಾಗಿ ನಕ್ಕ ತಾರಾ,

"ಮದ್ವೇನೇ ಆಗದಿದ್ದರೆ.... ಹಾಗ ಇರ್ತಾ ಇದ್ದರೋ ಏನೋ? ಆದರೆ ದಿನಾ ಪಕ್ಕದಲ್ಲಿ ಹೆಂಡತಿ ಮಲಗುವಾಗ ಬಯಕೆ ಕೆರಳದಿರಲು ಅವರೇನು ಮುದುಕರಲ್ಲ... ಹೃದ್ರೋಗವಿದೆ ಅಷ್ಟೇ ನಪುಂಸಕರಲ್ಲವಲ್ಲ..?'' – ಎಂದು,

"ನಿನಗೆ ಈ ಹುಚ್ಚು ಯೋಚನೆ ಹೇಗೇ ಬಂತು. ಹೊಸ ಮನೆ ಕೊಂಡವನು ಹೇಗಿದೇಂತ ಒಮ್ಮೆ ಯಾದರೂ, ಕುತೂಹಲಕ್ಕಾಗಿಯಾದರೂ ಒಳಗೆ ಹೋಗಿ ನೋಡದೇ ಇರುತ್ತಾನೆಯೇ?....'' ಅರ್ಥಗರ್ಭಿತವಾಗಿ ನಕ್ಕಳು.

ಮುಂದೆ ಕೇಳಿಸಿಕೊಳ್ಳುವ ತಾಳ್ಮೆ ಸಾಧನಾಳಿಗಿರಲಿಲ್ಲ... ನಿಲ್ಲಲಾರದವಳಂತೆ ಓಡಿ ಬಂದಳು.

ಬೆಳಿಗ್ಗೆ ಆಸ್ಪತ್ರೆಗೆ ಬೇಗ ಬಂದ ಸಾಧನಾಳಿಗೆ ಆಘಾತ ಕಾದಿತ್ತು. "ಡಾಕ್ಟರ್ ರಮೇಶ್‌ನಿಗೆ ಚಳಿ ಜ್ವರ ಹೆಚ್ಚಾಗಿ ನರ್ಸಿಂಗ್ ಹೋಂ ಒಂದರಲ್ಲಿ ಅಡ್ಮಿಟ್ ಆಗಿದ್ದಾರಂತೆ... ಭಯಕ್ಕೆ ಕಾರಣವಿಲ್ಲ.... ವಾತಾವರಣ ಬದಲಾಗಿದ್ದಿರಬೇಕು...'' – ಎಂದು ಮೋನಾ... ಪತ್ರಿಕಾ ವರದಿಯನ್ನೊಪ್ಪಿಸುವಂತೆ, ಹೇಳಿ ಮುಗಿಸಿ, ತನ್ನ ವಾರ್ಡಿನತ್ತ ಓಡುವ ನಡಿಗೆ ನಡೆದಳು....

ಸಾಧನಾ ಮರಗಟ್ಟಿದವಳಂತೆ ನಿಂತಳು.... ಅವನಿರುವ ಜಾಗಕ್ಕೆ ಹೋಗಲಾರೆ... ಹೋಗದಿರಲಾರೆ... ಆಸ್ಪತ್ರೆಯಲ್ಲೇ ಆಗಿದ್ದಿದ್ದರೆ ಏನಾದರೂ ನೆಪದಿಂದ ಹೋಗಿ ಮುಖವನ್ನಾದರೂ ನೋಡಿಕೊಂಡು ಬರಬಹುದಾಗಿತ್ತು.. ಯಾಕೆ ಬಂದೆ? ಎಂದು ಅವರ ಹೆಂಡತಿ ಪ್ರಶ್ನಿಸಿ ಕೇಳಿದರೆ?....' ಸಾಧನಾ ಯೋಚನೆಯ ದಾಳಿಯಿಂದ ತತ್ತರಿಸಿದಳು. ಕ್ಯಾಂಪಿಗೆ ಹೋಗುವುದು ಅನಿವಾರ್ಯವಾದುದರಿಂದ ಹೊರಡಲೇಬೇಕಾಗಿತ್ತು...

ಸಂಜೆ ಕ್ಯಾಂಪ್ ಮುಗಿಸಿಕೊಂಡು ಬಂದ ಸಾಧನಾ ಬಳಲಿದ್ದರೂ, ಮನಸ್ಸು ತಡೆಯದೆ, ಪ್ರಯಾಸ ಪಡೆದುಕೊಂಡು ರಮೇಶನನ್ನು ನೋಡಲು ನರ್ಸಿಂಗ್ ಹೋಮ್‌ಗೆ ಹೊರಟು ಬಂದಳು.

ಅವಳ ಊಹೆಯಂತೆ ಅವನ ಬಳಿ ಹೆಂಡತಿಯಿರಲಿಲ್ಲ.. ಕೆಲಸದಾಳು ಓಡಾಡುತ್ತಿದ್ದುದನ್ನು ಬಿಟ್ಟರೆ ಮತ್ತಾರೂ ಇರಲಿಲ್ಲ.

ನಿಧಾನವಾಗಿ ಬಾಗಿಲು ತೆರೆದು ಒಳಗೆ ಬಾರದೆ ಬಾಗಿಲಿನಲ್ಲಿಯೇ ನಿಂತ ಸಾಧನಾಳನ್ನು ಕಂಡ ರಮೇಶ್,

"ಒಳಗೆ ಬಾ... ಸಾಧನಾ... ಈಗ ತಾನೇ... ನಮ್ಮ ಹಾಸ್ಪಿಟಲ್ ಸ್ಟಾಫ್ ಮೆಂಬರ್ಸ್ ಬಂದು ಹೋದರು... ನೀನೊಬ್ಬಳು ಯಾಕೆ ಬರಲಿಲ್ಲಾಂತ ಯೋಚಿಸುತ್ತಾ ಇದ್ದೆ....'' ಸಹಜವಾಗಿರಲು ಪ್ರಯತ್ನಿಸುತ್ತಾ ಮಾತನಾಡಿದ ಅವನತ್ತ ಪ್ರೇಕ್ಷಕಳಂತೆ ನೋಡಿದ ಸಾಧನಾ,

"ನನ್ನ ನೆನಪಾದರೂ ಇತ್ತಲ್ಲ.. ಅಷ್ಟೇ ಸಾಕು ಬಿಡಿ...'' –ಎಂದಳು ಮೊನಚಾಗಿ.

"ಕೂತ್ಕೋ...'', – ಎಂದು ಕುರ್ಚಿ ತೋರಿಸಿದ.

"ಪರವಾಗಿಲ್ಲ ಬಿಡಿ...'' ಎನ್ನುತ್ತಾ ಹಾಸಿಗೆಯ ಬಳಿ ಬಂದು ನಿಂತ ಸಾಧನಾ,

"ಏನಾಗಿದೆಯಂತೆ?.. ಜ್ವರ ಕಡಿಮೆಯಾಗಿದೆಯಾ? ಹೇಗಿದ್ದೀರಿ?....'' –ಎಂದು ಕೇಳುತ್ತಾ ತನಗರಿವಿಲ್ಲದೆ ಅವನ ಹಣೆಯ ಮೇಲೆ ಮೃದುವಾಗಿ ತನ್ನ ಕೈಯನ್ನಿರಿಸಿದಳು.

ಬಹಳ ವರ್ಷಗಳ ನಂತರದ ಅವಳ ಸ್ಪರ್ಶ, ಸಾಮೀಪ್ಯದಿಂದ, ರಮೇಶ ಉದ್ವಿಗ್ನಗೊಂಡ. ತನಗಾಗುತ್ತಿದ್ದ ತುಮುಲವನ್ನು ಬಚ್ಚಿಡಲಾಗದೆ,

"ಸಾಧನಾ... ನನ್ನನ್ನು ಕ್ಷಮಿಸುತ್ತೀಯಾ?'' – ತನ್ನ ಹಣೆಯ ಮೇಲಾಡುತ್ತಿದ್ದ ಅವಳ ಕೈಯನ್ನು ಹಿಡಿದು ಆರ್ತನಾಗಿ ಕೇಳಿದ..

"ಕ್ಷಮಿಸುವಂತಹುದನ್ನು ಏನು ಮಾಡಿದ್ದೀರಿ?.. ಈ ಸಮಯದಲ್ಲಿ .. ಏನೇನೋ ಯೋಚಿಸುವುದು ಬೇಡಾ.... ಮೊದಲು ಆರೋಗ್ಯ ಸರಿಯಾಗಿರಲಿ ಸರ್....'' – ಎಂದು ಸ್ವರವನ್ನು ಸಹಜವಾಗಿಸಲು ಪ್ರಯತ್ನಿಸುತ್ತಾ ಹೇಳಿದ ಸಾಧನಾ ನಿಧಾನವಾಗಿ ಅವನಿಂದ ತನ್ನ ಕೈಯನ್ನು ಬಿಡಿಸಿಕೊಂಡಳು.

"ಯಾಕೆ ನಿಮ್ಜೊತೆ ಯಾರೂ... ಇಲ್ಲ... ನಿಮ್ಮ ಮನೆಯವರ್‍ಯಾರೂ ಕಾಣ್ತಾಯಿಲ್ಲ.. ಕಾಫಿ ಏನಾದ್ರೂ ಬೇಕೇ?...''

"ಊಹೂಂ... ಏನೂ ಬೇಡಾ..''

"ಜ್ವರ ಪೂರ್ತಿ ಬಿಟ್ಟಿಲ್ಲಾಂತ ಕಾಣುತ್ತೆ ಅಲ್ವಾ ಸರ್?''

"ಏನೇನೋ ಮಾತನಾಡಿ ನಿನ್ನ ಸಿಟ್ಟನ್ನು ಮುಚ್ಚಿಕೊಳ್ಳುವುದು ಬೇಡಾ.. ನೀನು ಮಾತನಾಡುವ ರೀತಿ ಸ್ವಾಭಾವಿಕವಾಗಿಲ್ಲಾಂತ ಆಣೆ ಮಾಡಿ ಹೇಳ್ತೀನಿ''

ಸಾಧನಾ ವಿಷಾದದಿಂದ,

"ಸಿಟ್ಟು? ಅದೂ ಒಬ್ಬ ರೋಗಿಯ ಮೇಲೆ? ಖಂಡಿತಾ ಇಲ್ಲ ಸರ್...'' – ಎಂದಳು.



## ಪ್ರಶ್ನೆಗಳು

1) ಪರಮಾಣು ಕವಚಗಳ ಕಲ್ಪನೆ ಸಂಶೋಧಿಸಿದ್ದಕ್ಕೆ ಅಮೇರಿಕಾದ ಮಾರಿಯಾ ಗೋಪರ್ಟ್ ಮೇಯರ್ಸ್ ಗಳಿಸಿದ ಅತ್ಯುನ್ನತ ಗೌರವ
2) ಸ್ವತಂತ್ರ ಭಾರತದ ಮೊಟ್ಟಮೊದಲ ಮಹಿಳಾ ರಾಜ್ಯಪಾಲೆ.
3) ಪೋರ್ಚ್‌ಗೀಸರ ವಿರುದ್ಧ ಹೋರಾಟ ನಡೆಸಿದ ಕರಾವಳಿಯ ರಾಣಿ.
4) ಮೈಸೂರು ವಿಶ್ವವಿದ್ಯಾನಿಲಯದ ಮೊದಲ ಮಹಿಳಾ ಉಪಕುಲಪತಿ.
5) ಜೈನ ಶ್ರಾವಕಿ ಅತ್ತಿಮಬ್ಬೆ ದೊಡ್ಡ ಬಸದಿ ಎಲ್ಲಿ ಕಟ್ಟಿಸಿದಳು.
6) ಕಾಂಗ್ರೆಸ್ ಅಧ್ಯಕ್ಷ ಪದವಿ ಪಡೆದ ಮೊದಲ ವಿದೇಶಿ ಮಹಿಳೆ.
7) ಸತಿ ಸಹಗಮನ ಪದ್ಧತಿಯನ್ನು ನಿಷೇಧಿಸಿದ ಬ್ರಿಟಿಷ್ ಗವರ್ನರ್ ಜನರಲ್.
8) ಕ್ಲಿಯೋಪಾತ್ರ ಯಾವ ದೇಶವನ್ನು ಆಳಿದಳು.
9) ಇಂಗ್ಲೆಂಡಿನ ಉಕ್ಕಿನ ಮಹಿಳೆ ಎಂದು ಖ್ಯಾತರಾಗಿದ್ದ ಪ್ರಧಾನಿ.
10) ಅಕ್ಕಮಹಾದೇವಿಯ ವಚನಗಳ ಅಂಕಿತ ಯಾರಿಗೆ ಸಲ್ಲುವುದು
11) ಶ್ರೀಮತಿ ದೇವಿಕಾರಾಣಿ ರೋರಿಚ್ 1969 ರಲ್ಲಿ ಗಳಿಸಿದ ಪುರಸ್ಕಾರ.
12) ಸೋನಾಲ್ ಮಾನ್‌ಸಿಂಗ್ ಯಾವ ಪ್ರಕಾರದ ಪ್ರಸಿದ್ಧ ನರ್ತಕಿ

[ಉತ್ತರಗಳು ಇದೇ ಸಂಚಿಕೆಯಲ್ಲಿವೆ. ಹುಡುಕಿ ನೋಡಿ]

* ಜೆ.ಪಿ.

ರಮೇಶನ ಮುಖ ಬಿಳಿಚಿಕೊಂಡಿತು.. ಸಾಧನಾಳ ಮಾತಿಗೋ, ಜ್ವರದ ತಾಪಕ್ಕೋ, ಬಳಲಿದವನಂತ.. ದಿಂಬಿಗೊರಗಿದ.... ಅವನ ಪೇಲವವಾಗಿದ್ದ ಮುಖದಲ್ಲಿ ನಾನಾ ಭಾವನೆಗಳ ತಾಕಲಾಟ ವಿಚಿತ್ರವಾಗಿ ನಡೆದಿತ್ತು.

ಸಾಧನಾಳಿಗೆ ಕರುಣೆಯುಕ್ಕಿ ಬಂದಿತು.

"ಸರ್... ಏನೇನೋ ಕಲ್ಪಿಸಿಕೊಂಡು ಯೋಚಿಸಬೇಡಿ.... ಈ ಸಮಯದಲ್ಲಿ ಒಳ್ಳೆಯದಲ್ಲ.. ರೆಸ್ಟ್ ತೆಗೆದುಕೊಳ್ಳಿ.. ಏನಾದ್ರೂ ಕುಡೀತೀರಾ?''

"ಏನೂ.. ಬೇಡಾ.... ಯಾರ ಕರುಣೆಯೂ ನಂಗೆ ಬೇಕಾಗಿಲ್ಲ...'' – ಅಸಹನೆಯಿಂದ ನುಡಿದ ಆವನ ಬಳಿ ಬಂದ ಸಾಧನಾ,

"ಒಂಟಿಯಾಗಿದ್ರೆ ಹಾಗನ್ನಿಸುತ್ತೆ... ಮನೆಯವನ್ನ ಹತ್ತಿರವಿಟ್ಟುಕೊಳ್ಳೋದು ಒಳ್ಳೆಯದು.... ನಿಮ್ಮ ಬೇಕು ಬೇಡಗಳನ್ನು ನೋಡ್ಕೊಳ್ಳೋರು...'' – ಹೇಳುತ್ತಿದ್ದ ಹಾಗೆಯೇ ಉದ್ವೇಗದಿಂದ ಧಿಗ್ಗನೆ ಎದ್ದು ಕುಳಿತ ರಮೇಶ್,

"ಇನ್ನು ನಾಟಕ ಸಾಕು ಮಾಡು... ವ್ಯಂಗ್ಯ ಸಾಕು... ನಂಗೇ... ನೀನು ಬೇಕೂಂತ ಅನ್ನಿಸ್ತಾಯಿದೆ..'' – ಎಂದ.

ರಮೇಶ್ ಹತ್ತಿರ ಬಂದಿದ್ದ ಸಾಧನಾಳನ್ನು ಹತ್ತಿರಕ್ಕೆಳೆದುಕೊಳ್ಳಲು ಯತ್ನಿಸಿದ... ಹಗುರಾಗಿ ಅವನ ಹಿಡಿತದಿಂದ ಬಿಡಿಸಿಕೊಂಡು ದೂರ ಬಂದು ನಿಂತ ಸಾಧನಾ,

"ನಮ್ಮ ಆಸ್ಪತ್ರೆ... ನಮ್ಮ ವಾರ್ಡ್ ಆಗಿದ್ದಿದ್ದರೆ ಖಂಡಿತಾ ನಾನೇ ಇರ್‍ತಿದ್ದೆ... ಇಲ್ಲಿ... ಬೇರೆಯವರ ಅಧಿಕಾರವಿದೆಯಲ್ಲ... ಸರ್'' – ಎಂದು,

"ನಾನಿನ್ನು ಬರಲಾ?...'' – ಎಂದಳು. ಇನ್ನು ಕೆಲವು ಕ್ಷಣಗಳು ಅಲ್ಲಿಯೇ ಉಳಿದರೆ, ತಾನು ಸೋತು ಅವನೆದೆಗೊರಗುವುದು ಖಂಡಿತಾ... ತನ್ನ ದೌರ್ಬಲ್ಯ ತಿಳಿಯುವ ಮೊದಲೇ ಇಲ್ಲಿಂದ ಹೊರಟು ಹೋಗಿಬಿಡಬೇಕು...

ಸಾಧನಾ ಹೊರಟು ನಿಂತಳು. ರಮೇಶ್ ಇನ್ನು ತಡೆಯದಾದ. ಹಾಸಿಗೆಯಿಂದ ಪ್ರಯಾಸ ಎದ್ದು ಬಂದು,

"ಸಾಧನಾ... ಪ್ಲೀಸ್... ಕೂತ್ಕೋ... ನಿನಗೇನು ನಾನು ಮಾಡಲಾರೆ.... ನಿನ್ನ ಹತ್ರ ಮಾತನಾಡ್ಬೇಕು...'' ಅವಳ ಕೈ ಹಿಡಿದು ಬಲಮಂತದಿಂದ ಕೂಡಿಸಿದ..

ಕೀಲು ಕೊಟ್ಟ ಗೊಂಬೆಯಂತೆ ಕುಳಿತಳು.

"ನಂಗೆ ಗೊತ್ತು... ನನ್ನ ಮೇಲೆ ನಿನಗೆ ಜಿಗುಪ್ಸೆ, ಸಿಟ್ಟು... ತಿರಸ್ಕಾರ ಎಲ್ಲಾ ಬಂದಿದೇಂತ.... ಈ ಜ್ವರ ಬಂದಿರೋದು ಒಳ್ಳೆಯ ಲಕ್ಷಣವಲ್ಲಾಂತ ಅನ್ನಿಸ್ತಾಯಿದೆ... ನಿನ್ನನ್ನು ನೋಡುತ್ತೇನೋ ಇಲ್ಲವೋ ಅಂತ ಚಡಪಡಿಸ್ತಾ ಇದ್ದೆ... ನನ್ನ ಹೃದಯದ ಕರೆಯನ್ನು ಕೇಳಿಸಿಕೊಂಡವಳಂತೆ ನೀನು ಬಂದೆ...'' – ರಮೇಶ್ ಹಾಸಿಗೆಯ ಬಳಿಹೋಗದೆ, ಮತ್ತೊಂದು ಕುರ್ಚಿಯಲ್ಲಿ ಕುಳಿತು, ಪ್ರಾರಂಭಿಸಿದ. ಚಳಿಗೋ, ಉದ್ವೇಗಕ್ಕೋ ನಡುಗುತ್ತಿರುವಂತ ಭಾಸವಾಯಿತು.

"ಹೌದು ನಿನಗೆ ಹೇಳದೆ ಮದ್ವೆ ಮಾಡ್ಕೊಂಡು ಬಂದೆ... ಯಾಕೆ ಗೊತ್ತಾ.. ನೀನು ನನಗಾಗಿ ಕಾಯುತ್ತಾ ಕುಳಿತಿರುವುದನ್ನು ಒಮ್ಮೆ ಭೇಟಿ ಮಾಡಿದ ಜೆನ್ನಿ ಹೇಳಿದ್ದಳು. ನನ್ನನ್ನು ಮದುವೆಯಾಗುವ ನಿನ್ನ ಆಸೆ ನನಗೂ ಹಿತವಾದದ್ದೇ.... ಆದರೆ ನಂತರದ ನೋವು... ನನ್ನ ಅಗಲಿಕೆಯ ಜೊತೆ ವಿಧವೆಯ ಪಟ್ಟ... ಸಿಗುವುದನ್ನು ನಾನು ಕಲ್ಪಿಸಿಕೊಂಡು ... ಸಹಿಸದಾದೆ... ನಿನಗಿಂತ.. ಹೆಚ್ಚು ನನಗೆ ನಿನ್ನ ಸಾಮೀಪ್ಯದ ಬಯಕೆಯಿದೆ ಸಾಧನಾ... ಮೊದಲು ನೀನು ಬರೀ ಕರುಣೆ ಪಡ್ತೀಯಾಂತ ಅಂದ್ಕೊಂಡಿದ್ದೆ... ಊಹೂಂ... ನೀನು ಪ್ರೀತಿಸತೊಡಗಿದ್ದೆ... ಅದರ ಆಳ ಅನುಭವಿಸಿದ ನಾನು ಹೆದರಿದೆ.... ನಾನು ಮದುವೆ ಮಾಡಿಕೊಂಡರೆ ಖಂಡಿತಾ ನೀನು ದ್ವೇಷಿಸುತ್ತೀಯಾ ಎಂದುಕೊಂಡು ನನಗಿಷ್ಟವಿಲ್ಲದ ತೀರ್ಮಾನ ತೆಗೆದುಕೊಂಡೆ....''

''......''

"ನಾನು ಕೈ ಹಿಡಿದು ಕರೆದು ತಂದವಳೂ ಕೂಡಾ ಒಬ್ಬ ರೋಗಿ.... ಕ್ಯಾನ್ಸರ್‌ನಿಂದ ಬಳಲುತ್ತಾ,

## ವನಿತಾ

### ಓದುಗರ ಗಮನಕ್ಕೆ

ಬಹುಕಾಲದಿಂದ "ವನಿತಾ''ದಲ್ಲಿ ಧಾರಾವಾಹಿಯಾಗಿ ಬರುತ್ತಿರುವ ಡಾ। ಉಷಾ ರಾವ್ ಅವರ "ಸಂಮೋಹಿನಿ ಚಿಕಿತ್ಸೆ'' ವಿಶೇಷ ಜನಾದರಣೆ ಪಡೆದಿದ್ದು ಈ ದಿಸೆಯಲ್ಲಿ ತಮ್ಮ ಸಮಸ್ಯೆಗಳಿಗೆ ಪರಿಹಾರ ಬಯಸುವವರೂ ಇರಬಹುದು. ಕಾರಣ ಅಂತಹವರ ಅನುಕೂಲಕ್ಕಾಗಿ "ಸಂಮೋಹಿನಿ ಪ್ರಶ್ನೋತ್ತರ ವೇದಿಕೆ'' ಯನ್ನು ಬಹುಬೇಗ ಆರಂಭಿಸಲಿದ್ದೇವೆ. ಕಾರಣ ಸಮಸ್ಯೆಗಳಿಗೆ ಪರಿಹಾರ ಬಯಸುವವರು ಪ್ರಶ್ನೆಯನ್ನು ಚಿಕ್ಕದಾಗಿ ಚೊಕ್ಕವಾಗಿ ಅಂಚೆ–ಕಾರ್ಡ್‌ನಲ್ಲಿ ಬರೆದು "ವನಿತಾ''ದ ಮದರಾಸು ಕಾರ್ಯಾಲಯಕ್ಕೆ ಕಳಿಸಬೇಕು. ಡಾ। ಉಷಾರಾವ್ ಅವರಿಂದ ಉತ್ತರಗಳನ್ನು ಪಡೆದು 'ವನಿತಾ'ದಲ್ಲಿ ಪ್ರಕಟಿಸಲಾಗುವುದು.

ನಿಮ್ಮ ಪ್ರಶ್ನೆಗಳನ್ನು ಕಳಿಸುವ ವಿಳಾಸ :
"ವನಿತಾ''
ಸಂಮೋಹಿನಿ ಪ್ರಶ್ನೋತ್ತರ ವೇದಿಕೆ
ಡಾಲ್ಟನ್ ಪಬ್ಲಿಕೇಷನ್ಸ್–
ಚಂದಮಾಮ ಬಿಲ್ಡಿಂಗ್ಸ್
ವಡವಳನಿ, ಮದರಾಸು–600 026.

ರೇಡಿಯೋ ಥೆರಪಿಗಾಗಿ ಬರುತ್ತಿದ್ದವಳನ್ನು, ಅವಳ ಅಣ್ಣ ಬಿಟ್ಟು ಹೋಗಿ ಬಿಟ್ಟ... ರೋಗಿಷ್ಟ ಹುಡುಗಿ ಯಾರಿಗೂ ಬೇಡವಾಗಿತ್ತು.. ಸಾವಿನ ಸಮೀಪಕ್ಕೆ ಇಬ್ಬರದೂ ಪ್ರಯಾಣ ನಡೆದಿದ್ದುದರಿಂದ, ನಾನು ಅವಳನ್ನು ಸಹ ಪ್ರಯಾಣಿಕಳಾಗಿ ಆಯ್ಕೆ ಮಾಡಿಕೊಂಡೆ. ಇದರಿಂದ ಯಾರಿಗೂ ಯಾವ ಅನ್ಯಾಯವೂ ಆಗಲಾರದೆಂದು ನಂಬಿದ್ದೆ....''

''....''

"ನೀನೇ ಹೇಳು... ನಾನು ಮಾಡಿದ್ದು ತಪ್ಪಾ?'' ಮಾತನಾಡು ಸಾಧನಾ...''

ಸಾಧನಾ ಮಂಜಿನಂತೆ ಕುಳಿತಿದ್ದಳು.

"ಇಷ್ಟು ವರ್ಷಗಳು ಸಂಯಮದಿಂದಿದ್ದ ನಾನು, ಏತಕ್ಕೆ ಯಾವ ಕಾರಣಕ್ಕಾಗಿ ನಿನ್ನಿಂದ ಆಕರ್ಷಿತನಾದೆನೋ ಅವಿನ್ನು ಒಗಟಾಗಿಯೇ ಉಳಿದಿದೆ... ತಲೆ ಸಿಡಿದು ಹೋಗೋ ತರಹಾ ಆಗ್ತಾಯಿದೆ.. ನಂಗೆ... ನಿನ್ನ ಸ್ನೇಹ ಪ್ರೀತಿ ಬೇಕಿತ್ತು... ನೀನು ಹಾಗೆಯೇ ಇದ್ದು ಬಿಡ್ತೀನೀಂತ ಮುಗ್ಧವಾಗಿ ಹೇಳಿ ಬಿಟ್ಟಿದ್ದೆ. ಆದರೆ ಸಮಾಜ . ನಮ್ಮ ಈ ಜನ ಸುಮ್ಮನೆ ಬಿಟ್ಟಾರಯೇ... ಡಾಕ್ಟರ್ ರಮೇಶ್ ಅವರ...'' – ಮುಂದಿನ ವಾಕ್ಯ ಪೂರ್ತಿ ಹೇಳಲು ಅವನ ನಾಲಿಗೆ ಹಿಂಜರಿಯಿತು. ಜ್ವರದ ತಾಪದಿಂದ ಕಣ್ಣುಗಳು ಕೆಂಪೇರಿ... ಮುಖವೂ ಕೆಂಪಾಗಿತ್ತು. ಒಂದಕ್ಕೊಂದು ಹೊಸೆದುಕೊಂಡುತ್ತಿದ್ದ ಅವನ ಕೈಗಳು... ಚಡಪಡಿಕೆಯನ್ನು ವ್ಯಕ್ತಪಡಿಸುತ್ತಿರುವ ಅವನ ಮುಖಭಾವದಿಂದ ಸಾಧನಾ ಪೂರ್ತಿ ಕರಗಿ ಹೋದಳು. ಹಸುವಿನ ಬಳಿ ಧಾವಿಸುವ ಎಳೆಗರುವಿನಂತೆ ಕುಳಿತಿದ್ದ ಅವನತ್ತ ಧಾವಿಸಿ, ಅವನನ್ನು ತನ್ನ ಎದೆಗಪ್ಪಿಕೊಂಡು ಬಿಕ್ಕಿದಳು.

"ಡಾಕ್ಟರ್ ರಮೇಶ್ ಇಟ್ಕೊಂಡಿರೋ ಹುಡುಗಿ ಅಂತಾ ಇದ್ರೂ ಅಂತಾನಾ ಸರ್ ನಿಮಗೆ ಭಯ ಇದ್ದುದ್ದು?.. ನೀವು ಏನೆಲ್ಲಾ ಯೋಚಿಸಿದ್ದೀರಿ.. ನಾನ್ಯಾವ ಭಾವನೆಗಳನ್ನು ಭವಿಷ್ಯಕ್ಕೆ ತೆಗೆದುಕೊಂಡು ಹೋಗಿ ನರಳಲಿಲ್ಲ... ನಿಮ್ಮ ನೆರಳಾಗಿ ದುಡಿಯುವಾಸೆ ಮಾತ್ರವೇ ನನಗಿದ್ದುದು..'' ಅಳುವಿನ ಮಧ್ಯೆ ಬಿಕ್ಕುತ್ತಾ ಚಿಕ್ಕ ಮಗುವಿನಂತೆ ನಿರಾತಂಕವಾಗಿ ತನ್ನೆದೆಯಲ್ಲಿ ಹುದುಗಿ ಉದ್ವೇಗದಿಂದ ಕಂಪಿಸುತ್ತಿದ್ದ ರಮೇಶನ ತಲೆಗೂದಲಲ್ಲಿ ಅವಳ ಕೈಬೆರಳುಗಳು ಓಡಾಡಿದವು.

"ನನ್ನನ್ನು ಒಂದು ಮಾತು ಕೇಳಬಾರದಿತ್ತಾ ಸರ್? ನಿಮ್ಮ ಇರುವಿಕೆ ಈ ಆಸ್ಪತ್ರೆಗೆ ನನಗಿಂತ ಅಮೂಲ್ಯವಾದದ್ದು. ದುಡುಕಿ ಏನೇನೋ ಮಾಡಿಕೊಂಡು ಬಿಟ್ಟಿರಿ.... ನಿಮಗೇನಾದ್ರೂ ಆದ್ರೆ ಊಹಿಸಲೂ ಸಾಧ್ಯವಿಲ್ಲ..'' – ಸಾಧನಾಳ ಕಣ್ಣುಗಳಿಂದ ನೀರು ಹುಯಿತು.

"ಸಾಧನಾ... ನೀನು ಅತ್ಯಂತ ಭಾವುಕಳು.... ನನಗಾಗಿ, ನನ್ನ ಪ್ರೀತಿಗಾಗಿ ಕಾಯುತ್ತಿದ್ದ ನಿನ್ನನ್ನು ಮದುವೆಯಾಗಲೇಬೇಕಿತ್ತು. ಆ ವಿಷಯದಲ್ಲಿ ಜನರಿಗೆ ಆಗಲೇ ಸಾಕಷ್ಟು ಆಹಾರವಾಗಿದ್ದ ನಿನ್ನನ್ನು ಯಾವುದಕ್ಕೂ ಬಲಿಯಾಗುವುದಕ್ಕೆ ನಾನು ಆಸ್ಪದ ನೀಡುತ್ತಿರಲಿಲ್ಲ... ಹಾಗೂ ನಿನಗೇ ಅನ್ಯಾಯವಾಗುತ್ತಿತ್ತು. ಸಾಧನಾ... ಹರೆಯದಿಂದಲೂ... ರೋಗಿಯಂತೆ ಬೆಳೆದ ನನಗೇ ಜೀವನ ಸಾಕಾಗಿ ಹೋಗಿದೆ.. ಬದುಕುವ ಆಸೆಯೇ ಇಲ್ಲ... ನಂಗೆ ಮುಕ್ತಿ.. ಬೇಕು.. ಸಾಧನಾ...'' –ಭಾವಪರವಶತೆಯಿಂದ ಹೇಳುತ್ತಿದ್ದ ಅವನ ದುಃಖ ನೋವು ನಿರಾಶೆಯ ಆಳವನ್ನು ಗುರುತಿಸಿದ ಸಾಧನಾಳ ಎದೆ ಅವ್ಯಕ್ತ ಸಂಕಟದಿಂದ ಬಿರಿಯಿತು.

"ಇಲ್ಲ ಸರ್... ನೀವು ಜ್ವರದ ತಾಪದಲ್ಲಿ ಏನೇನೋ ಮಾತಾಡ್ತಾ ಇದ್ದೀರಿ... ನಿಮಗೇನೂ ಆಗಲ್ಲ... ನೀವು ಚೆನ್ನಾಗಿಯೇ ಇರ್‍ತೀರಿ.. ನಾನು ನಿಮ್ಜೊತೆ ಇದ್ದೇ ಇರ್‍ತೀನಿ'' – ಏನೇನೋ ಮಾತುಗಳನ್ನಾಡಿ ಸಾಂತ್ವನಗೊಳಿಸತೊಡಗಿದಳು. ನಿಧಾನವಾಗಿ ಮೇಲಕ್ಕೇಳಿಸಿ ಕರೆದುಕೊಂಡು ಹೋಗಿ ಹಾಸಿಗೆಯ ಮೇಲೆ ಮಲಗಿಸಿ, ಹಣೆಗೆ ತಣ್ಣೀರು ಬಟ್ಟೆಯನ್ನು ಹಾಕಿದಳು.

ರಮೇಶ್... ಅಸಹಾಯಕ ರೋಗಿಯಂತೆ ಮೈಚೆಲ್ಲಿ ಮಲಗಿದ್ದ.... ಸಾಧನಾ ಹೇಳಿದಂತೆ ಕೇಳುತ್ತಿದ್ದ

ಅವನು ಮೂಕನಂತೆ ಸಹಕರಿಸಿದ.... ತಣ್ಣೀರಿನ ಸ್ಪರ್ಶದಿಂದ ಸಿಡಿಯುವಂತಾಗಿದ್ದ ಅವನ ತಲೆನೋವು ಸ್ವಲ್ಪ ಕಡಿಮೆಯಾದಂತೆ ಭಾಸವಾಯಿತು. ಭಾವೋದ್ವೇಗದ ಏರಿಳಿತಕ್ಕೋ... ಜ್ವರದಿಂದ ಹರಡಿದ ಸೋಂಕು... ಹೃದಯಕ್ಕಾಗಿದ್ದಕ್ಕೋ ಕ್ಷೀಣವಾಗಿ ಎದೆ ನೋವು ಕಾಣಿಸಿಕೊಂಡಿದ್ದರಿಂದ ಮಾತನಾಡುವ ಪ್ರಯತ್ನ ಮಾಡದೆ ನೆಟ್ಟ ಕಣ್ಣುಗಳಿಂದ ಸಾಧನಾಳನ್ನು ನೋಡುತ್ತಿದ್ದ. ಕೊನೆಯ ಬಾರಿಯೇನೊ ಎಂಬಂತೆ, ಕಣ್ಣು ತುಂಬಾ ತುಂಬಿಕೊಳ್ಳುವವನಂತೆ ನೋಡುತ್ತಿದ್ದ ಅವನ ಶೂನ್ಯ ತುಂಬಿದ ಕಣ್ಣುಗಳನ್ನು, ಮೃದುವಾಗಿ ನೇವರಿಸಿದ ಸಾಧನಾ,

"ಪ್ರೀತಿ ಸ್ನೇಹಾಂದ್ರೆ....ಮಧ್ಯೇಲೇ ಮುಕ್ತಾಯವಾಗ್ಬೇಕ ಸರ್? ಹಾಗಾದ್ರೆ ಒಂದು ಗಂಡು ಹೆಣ್ಣು ಪ್ರೀತಿಸಲೇ ಬಾರದೇ? ಸ್ನೇಹದಿಂದ ಓಡಾಡಲೇ ಬಾರದೇ? ತಪ್ಪೇನಿದೆ? ನೀವು... ನಿಮಗೇ ಅನ್ಯಾಯ ಮಾಡಿಕೊಳ್ಳುವ ಅವಶ್ಯಕತೆ ಇತ್ತೇ ಸರ್... ಹೇಳಿ..." –ಉತ್ಕಂಠತೆಯಿಂದ ಹೇಳಿದಳು.

"........"

"ನಮ್ಮ ವೃತ್ತಿಯಲ್ಲಿ ಏನೇನೋ ಮರೆಯಬಹುದಿತ್ತಲ್ಲ ಸರ್.... ಇಲ್ಲ ಬರುವ ರೋಗಿಗಳ ನೋವಿನಲ್ಲಿ ನಮ್ಮ ನೋವು ಲೀನವಾಗುತ್ತಿತ್ತಲ್ಲವೇ?.. ಜಾಸ್ತಿ ಮಾತನಾಡಿ.. ನಿಮ್ಮ ನೆಮ್ಮದಿ ಕೆಡಿಸಲಾರೆ.... ಮೊದಲು ಆರೋಗ್ಯ ಸುಧಾರಿಸಲಿ.... ನಂತರ ... ಉಳಿದದ್ದು...."

ಅಷ್ಟರಲ್ಲಿ ದೊಡ್ಡ ಬ್ಯಾಗೊಂದನ್ನು ಹಿಡಿದು ಬಂದ ಕೆಲಸದ ಹುಡುಗ,

"ಅಪ್ಪಾವ್ರು ಬರ್ತಾ ಇದ್ದಾರೆ... ಜೊತೆಗೆ ದೊಡ್ಡ ಡಾಕ್ಟ್ರು ಇದ್ದಾರೆ..." –ಎಂದ ಕಾತುರದಿಂದ. ಸಾಧನಾ ಎದ್ದು ಪಕ್ಕಕ್ಕೆ ಬಂದು ನಿಂತಳು. ಡಾಕ್ಟರೊಡನೆ ಮಾತನಾಡುತ್ತಾ ಬಂದ, ರಮೇಶನ ತಂದೆಯ ಮುಖ ದುಗುಡದಿಂದ ತುಂಬಿತ್ತು. ತಮಗಾಗುತ್ತಿದ್ದ ಸಂಕಟ ದುಃಖವನ್ನು ಪ್ರಯತ್ನಪೂರ್ವಕವಾಗಿ ತಡೆ ಹಿಡಿಯುತ್ತಾ ಮಾತನಾಡುತ್ತಿದ್ದರು.

"ಪುನಃ ಅವರಿಗೆ ವೈರಸ್ ಫೀವರ್ ಬಂದಿದೆ..... ಜ್ವರಕ್ಕೇನೂ ಹೆದರೋದು ಬೇಡಾ.. ಆದರೆ ಇ.ಸಿ.ಜಿ.. ರಿಪೋರ್ಟ್ ತೃಪ್ತಿಕರವಾಗಿಲ್ಲ. ಅವರಿಗೆ ಎದೆನೋವು ಆಗಾಗ್ಯೆ ಬರ್ತಾಯಿದೆ... ಆದರೆ ಅವರು ಹೇಳ್ತಾಯಿಲ್ಲ...." –ಮಾತನಾಡುತ್ತಾ ಹತ್ತಿರ ಬಂದ ಡಾಕ್ಟರ್,



ನೀವು ಆ ದ್ರೌಪದಿಗೆ 'ಅಕ್ಷಯ ವಸ್ತ್ರ' ಅಂತ ಕೊಟ್ಟಿದ್ದೆಲ್ಲಾ ನನ್ನದೇ ಸೀರೆಗಳು ತಾನೇ ? — ನಿಜ ಹೇಳಿ !!



ಇಲ್ಲ ರುಕ್ಮಿಣೀ... ನನ್ನ ಎಲ್ಲಾ ಹದಿನಾರು ಸಾವಿರ ಹೆಂಡಿರ ಒಂದೊಂದು ಸೀರೆ ತಗೊಂಡು ಹೋಗಿದ್ದೆ–'ಅಕ್ಷೇ!!

"....ಡಾಕ್ಟರ್.. ರಮೇಶ್... ಹೌ.. ಡು ಯು ಫೀಲ್ ನೌ?"... –ಎನ್ನುತ್ತಾ ಅವನ ಮುಖದತ್ತ ಬಾಗಿ ಮೃದುವಾಗಿ ಕೇಳಿದರು.

ನಿಧಾನವಾಗಿ ಅವರತ್ತ ಕಣ್ಣು ಹೊರಳಿಸಿದ ರಮೇಶ್ ಕ್ಷೀಣವಾದ ನಗೆ ಬೀರಿ,

"ಚೆನ್ನಾಗಿದ್ದೀನಿ...." –ಎಂದ.

"ಎದೆ ನೋವಿತ್ತಂತೆ.... ನಿನ್ನೆ ರಾತ್ರಿ ಫೋನು ಮಾಡಿದ್ದಾಗ ಹೇಳಿದ್ದೀರಿ...ಈಗಲೂ ಇದೆಯಾ?"

ರಮೇಶ್ ಮಾತನಾಡಲಿಲ್ಲ... ಹೃದಯದಿಂದ ಹೊರಟ ನೋವಿನ ಅಲೆಗಳು.. ಮುಖದಲ್ಲೂ... ಕಣ್ಣುಗಳಲ್ಲೂ ಹರಡಿ ಅವನನ್ನು ದುರ್ಬಲನನ್ನಾಗಿ ಮಾಡಿದ್ದವು.

"ಎದೆ ನೋವಿದ್ದರೆ... ನೀವು.. ನಿಮಗೆ ಸರ್ಜರಿ ಮಾಡಿದವರ ಬಳೀನೇ ಹೋಗ್ಬೇಕಾಗುತ್ತೆ..."

"ಅಂದರೆ.... ವೆಲ್ಲೂರಿಗಾ?"

"ಹೂಂ...."

ರಮೇಶ್ ಪುನಃ ಮೌನ ಧರಿಸಿದ. 'ವೈದ್ಯನಾಗಿದ್ದ ಅವನಿಗೇ ತಿಳಿಯದ ವಿಷಯವಾಗಿರಲಿಲ್ಲ. ಈ ಬಾರಿಯ ಹೊಡೆತದಿಂದ ತಾನು ಚೇತರಿಸಿಕೊಳ್ಳುವುದಿಲ್ಲವೆಂಬುದು ಅವನ ಅಂತರಂಗಕ್ಕೆ ತಿಳಿದಿತ್ತು. ಅಷ್ಟು ದೂರ ಹೋಗಿ, ಹಿಂಸೆಪಟ್ಟು ತನ್ನ ಹೆಣವನ್ನು ಪುನಃ ಕಾರಿನಲ್ಲಿ ತರುವ ತೊಂದರೆಯನ್ನು ತನ್ನ ಮನೆಯವರಿಗ್ಯಾಕೆ ನೀಡಬೇಕು?'

"ಏನು ಯೋಚಿಸ್ತಾಯಿದ್ದೀರಿ?..."

"ಬೇಡ.. ಇಲ್ಲೇ ಇರ್ತೀನಿ...." – ಎಂದ. ಆದರೆ ಆ ನರ್ಸಿಂಗ್ ಹೋಮ್‌ನ ವೈದ್ಯರಿಗೆ ತೃಪ್ತಿಯಾಗಲಿಲ್ಲ. ತಂದೆಯನ್ನು ಪಕ್ಕಕ್ಕೆ ಕರೆದು,

"ಬೆಟರ್ ಟೇಕ್... ಹಿಮ್.. ಟು... ವೆಲ್ಲೂರ್... ನಮ್ಮೆಲ್ಲರ ಅಭಿಪ್ರಾಯವೂ ಅದೇ.." –ನಿಶ್ಚಿತವಾದ ಸ್ವರದಲ್ಲಿ ಹೇಳಿದರು.

"ಓ...ಕೆ... ಡಾಕ್ಟರ್... ನಂಗೆ... ನನ್ನ ಮಗ ಉಳೀಬೇಕು... ಹಣ ಎಷ್ಟಾದರೂ ಖರ್ಚಾಗಲಿ ಡಾಕ್ಟರ್.." – ರಮೇಶನ ತಂದೆ ದುಃಖದಿಂದ ಹೇಳುತ್ತಿದ್ದರು. ರಮೇಶ್ ತನ್ನ ವಿಷಯವಲ್ಲವೆಂಬಂತೆ, ಏನೋ ನಿರ್ಧಾರ ತಳೆದವನಂತೆ ಕಣ್ಣು ಮುಚ್ಚಿ ಮಲಗಿದ್ದ...

ಮರುಕ್ಷಣದಲ್ಲಿ ಎಲ್ಲಾ ತಯಾರಾಗಿ ಕಾರೂ ರೆಡಿಯಾಯಿತು... ಸಾಧನಾ ಅಲ್ಲಿಂದ ಕಾಲು ಕೀಳದೇ ನಿಂತಿದ್ದಳು.

"ನಾನೂ.. ಬರಲೇ.... ಸರ್...." – ದುಃಖವನ್ನು ಹತೋಟಿಗೆ ತಂದುಕೊಳ್ಳುತ್ತಾ, ಗದ್ಗದ ಕಂಠದಿಂದ ಕೇಳಿದಳು.

"ಊಹೂಂ..... ಬೇಡಾ.... ನನ್ನ ಮುಖ... ನಿನಗೇ ಹೀಗೇ....ನೆನಪಿರಲಿ....."

"ಕೆಟ್ಟ ಮಾತಾಡ್ಬೇಡಿ.... ನೀವು ಹುಷಾರಾಗಿ ಬರ್ತೀರಾ... ನನ್ನ ಹೃದಯ ಹೇಳುತ್ತೆ...."

ರಮೇಶ್ ವಿಷಾದದಿಂದ ನಕ್ಕ..

'ಆದರೆ ನನ್ನ ಹೃದಯ.... ನನ್ನೊಡನೆ ರಾಜಿ ಮಾಡಿಕೊಳ್ಳುವುದಿಲ್ಲ... ಹಿಗ್ಗುವ, ಕುಗ್ಗುವ ಶಕ್ತಿಯನ್ನು ಕಳೆದುಕೊಳ್ತಾಯಿದೆ... ಯಾವ ಕ್ಷಣದಲ್ಲೇ ಆಗಲಿ.. ಒಡೆದು ಹೋಗಬಹುದು.... ಹೋಗುತ್ತದೆ ಕೂಡಾ.... ಈ ವಿಷಯ ತಿಳಿಸಿ ನಿನ್ನ ಪುಟ್ಟ ಕೋಮಲ ಹೃದಯಕ್ಕೆ ಧಕ್ಕೆ ತರಲಾರೆ....' – ಎಂದು ತನ್ನ ಮನಸ್ಸಿನಲ್ಲಿಯೇ ಹೇಳಿಕೊಂಡ.

(ಮುಗಿಯಿತು)

## <u>ಹೊಸ ವಸ್ತುಗಳು</u> :

### ನ್ಯೂ ನೀವಿಯಾ ಸ್ಕಿನ್ ಡ್ಯೂ

ನೀವಿಯಾ ಸ್ಕಿನ್‌ಕೇರ್ ಉತ್ಪನ್ನಗಳನ್ನು ತಯಾರಿಸುವ ಜೆ.ಎಲ್. ಮಾರಿಸನ್ (ಪ್ರೈ) ಲಿಮಿಟೆಡ್ ಸಂಸ್ಥೆ ಇದೀಗ ತ್ವಚೆ ರಕ್ಷಣೆಗಾಗಿ ಹೊಸ ಲೋಷನ್ ಒಂದನ್ನು ಬಿಡುಗಡೆ ಮಾಡಿದೆ.

ಸ್ಕಿನ್ ಡ್ಯೂ ಒಂದು ಅಸಾಧಾರಣ ಆದ್ರ್ರತಾಂಶವುಳ್ಳದ್ದಾಗಿದ್ದು, 'ನ್ಯಾಚುರಲ್ ಮಾಯಿಶ್ಚರೈಸಿಂಗ್ ಫ್ಯಾಕ್ಟರ್' (NMF) ಎಂಬ ವಿಶೇಷ ಘಟಕವನ್ನೊಳಗೊಂಡಿದೆ. ತ್ವಚೆಯ ಸಹಜ ಗುಣಧರ್ಮಕ್ಕನುಸಾರವಾಗಿ ಈ ಘಟಕ ಕೆಲಸ ನಿರ್ವಹಿಸುತ್ತದೆ. ಭಾರತದ ಸುಂದರ ತರುಣಿಯರು ಬಯಸುವ ಈ ಸ್ಕಿನ್ ಡ್ಯೂ ಲಘು ಹಾಗೂ ಜಿಡ್ಡುಗಟ್ಟುವುದಿಲ್ಲ.

ನೀವಿಯಾ ಸ್ಕಿನ್ ಡ್ಯೂ 120 ಮಿಲಿಗೆ 42/– ರೂ.ಯಂತೆಯೂ 60 ಮಿಲಿಗೆ ರೂ. 27/–ರಂತೆ ದೇಶಾದ್ಯಂತ ದೊರೆಯುತ್ತದೆ.



### ಖರ್ಜೂರ ಹೋಳಿಗೆ :

**ಬೇಕಾಗುವ ಸಾಮಾನು :** ಒಳ್ಳೆಯ ಖರ್ಜೂರ ಅರ್ಧ ಕಿಲೋ, ಅರ್ಧ ಕಪ್ಪು ಸಕ್ಕರೆ, 1 ಸೌಟು ಗಸಗಸೆ, 5 ಯಾಲಕ್ಕಿ, 2 ಸೌಟು ಪುರಾಣಿ ಹಿಟ್ಟು, 2 ಕಪ್ಪು ಮೈದಾ, ಅರ್ಧ ಕಪ್ಪು ರವೆ, ಸ್ವಲ್ಪ ಅಕ್ಕಿ ಹಿಟ್ಟು, ಉಪ್ಪು, ತುಪ್ಪ.

**ಮಾಡುವ ವಿಧಾನ :**

ಖರ್ಜೂರದ ಬೀಜ ತೆಗೆದು, ಒರಳಲ್ಲಿ ರುಬ್ಬಬೇಕು. ಖರ್ಜೂರ ಸಣ್ಣಗಾದ ನಂತರ ಹುರಿದ ಗಸಗಸೆ, ಯಾಲಕ್ಕಿ, ಸಕ್ಕರೆ, ಪುರಾಣಿ ಹಿಟ್ಟು ಹಾಕಿ ರುಬ್ಬಿ ಹೂರಣವನ್ನು ಸಿದ್ಧಗೊಳಿಸಬೇಕು. ಮೈದಾ ಹಿಟ್ಟು ಮತ್ತು ರವೆಗೆ ತಕ್ಕಷ್ಟು ಉಪ್ಪು, ತುಪ್ಪ ಸೇರಿಸಿ, ಚೆನ್ನಾಗಿ ನಾದಿ ಕಣಕವನ್ನು ಸಿದ್ಧಗೊಳಿಸಬೇಕು. ಸ್ವಲ್ಪ ಕಣಕ ಹಿಡಿದು ಅದರಲ್ಲಿ ಹೂರಣ ತುಂಬಿ ಸ್ವಲ್ಪ ದಪ್ಪನಾಗಿ ಬೇಯಿಸಬೇಕು. ಬೇಯಿಸುವಾಗ ತುಪ್ಪ ಹಚ್ಚಬೇಕು. ಈ ಹೋಳಿಗೆ 8–10 ದಿನವಿಟ್ಟರೂ ಕೆಡುವುದಿಲ್ಲ. ಇದು ಉತ್ತಮ ಪೌಷ್ಟಿಕ ಆಹಾರ.

**—ಅತುಲ ಎನ್.ಎಸ್. ಶೃಂಗೇರಿ**

### "ಕೋಕೋನೆಟ್ ಕಲೆಕ್ಷನ್"

### ಕೋಕೋನಟ್ ಪುಡ್ಡಿಂಗ್

**ಬೇಕಾಗುವ ಸಾಮಾನು –** ಒಣಕೊಬ್ಬರಿ ತುರಿ – 1 ಕಪ್, ಹಾಲು – 1 ಕಪ್, ಸಕ್ಕರೆ – 1/2 ಕಪ್, ಬೇಕಿಂಗ್ ಪೌಡರ್ – 1/2 ಚಮಚ, ಬೆಣ್ಣೆ – 2 ಚಮಚ, ಅಡಿಗೆ ಸೋಡಾ – 1/2 ಚಮಚ.

**ವಿಧಾನ –** ಕೊಬ್ಬರಿ, ಸಕ್ಕರೆ, ಬೆಣ್ಣೆ, ಸೋಡಾ, ಹಾಲು ಒಟ್ಟಿಗೇ ಬೆರೆಸಿ ಅಗಲ ಪಾತ್ರೆಯಲ್ಲಿ ಒಲೆಯ ಮೇಲಿಟ್ಟು ಸ್ವಲ್ಪ ಬಿಸಿ ಮಾಡಿ ಕೆಳಗಿಳಿಸಿರಿ. ಅದು ಸಂಪೂರ್ಣ ಆರಿದ ನಂತರ ಜರಡಿ ಹಿಡಿದಿರುವ ಮೈದಾ ಹಾಗೂ ಬೇಕಿಂಗ್ ಪೌಡರ್ ಬೆರೆಸಿ ಕಲಕಿರಿ. ತುಪ್ಪ [illegible] ಉದುರಿಸಿ ತೆಗೆದಿರುವ ಕುಕರ್ [illegible] ಆಗಲೀ ಅಥವಾ ಪುಡ್ಡಿಂಗ್ ಮೌಲ್ಡ್ ನಲ್ಲಾಗಲೀ ಹಿಟ್ಟನ್ನು ಹಗುರಾಗಿ ಹಾಕಿ ಅಲ್ಯುಮಿನಿಯಂ ಫಾಯಿಲ್‌ನಿಂದ ಗಟ್ಟಿಯಾಗಿ ಮುಚ್ಚಿ ಕುಕರ್‌ನಲ್ಲಿಟ್ಟು (3 ಕಪ್ ನೀರಿನಲ್ಲಿ) 45 ನಿಮಿಷ ಬೇಯಿಸಿರಿ.

### ಕೋಕೋನಟ್—ನಟ್ಸ್ ಕಟಂಗ್ಸ್

**ಬೇಕಾಗುವ ಸಾಮಾನು –** ಗಟ್ಟಿ ತೆಂಗಿನ ಹಾಲು – 1 ಕಪ್ (ತೆಂಗಿನ ತುರಿಯನ್ನು ಅರೆದು ತೆಗೆದಿರುವ ಹಾಲು) ಹುರಿದ ಕಡಲೇ ಬೀಜದ ಪುಡಿ – 1 ಕಪ್, ಸಕ್ಕರೆ – 2 ಕಪ್, ತುಪ್ಪ – 1/2 ಕಪ್, ಏಲಕ್ಕಿ 4–5, ಅಲಂಕರಿಸಲು ದ್ರಾಕ್ಷಿ.

**ವಿಧಾನ –** ದಪ್ಪ ತಳದ ಪಾತ್ರೆಯಲ್ಲಿ ತೆಂಗಿನ ಹಾಲು, ಸಕ್ಕರೆ, ನಟ್ಸ್ ಪುಡಿ ಸೇರಿಸಿ ಒಲೆಯ ಮೇಲಿಟ್ಟು ಕಲಕುತ್ತಿರಿ. ನೀರಿನಾಂಶವೆಲ್ಲಾ ಹೋಗಿ ಗಟ್ಟಿಯಾಗತೊಡಗಿದಾಗ ತುಪ್ಪ ಏಲಕ್ಕಿ ಪುಡಿ ಸೇರಿಸಿ ಮತ್ತು ಮಗುಚಿ. ಪಾತ್ರೆಗೆ ಅಂಟದಂತೆ (ಮೈಸೂರು ಪಾಕ್ ಹದಕ್ಕೆ) ಆದಾಗ ಕೆಳಗಿಳಿಸಿ, ತುಪ್ಪ ಸವರಿರುವ ತಟ್ಟೆಗೆ ಹರಡಿ ಡೈಮಂಡ್ ಆಕಾರಕ್ಕೆ ಕತ್ತರಿಸಿ. ಪ್ರತಿ ತುಂಡಿನಲ್ಲೂ ಒಂದೊಂದು ದ್ರಾಕ್ಷಿ ಇಟ್ಟು ಅದುಮಿ ಅಲಂಕರಿಸಿ.

### ಕೋಕೋನಟ್ — ಕೋಕ್ ಹಲ್ವ

**ಬೇಕಾಗುವ ಸಾಮಾನು–** ಕೋಕೋನಟ್ ತುರಿ




(ಹಸಿ ಕೊಬ್ಬರಿ ತುರಿ) – 1 ಕಪ್, ಸಕ್ಕರೆ – 1 ಕಪ್, ಕೋಕೋ ಪುಡಿ – 2 ಚಮಚ, ತುಪ್ಪ – 2 ಚಮಚ, ಪಿಸ್ತಾ, ಬಾದಾಮಿ ಚೂರು ಅಲಂಕರಿಸಲು.

**ವಿಧಾನ –** ಅಕ್ಕಿಯನ್ನು ಒಂದು ಗಂಟೆ ಕಾಲ ನೆನೆಸಿ, ನಂತರ ಕೊಬ್ಬರಿ ತುರಿಯೊಂದಿಗೆ ನುಣ್ಣಗೆ ರುಬ್ಬಿ. ರುಬ್ಬಿರುವ ಅಕ್ಕಿಗೆ 2 ಕಪ್ ರುಬ್ಬಿರುವ ನೀರು ಸೇರಿಸಿ ಕೋಕ್ ಬೆರೆಸಿ ದಪ್ಪ ತಳದ ಪಾತ್ರೆಯಲ್ಲಿ ಹಾಕಿ ಒಲೆಯ ಮೇಲಿಟ್ಟು ಕೈ ಬಿಡದಂತೆ ಮಗುಚುತ್ತಿರಿ. ಹಲ್ವ ಕೈಗೆ ಅಂಟದಂತೆ ಆದಾಗ ತುಪ್ಪ ಸೇರಿಸಿ ಮತ್ತೊಮ್ಮೆ ಮಗುಚಿ ತುಪ್ಪ ಸವರಿದ ತಟ್ಟೆಗೆ ಹರಡಿ, ಪಿಸ್ತಾ ಬಾದಾಮಿಯಿಂದ ಅಲಂಕರಿಸಿ.ಬೇಕಾದ ಆಕಾರಕ್ಕೆ ಕತ್ತರಿಸಿ.

### ಕೋಕೋನಟ್ ಕಾಂಬಿನೇಷನ್

**ಬೇಕಾಗುವ ಸಾಮಾನು –** ಹಸಿ ಕೊಬ್ಬರಿ ತುರಿ – 1 ಕಪ್, ಅಕ್ಕಿ – 1ಕಪ್, ನೀರು – 2 ಕಪ್, ಜೀರಿಗೆ – 1 ಚಮಚ, ಸಾಸಿವೆ – 1 ಚಮಚ, ತುಪ್ಪ – 2 ಚಮಚ, ಹಸಿಮೆಣಸಿನ ಕಾಯಿ 2 ಅಥವಾ 3, ಕೊಬ್ಬರಿ ಎಣ್ಣೆ – 2 ಚಮಚ, ಮಂದ ಚೀಸ್ (Cheese) – 2 ಚಮಚ, ಉಪ್ಪು – ರುಚಿಗೆ, ಕೊತ್ತಂಬರಿ–ಅಲಂಕರಿಸಲು, ಗೋಡಂಬಿ – 8 ಅಥವಾ 10.

**ವಿಧಾನ –** ಬಾಣಲೆಯಲ್ಲಿ ತುಪ್ಪ ಬಿಸಿ ಮಾಡಿ ಸಾಸಿವೆ ಸೇರಿಸಿ. ಅದು ಚಟಗುಟ್ಟಿದ ನಂತರ ಜೀರಿಗೆ, ಹಸಿಮೆಣಸು, ಗೋಡಂಬಿ ಹಾಕಿ ಹುರಿದು ಎಲ್ಲವನ್ನೂ ಅಕ್ಕಿಯೊಂದಿಗೆ ಸೇರಿಸಿ. ಕೊಬ್ಬರಿ ತುರಿ, ಕೊಬ್ಬರಿ ಎಣ್ಣೆ, ಉಪ್ಪು, ನೀರು ಬೆರೆಸಿ ಚೆನ್ನಾಗಿ ಕದಡಿ ಕುಕ್ಕರ್ ಬಟ್ಟಲಿನಲ್ಲಿಟ್ಟು ಬೇಯಿಸಿ. ಬಡಿಸುವ ಮೊದಲು ಚೀಜ್, ಕೊತ್ತಂಬರಿ ಸೊಪ್ಪಿನಿಂದ ಅಲಂಕರಿಸಿ.

**—ಸುವರ್ಣ ಅಮರನಾಥ್**

### ನೆಲ್ಲಿಂಡಿ

**ಮಾಡುವ ವಿಧಾನ :**

ನೆಲ್ಲಿಕಾಯಿಗಳನ್ನು ಚೆನ್ನಾಗಿ ತೊಳೆದು ಒದ್ದೆಯನ್ನು ಬಟ್ಟೆಯಲ್ಲಿ ಹಾಕಿ ಉಜ್ಜಿ. ಒರಳಿನಲ್ಲಿ ಹಾಕಿ ಒನಕೆಯಲ್ಲಿ ಕುಟ್ಟಿ ಜರಡಿಯಲ್ಲಿ ಹಾಕಿ ಗಾಳಿಸಿ ಬೀಜವನ್ನು ತೆಗೆದು ಗಾಳಿಸಿದ ಪುಡಿಯನ್ನು ಉಪ್ಪು ತಾಗದ ಮಣ್ಣಿನ ಕುಡಿಕೆಯಲ್ಲಿ ಹಾಕಿ ಮುಚ್ಚಿ ಇಡಬೇಕು. 8–10 ದಿನಗಳವರೆಗೆ ದಿನಕ್ಕೊಮ್ಮೆ ಕೈಯಾಡಿಸಬೇಕು. ಆಮೇಲೆ ಇದು ಮೆತ್ತಗಾಗುತ್ತದೆ. ನಂತರ ಉಪ್ಪು ಬೆರೆಸಿ ಬಿಸಿಲಿನಲ್ಲಿ ಇಡಬೇಕು. ಸ್ವಲ್ಪ ಒಣಗಿದ ನಂತರ ಬಿಲ್ಲೆಗಳ ಆಕಾರದಲ್ಲಿ ಮಾಡಿ ಬಿಸಿಲಿಗೆ ಒಣಗಲು ಇಡಬೇಕು. ಚೆನ್ನಾಗಿ ಒಣಗಿದ ನಂತರ ಭರಣಿಯಲ್ಲಿ ಹಾಕಿ ಮುಚ್ಚಿ ಪಾಲಿಥಿನ್ ಪೇಪರ್‌ನ್ನು ಬಾಯಿಗೆ ಬಿಗಿಯಬೇಕು. ಇದು ಎಷ್ಟು ವರ್ಷ ಇಟ್ಟರೂ ಕೆಡುವುದಿಲ್ಲ. ಬೀಜ ಉಳಿದರೆ ಮೆತ್ತಗಾದ ಮೇಲೂ ಜರಡಿಯಲ್ಲಿ ಹಾಕಿ ಉಜ್ಜಿದರೆ ಬೀಜ ಜರಡಿಯಲ್ಲಿ ನಿಲ್ಲುತ್ತದೆ. ನಂತರ ಬೇಕಾದರೆ ಉಪ್ಪು ಬೆರೆಸಬಹುದು. ಇದನ್ನು ಮಕ್ಕಳಿಗೆ ಹಾಗೂ ಎಳೆ ಕರುಗಳಿಗೆ ಅಜೀರ್ಣವಾದರೆ ಸ್ವಲ್ಪ ಮಜ್ಜಿಗೆಗೆ1 ಬಿಲ್ಲೆ ಹಾಕಿ ಕದಡಿ ಕೊಟ್ಟರೆ ವಾಸಿ ಆಗುತ್ತದೆ.

**—ಎಸ್. ಪಾರ್ವತಿ**

### ಆ್ಯಪಲ್ ಮಫಿನ್ಸ್

ಬೇಕಾಗುವ ಸಾಮಾನುಗಳು:

2 ಕಪ್ ಮೈದಾ, 1 ಕಪ್ ಹಾಲು, 1 ಆ್ಯಪಲ್ ಸಿಪ್ಪೆ ತೆಗೆದು ತುರಿಯಾಗಿ ಮಾಡಿ ಕೊಳ್ಳಿ, 6 ಚಮಚ ಸಕ್ಕರೆ, 1 ಚಮಚ ಬೇಕಿಂಗ್ ಪೌಡರ್, 1 ಚಮಚ ಲವಂಗದ ಪುಡಿ.

ತಯಾರಿಸುವ ವಿಧಾನ:

ಮೇಲೆ ಹೇಳಿದ ಸಾಮಾನುಗಳನ್ನು ಹಾಕಿ ಕಲಸಿರಿ. ಇದನ್ನು ಮಫಿನ್ಸ್ ಮೌಲ್ಡ್ ಅಥವಾ ಇಡ್ಲಿ ತಟ್ಟೆಯಲ್ಲಿ ತುಂಬಿ 375°F ಓವನ್‌ನಲ್ಲಿ 15 ನಿಮಿಷ ಇಡಿ. ಇದನ್ನು ಜಾಮ್ ಜೊತೆ ತಿನ್ನಲು ಕೊಡಿ. ಇದು ಗುಜರಾತಿ ಭಕ್ಯ

### ಬೆಟ್ಟದ ನೆಲ್ಲಿಕಾಯಿ ಭಾತ್

ಬೆಟ್ಟದ ನೆಲ್ಲಿಕಾಯಿಯಿಂದ ಉಪ್ಪಿನಕಾಯಿ, ಜಾವತ ಮತ್ತು ಚಟ್ನಿ ಮಾಡುವುದು ಅನೇಕ ಸಲ ಮಾಸಪತ್ರಿಕೆಗಳಲ್ಲಿ ಬಂದಿವೆ. ಆದರೆ, "ನೆಲ್ಲಿ ಕಾಯಿ ಭಾತ್" ಮಾತ್ರ ಎಲ್ಲೂ ಬಂದಂತೆ ಕಾಣಲಿಲ್ಲ. ಒಮ್ಮೆ ಮಾಡಿನೋಡಿ !

**ಬೇಕಾದ ಸಾಮಾನುಗಳು:–** ಬೆಟ್ಟದ ನೆಲ್ಲಿ ಕಾಯಿ 15–20 ದೊಡ್ಡದು. ಒಣಮೆಣಸಿನ ಕಾಯಿ 6–7, ಕೊತ್ತಂಬರಿ ಬೀಜ 3 ಸ್ಪೂನ್. ½ ಸ್ಪೂನ್ ಮೆಂತ್ಯ, ಕಳ್ಳೆ ಬೇಳೆ 4 ಸ್ಪೂನ್, ಉದ್ದಿನ ಬೇಳೆ 4 ಸ್ಪೂನ್, ಚಕ್ಕೆ 4,5 ಚೂರು, ಲವಂಗ 5-6, ಏಲಕ್ಕಿ 1, ತಕ್ಕಷ್ಟು ಉಪ್ಪು, ಚೂರು ಹಿಂಗು ಮತ್ತು ¼ ಬಟ್ಟಲು ಒಣ ಕೊಬ್ಬರಿ ತುರಿ.

**ಮಾಡುವ ವಿಧಾನ:–** ನೆಲ್ಲಿಕಾಯಿಗಳನ್ನು ತೊಳೆದು ಬೀಜ ತೆಗೆದು ಚೂರು ಮಾಡಿಟ್ಟು ಕೊಳ್ಳುವುದು. ನಂತರ ಮೇಲ್ಕಂಡ ಸಾಮಾನು ಗಳನ್ನು—ಉಪ್ಪು ಬಿಟ್ಟು ಎಲ್ಲವನ್ನು—ಎಣ್ಣೆ ಹಾಕಿ ಹುರಿದು ಉಪ್ಪು ಮತ್ತು ನೆಲ್ಲಿಕಾಯಿ ತುಂಡು ಗಳನ್ನೂ ಮಸಾಲೆ ಸಮೇತ ಮಿಕ್ಸಿಯಲ್ಲಿ ನುಣ್ಣಗೆ ರುಬ್ಬಿ, ಹೆಚ್ಚು ನೀರು ಹಾಕದೆ ತೆಗೆದು ನಂತರ ಬಾಣಲೆಯಲ್ಲಿ ½ ಬಟ್ಟಲು ಕಳ್ಳೆಕಾಯಿ ಎಣ್ಣೆ ಹಾಕಿ ಸಾಸುವೆ, ಕಳ್ಳೆ ಬೇಳೆ, ಉದ್ದಿನ ಬೇಳೆ, ಕರಬೇವು, ಕೊತ್ತಂಬರಿ, ಅರಿಶಿನ ½ ಸ್ಪೂನ್ ಹಾಕಿ ಕೆಂಪಗಾದ ನಂತರ ರುಬ್ಬಿದ ಮಸಾಲೆ ಒಗ್ಗರಣೆಗೆ ಹಾಕಿ 2 ನಿಮಿಷ ಕುದಿಸಿ ಅನ್ನ ಹಾಕಿ ಕಲಸುವುದು ಮತ್ತು ½ ಹೋಳಿ ಲಿಂಬೆ ರಸ ಹಿಂಡಿ ಉಪಯೋಗಿಸುವುದು. ರುಚಿಯಾಗಿರು ತ್ತದೆ. ಆರೋಗ್ಯಕ್ಕೂ ಒಳ್ಳೆಯದು. ಬೇಕಿದ್ದರೆ ಒಗ್ಗರಣೆಗೆ ಕ. ಬೀಜ ಹಾಕಬಹುದು.

**—ಎಸ್. ಬಿ. ಮಾಲತಿ,**
**ಬೆಂಗಳೂರು–560032**



ಕರ್ನಾಟಕದ ಅತ್ಯಂತ ಸುಂದರ ಹಾಗೂ ಪ್ರಮುಖ ಪ್ರೇಕ್ಷಣೀಯ ಸ್ಥಳಗಳಲ್ಲಿ ಮೈಸೂರುಗೆ ಅಗ್ರಸ್ಥಾನ. ಮೈಸೂರು ಎಂದೊಡನೆ ಮೊದಲ ಬಾರಿಗೆ ನೆನಪಾಗುವುದು ಭವ್ಯ ಅರಮನೆ ಹಾಗೂ ಬೃಂದಾವನ. ಇವನ್ನು ಬಿಟ್ಟರೆ ಮೈಸೂರಿನ ಖ್ಯಾತಿಗೆ ಕೀರ್ತಿ ಶಿಖರ ನೀಡಬಲ್ಲುದೆಂದರೆ ಚಾಮುಂಡಿ ಬೆಟ್ಟ; ಮೃಗಾಲಯ ಹಾಗೂ ಶ್ರೀರಂಗಪಟ್ಟಣ. ಮೈಸೂರು ದಸರಾ; ಮೈಸೂರು ಮಲ್ಲಿಗೆಯ ಸೌಗಂಧ, ಶ್ರೀಗಂಧದ ಕಂಪು,

# ಶತಮಾನೋತ್ಸ
# ಸಂಭ್ರಮದಲ್ಲಿ
# ಮೈಸೂರು
# ಮೃಗಾಲಯ

ಈ ಬಿಂದುವಿನಲ್ಲಿ ನಿಮಗೆ
ಒಂದು ಸುಗಂಧ ಸೂಸುವ
ದೈವೀಕತೆ
ಕಾಣುತ್ತಿದೆಯಲ್ಲವೇ?





# ಐಟೆಕ್ಸ್
# ದಿವ್ಯಾ ಕುಂಕುಮ್

ದಿವ್ಯಾ - ದೈವಿಕ ಸುಗಂಧಸೂಸುವ ಕುಂಕುಮ.
ಭಾರತದಾದ್ಯಂತ ಕೋಟಿಗಟ್ಟಲೆ ಸ್ತ್ರೀಯರ ನಂಬಿಕೆಯ ಆಯ್ಕೆ
ನಿಮಗೆ ಬೇಕಾದ ಬಣ್ಣದಲ್ಲಿ, ನೀವು ಬಯಸಿದ ವೆಲ್ವೆಟ್
ಫಿನಿಶ್‌ನಲ್ಲಿ.

ದಿವ್ಯಾ - ಸುಗಂಧಸೂಸುವ ಕುಂಕುಮ. ಅಲರ್ಜಿ ಇಲ್ಲ,
ಪೂರ್ತಿ ಸುರಕ್ಷಿತ.

ಐಟೆಕ್ಸ್ - 50ಕ್ಕೂ ಹೆಚ್ಚು ವರ್ಷಗಳಿಂದ ನಂಬಿಕೆಯ
ಒಂದು ಚಿಹ್ನೆ.




ಅರವಿಂದ್ ಲ್ಯಾಬೊರಟರೀಸ್, ಮದರಾಸು 600 033.

**SAY NO TO DRUGS**

Imageads 3090 Kan

ಚಿತ್ರಗಳು : ಎಸ್. ತಿಪ್ಪೇಸ್ವಾಮಿ



ವಿಶ್ವದ ಶ್ರೇಷ್ಠ ಮೃಗಾಲಯಗಳಲ್ಲಿ 'ಎ' ದರ್ಜೆಯ ಮೃಗಾಲಯಗಳ ಸಾಲಿಗೆ ಸೇರ್ಪಡೆಗೊಳ್ಳುವ ಮೈಸೂರಿನ ಜಯಚಾಮರಾಜೇಂದ್ರ ಮೃಗಾಲಯ ಶತಮಾನೋತ್ಸವ ಆಚರಿಸುತ್ತಿರುವ ಸಂದರ್ಭದಲ್ಲಿ ಈ ಅಕ್ಟೋಬರ್ ತಿಂಗಳಲ್ಲಿ ಮಹತ್ವಪೂರ್ಣ ಕಾರ್ಯಕ್ರಮಗಳನ್ನು ಯೋಜಿಸಿಕೊಂಡಿದೆ. ಪ್ರಾಣಿಗಳ ನೈಜ ಪರಿಸರ; ಸ್ವಚ್ಛಂದ ವಾತಾವರಣದ ನಿಸರ್ಗ ಜೀವನದ ವಿಶಿಷ್ಟತೆ ಮೈಸೂರು ಮೃಗಾಲಯದ ಹೆಗ್ಗಳಿಕೆ. ಚಾಮುಂಡಿ ಬೆಟ್ಟದ ಬುಡದಲ್ಲಿ ಆರಂಭದಲ್ಲಿ 10.9 ಎಕರೆಯಿಂದ ಈಚೆಗೆ 250 ಎಕರೆಗಳವರೆಗೆ ವಿಸ್ತೃತಗೊಂಡ ಮೃಗಾಲಯದಲ್ಲಿ ಅಪರೂಪದ ವನ್ಯ ಮೃಗಗಳ ತಳಿಗಳನ್ನು ಅಭಿವೃದ್ಧಿ ಪಡಿಸುತ್ತಿರುವುದನ್ನು ಮನಗಾಣಬಹುದು. ಅನ್ಯರಾಷ್ಟ್ರ ಹಾಗೂ ಭಾರತೀಯ ಮೃಗಾಲಯಗಳಿಂದ ಮೈಸೂರು ಮೃಗಾಲಯ ಅಪೂರ್ವ ವನ್ಯ ಪ್ರಾಣಿಗಳನ್ನು ಆಮದು ಮಾಡಿಕೊಂಡು ಅವುಗಳ ಸಂತಾನಾಭಿವೃದ್ಧಿಗೆ ವಿಶೇಷ ಕಾರ್ಯಯೋಜನೆ ರೂಪಿಸಿಕೊಂಡಿದೆ. ಏಷ್ಯದ ಆನೆಗಳು, ಭಾರತದ ಖಡ್ಗ ಮೃಗಗಳು, ಜಿರಾಫೆಗಳು ಹಾಗೂ ನೀರಾನೆಗಳಂಥ ದೈತ್ಯ ಪ್ರಾಣಿಗಳೂ ಹುಲಿ, ಕೃಷ್ಣಸಾರಂಗ, ಚಿಂಪಾಂಜಿಗಳಂತಹ ವನ್ಯಮೃಗಗಳ ತಳಿಗಳನ್ನು ಯಶಸ್ವಿಯಾಗಿ ಅಭಿವೃದ್ಧಿ ಪಡಿಸಲಾಗುತ್ತಿದೆ. ಭಾರತ ಹಾಗೂ ಹೊರದೇಶಗಳ ಸುಮಾರು 97 ಪ್ರಾಣಿ–ಪಕ್ಷಿಗಳ ತಳಿ ಅಭಿವೃದ್ಧಿ ಕಾರ್ಯಕ್ಕೆ ದೇಣಿಗೆ ನೀಡುವ ಮೂಲಕ ಮೈಸೂರು ಮೃಗಾಲಯ ಭಾರತೀಯ ವನ್ಯಜೀವಿ ಮಂಡಳಿಯ ಶ್ಲಾಘನೆಗೆ ಪಾತ್ರವಾಗಿದೆ.

ಇತ್ತೀಚಿನ ವರ್ಷಗಳಲ್ಲಿ ಮೈಸೂರು ಮೃಗಾಲಯ ಪ್ರವಾಸಿಗರ ವಿಶೇಷವಾಗಿ ಶಾಲೆ, ಕಾಲೇಜು ವಿದ್ಯಾರ್ಥಿಗಳ ಪ್ರಮುಖ ಆಕರ್ಷಣೆಯ ಕೇಂದ್ರವೆನಿಸಿದೆ. ಕೇಂದ್ರ ಸರಕಾರ ಕಾರಂಜಿಕೆರೆ ಬಳಿ ನೈಸರ್ಗಿಕ ಇತಿಹಾಸ ವಸ್ತು ಸಂಗ್ರಹಾಲಯವೊಂದನ್ನು ಸ್ಥಾಪಿಸಲು ಯೋಜಿಸಿದೆ.

ಮೈಸೂರು ಮೃಗಾಲಯದಲ್ಲಿ ಇತ್ತೀಚೆಗೆ ಖಗವೀಕ್ಷಣಾ ಧಾಮ; ಉರಗ ವೀಕ್ಷಣಾ ಕೇಂದ್ರ; ಜೇನು ಕರಡಿ, ಆನೆ, ಜಿರಾಫೆ, ಕಾಂಗರೂ ಇತ್ಯಾದಿಗಳಿಗೆ ಆಧುನಿಕ ರೀತಿಯ ಆವರಣಗಳನ್ನು ನಿರ್ಮಿಸಲಾಗಿದೆ.

## ಉದಯ

1892ರಲ್ಲಿ ಶ್ರೀ ಚಾಮರಾಜ ಒಡೆಯರ ಕನಸಿನ ಕೂಸಾಗಿ ಹುಟ್ಟಿಕೊಂಡ ಇಂದಿನ ಮೈಸೂರು ಮೃಗಾಲಯದ ಅಂದಿನ ಹೆಸರು ಖಾಸ್ ಬಂಗ್ಲೆ. ಮಹಾರಾಜರಿಗೆ ಮೆಚ್ಚುಗೆಯಾದ ಹಾಗೂ ಉಡುಗೊರೆಯಾಗಿ ಬಂದ ಪ್ರಾಣಿ ಪಕ್ಷಿಗಳು ಮೃಗಾಲಯಕ್ಕೆ ಸೇರ್ಪಡೆಗೊಂಡು ವರ್ಷದಿಂದ ವರ್ಷಕ್ಕೆ ವೃದ್ಧಿಗೊಂಡಿತು. 1909ರಲ್ಲಿ ಶ್ರೀ ಚಾಮರಾಜೇಂದ್ರ ಮೃಗಾಲಯವೆಂಬ ಹೆಸರಿನಲ್ಲಿ ಬೆಳೆದು 1972ರವರೆಗೆ ಅರಣ್ಯ ಇಲಾಖೆ; 1979ರಿಂದ ಮೃಗಾಲಯ ಪ್ರಾಧಿಕಾರದ ಅಧೀನದಲ್ಲಿ ಬೆಳವಣಿಗೆ ಹೊಂದಿತು. ಅಂದು ಮೃಗಾಲಯದ ಸಾರ್ವಜನಿಕ ಪ್ರವೇಶ ದರ ಒಂದು ಕಾಸಾದರೆ ಇಂದು ಎರಡು ರೂಪಾಯಿ. ಮೈಸೂರು ನಗರದಿಂದ ಚಾಮುಂಡಿ ಬೆಟ್ಟಕ್ಕೆ ಹೋಗುವ ಹಾದಿಯಲ್ಲಿದೆ ಮೈಸೂರು ಮೃಗಾಲಯ. ಸ್ವಚ್ಛಂದ ಗಾಳಿ, ಬೆಳಕು, ನೀರಿನ ಸೌಕರ್ಯ ಹೊಂದಿದ ಮೃಗಾಲಯದಲ್ಲಿ ಪ್ರಾಣಿಗಳು ಬಂಧಮುಕ್ತವಾಗಿ ವಿಹರಿಸುತ್ತ ಸಹ ಜೀವನ ನಡೆಸುತ್ತ, ಸಂತಾನಾಭಿವೃದ್ಧಿಗೊಳಿಸುತ್ತಿವೆ. ಏಷ್ಯಾದ ಆನೆ, ಖಡ್ಗಮೃಗ, ಕಪ್ಪು ಖಡ್ಗಮೃಗ, ಜಿರಾಫೆ, ನೀರು ಕುದುರೆಗಳು ತಮ್ಮ ಸಂತಾನ ಅಭಿವೃದ್ಧಿ ಪಡಿಸಿಕೊಂಡಿವೆ. ಹುಲಿ, ಕಾಡೆಮ್ಮೆ ಕಸ್ತೂರಿ ಮೃಗ, ಜಿಂಕೆ, ಹಂಸ, ಬಾತುಕೋಳಿ ಇತ್ಯಾದಿಗಳೂ ನೆಮ್ಮದಿಯ ಸಹಕುಟುಂಬ ಜೀವನ ನಡೆಸುತ್ತಿವೆ.

ಅಪರೂಪದ ಪ್ರಾಣಿ ಸಮೂಹ; ವಿಶಾಲ ಬಯಲಲ್ಲಿ ಹರಡಿಕೊಂಡ ಪಶು–ಪಕ್ಷಿ ಸಂಕುಲಗಳನ್ನು ಬಲು ಹತ್ತಿರದಿಂದ ನೋಡುವ ಸದವಕಾಶ ಅಲ್ಲಿ ಲಭ್ಯ. ರಾಜಹಂಸ, ಕಾಡುಕೋಳಿ, ಬೆಳ್ಳಕ್ಕಿ, ಕೊಕ್ಕರೆ, ನರ್ತಿಸುತ್ತಿ ರುವ ಮಯೂರ, ನೀರು ಹಕ್ಕಿ – ಹೀಗೆ ಒಂದರಂತೆ ಇನ್ನೊಂದಿಲ್ಲ. ಎಲ್ಲವನ್ನೂ ಒಂದೊಂದಾಗಿ ನೋಡುತ್ತಾ ಸಾಗಿದರೆ ಸಮಯ ಕಳೆದುದೇ ತಿಳಿಯದು. ಎಲ್ಲ ಪ್ರಾಣಿ–ಪಶು–ಪಕ್ಷಿಗಳನ್ನು ಕೂಲಂಕಷವಾಗಿ ವೀಕ್ಷಿಸಲು ಎರಡು–ಮೂರು ದಿನಗಳಾದರೂ ಬೇಕು. ಹುಲಿ–ಸಿಂಹಗಳ ಸಂಚಾರಕ್ಕೆ–ವಿಹಾರಕ್ಕೆ ಪ್ರತ್ಯೇಕ ಆಳವಾದ ಬಾವಿಗಳನ್ನು ನಿರ್ಮಿಸಲಾಗಿದೆ. ಕೃಷ್ಣ ಮೃಗ, ಜಿಂಕೆಗಳ ಹಿಂಡು; ಕತ್ತೆಕಿರುಬ–ಕರಡಿಗಳು ಅಲ್ಲಲ್ಲಿ ಗೋಚರಿಸುತ್ತವೆ.

ಆಫ್ರಿಕಾದ ಚಿರತೆ; ಕಾಡುಕೋಣ; ಮುಳ್ಳುಹಂದಿ ಮುಂತಾದ ಪ್ರಾಣಿಗಳ ದರ್ಶನ ಪಡೆಯಲು ಅಪೂರ್ವವಾದ ಸುಯೋಗ ಬೇಕು. ಹಿಮಕರಡಿ; ನೀರುಕುದುರೆ; ಜೀಬ್ರಾ; ಒಂಟೆ; ಕುದುರೆ; ಚಮರೀ ಮೃಗ; ಉಷ್ಟ್ರ ಪಕ್ಷಿಗಳು ಮೃಗಾಲಯದ ಸೊಬಗನ್ನು ಹೆಚ್ಚಿಸಿವೆ. ಪೆಂಗ್ವಿನ್‌ಗಳು ಮೃಗಾಲಯದ ವಿಶೇಷ ಆಕರ್ಷಣೆ.

ನಾನಾ ಜಾತಿಯ; ಅನ್ಯ ದೇಶೀಯ ಉರಗ; ಕಾಳಿಂಗ ಸರ್ಪ; ವಿಷಯುಕ್ತ ಹಾವುಗಳ ವಿಶೇಷ ಸಂಗ್ರಹ ಇಲ್ಲಿದೆ. ಜಲಾಶಯದಲ್ಲಿ ಮೊಸಳೆಗಳು ಅತ್ತಿಂದಿತ್ತ, ಇತ್ತಿಂದತ್ತ ಚಲಿಸುವುದನ್ನು ಕಾಣಬಹುದು. ಮೃಗಾಲಯದ ಸುತ್ತಲು ವನಪ್ರದೇಶ; ನೆರಳಿನಾಸರೆ; ಹಚ್ಚನೆ ಹಸುರಿನ ಹೂದೋಟ – ಇತ್ಯಾದಿಗಳ ಆರೈಕೆಗೆ ತೋಟಗಾರಿಕೆ ಇಲಾಖೆ ವಿಶೇಷ ಕಾಳಜಿ ವಹಿಸುತ್ತಿರುವುದು ಶ್ಲಾಘನೀಯ. ಪ್ರಾಣಿ–ಪಶು–ಪಕ್ಷಿಗಳಿಗೆ ಅಲ್ಲಲ್ಲಿ ದಣಿವಾರಿಸಿಕೊಳ್ಳಲು ತಂಪಿನಾಸರೆಯ ಕಾಂಕ್ರೀಟ್ ಬೆಂಚುಗಳು; ಹುಲ್ಲು ಹಾಸುಗಳಿವೆ. ಪ್ರಾಣಿ–ಪಶು–ಪಕ್ಷಿಗಳನ್ನು ಪ್ರೇಕ್ಷಕರು ಸುಲಭದಲ್ಲಿ ಗುರುತಿಸಲು ನಾಮಫಲಕಗಳನ್ನು ತೂಗು ಹಾಕಲಾಗಿದೆ. ಹೂದೋಟದ "ಚಕ್ರವ್ಯೂಹ" ಪ್ರೇಕ್ಷಕರನ್ನು ಪೇಚಿನಲ್ಲಿ ಸಿಲುಕಿಸುತ್ತದೆ.

## ಶತಮಾನೋತ್ಸವ

ಜಗದ್ವಿಖ್ಯಾತ ಮೈಸೂರು ಮೃಗಾಲಯ ತನ್ನ ನೂರನೆಯ ವರ್ಷಾಚರಣೆಯ ಸಂತಸದ ಸಂಭ್ರಮದಲ್ಲಿ ಕೆಲ ಮಹತ್ವಪೂರ್ಣ ಕಾರ್ಯಯೋಜನೆಗಳನ್ನು ಹಮ್ಮಿಕೊಂಡಿದೆ. ವಿದೇಶೀಯ ಮೃಗಾಲಯ ನಿರ್ದೇಶಕರ ಸಮ್ಮೇಳನ–ಮೃಗೋದ್ಯಾನ ಕುರಿತಂತೆ ವಿಚಾರ ಸಂಕಿರಣ ಹಾಗೂ ಉಪನ್ಯಾಸ; ಕಾರಂಜಕೆರೆ ಬಳಿ ಉದ್ಯಾನ ಬೆಳೆಸುವ ಯೋಜನೆ; ಪ್ರಾಣಿ ಹಾಗೂ ಮರಗಳನ್ನು ಬೆಳೆಸುವ 12.4 ಲಕ್ಷ ರೂ, ಯೋಜನೆ; 15 ಲಕ್ಷ ರೂ. ವೆಚ್ಚದಲ್ಲಿ ಮೃಗಾಲಯ ಅಂದಗೊಳಿಸುವುದು; ಆಧುನಿಕ ರೀತಿಯ ಪ್ರವೇಶ ದ್ವಾರ ನಿರ್ಮಾಣ; ಕಾರಂಜಿಕೆರೆಯೊಳಗೆ ಕೇಬಲ್ ಬ್ರಿಜ್ ನಿರ್ಮಾಣ; ಹಳೆ ಆವರಣಗಳ ನವೀಕರಣ; ವನ್ಯಜೀವಿ ರಕ್ಷಣೆ ಕುರಿತಾದ ಸಂದೇಶ ಸಾರ್ವಜನಿಕರಿಗೆ ತಲುಪಿಸುವ ಗುರಿ; ದಿ। ಚಾಮರಾಜ ಒಡೆಯರ ಶಿಲಾಪ್ರತಿಮೆ ಸ್ಥಾಪನೆ; ನಾಗರ ಹೊಳೆ ರಾಷ್ಟ್ರೀಯ ಉದ್ಯಾನ–ಬಿಳಿಗಿರಿ ರಂಗನ ಬೆಟ್ಟ ಅಭಯಾರಣ್ಯ ಪ್ರದೇಶಗಳಿಗೆ ಪ್ರವಾಸ ಯೋಜನೆ ರೂಪಿಸುವುದು– ಇವೇ ಮುಂತಾದ ಸುಮಾರು ಐವತ್ತು ಲಕ್ಷ ರೂಪಾಯಿ ಅಂದಾಜು ವೆಚ್ಚದ ಬೃಹತ್ ಯೋಜನೆಗಳನ್ನು ಹಮ್ಮಿಕೊಳ್ಳಲಾಗಿದೆ. ಪ್ರತಿನಿತ್ಯ ಸುಮಾರು ಇಪ್ಪತ್ತು ಸಹಸ್ರ ದೇಶವಿದೇಶೀ ಪ್ರವಾಸಿಗರು ವೀಕ್ಷಿಸಲು ಬರುವ ನಿರೀಕ್ಷೆಯಿದ್ದು ರಜಾದಿನ, ದಸರಾ ಸಂದರ್ಭಗಳಲ್ಲಿ ವೀಕ್ಷಕರ ಸಂಖ್ಯೆ ಲಕ್ಷ ಮೀರುತ್ತದೆ. ಪ್ರತಿನಿತ್ಯ ವಸ್ತು ಪ್ರದರ್ಶನ; ಮನರಂಜನಾ ಕಾರ್ಯಕ್ರಮಗಳನ್ನು ವ್ಯವಸ್ಥೆಗೊಳಿಸಲಾಗುವುದು. ಅಕ್ಟೋಬರ್ ತಿಂಗಳಿನಲ್ಲಿ ಜರುಗಲಿರುವ ಮೃಗಾಲಯದ ಶತಮಾನೋತ್ಸವ ದೇಶ ವಿದೇಶೀ ಪ್ರವಾಸಿಗರನ್ನು ಅಧಿಕ ಸಂಖ್ಯೆಯಲ್ಲಿ ಆಕರ್ಷಿಸಲಿದೆ.

ಮೃಗಾಲಯಕ್ಕೆ ಅನ್ಯದೇಶೀಯ ಅಪರೂಪದ ಪ್ರಾಣಿ, ಪಶು, ಪಕ್ಷಿಗಳನ್ನು ತರಿಸುವ ಮೂಲಕ ಆಕರ್ಷಣೆ ಹೆಚ್ಚಿಸಬೇಕು. ಸ್ಥೂಲ ಮಾಹಿತಿ ನೀಡುವ ಪುಸ್ತಿಕೆ; ಮಾರ್ಗದರ್ಶಿಗಳಿರಬೇಕು. ದೇಶದ ಹೆಮ್ಮೆಯ ಮೈಸೂರು ಮೃಗಾಲಯ ಹೊಸ ಶೋಭೆ; ನವಚೈತನ್ಯ ಹೊಂದಿ ಚಿಗುರಲು ಎಲ್ಲರ ಪೋಷಣೆ ಅಗತ್ಯ

—ಶ್ರೀಮತಿ ರತ್ನ ಎಸ್. ತಂತ್ರಿ

# ನವ ದಂಪತಿಗಳು

ಚಿ। ಸೌ। ನಾಗರತ್ನ ಹಾಗೂ ಚಿ। ರಾಮನಾಥ ಇವರ ವಿವಾಹವು ದಿ. 21–10–1991ರಂದು ಮೈಸೂರಿನ ಶ್ರೀರಾಮ ಕಲ್ಯಾಣ ಮಂಟಪದಲ್ಲಿ ನಡೆಯಿತು. ವಧುವಿನ ತಾಯಿ : ಶ್ರೀಮತಿ ಪಿ.ಎನ್. ವಿಜಯ· ವಧುವಿನ ತಂದೆ : ಶ್ರೀ



ಎಂ.ಸಿ. ಮಣಿ ವರನ ತಾಯಿ : ಶ್ರೀಮತಿ ಮೀನಾಕ್ಷಮ್ಮ ವರನ ತಂದೆ : ದಿ। ಎಲ್. ಚಂದ್ರಶೇಖರರಾವ್



ಚಿ। ಸೌ। ಜ್ಯೋತಿಶ್ರೀ ಮತ್ತು ಚಿ। ಶಂಕರಬಾಬು ಇವರ ವಿವಾಹವು ದಿ. 20–10–91ರಂದು ಬೆಂಗಳೂರು ಚಾಮರಾಜ ಪೇಟೆಯಲ್ಲಿರುವ ಶ್ರೀ ಸತ್ಯ ಪ್ರಮೋದ ತೀರ್ಥ ಕಲ್ಯಾಣ ಮಂಟಪದಲ್ಲಿ ನಡೆಯಿತು. ವಧುವಿನ ತಾಯಿ : ಶ್ರೀಮತಿ ಎಸ್. ಶಮಂತ ರತ್ನ.ವಧುವಿನ ತಂದೆ : ಎಸ್. ಸತ್ಯಕುಮಾರ್. ವರನ ತಾಯಿ : ಶ್ರೀಮತಿ ಸರಸ್ವತಮ್ಮ ವರನ ತಂದೆ : ದಿ। ವೆಂಕಟನಾರಾಯಣ ಶೆಟ್ಟಿ

ಚಿ। ಸೌ. ಶರ್ಮಿಳಾ ಮತ್ತು ಎಸ್. ಎಸ್. ರಮೇಶ್ ಅವರ ವಿವಾಹವು ಪ್ರಜೋತ್ಪತ್ತಿ ನಾಮ ಸಂವತ್ಸರದ ಆಶ್ವಯುಜ ಮಾಸ ಶುದ್ಧ ತದಿಗೆ (10–10–1991ರಂದು) ಟಿ. ನರಸೀಪುರದಲ್ಲಿರುವ ಶ್ರೀ ಶ್ರೀ ಶ್ರೀ ವ್ಯಾಸರಾಜ ಮಂಟಪದಲ್ಲಿ ನಡೆಯಿತು. ವಧುವಿನ ತಾಯಿ : ಶ್ರೀಮತಿ ವಿಜಯ ಹೆಬ್ಬಾರ ವಧುವಿನ ತಂದೆ : ದಿ। ಶ್ರೀ ಕೆ. ಹೆಬ್ಬಾರ. ವರನ ತಾಯಿ : ಶ್ರೀಮತಿ ಗೀತಾ ಸ್ವಾಮಿರಾವ್, ವರನ ತಂದೆ : ಶ್ರೀ ಎಂ.ಆರ್. ಸ್ವಾಮಿರಾವ್.

ಚಿ। ಸೌ. ಸುಪ್ರೀತ ಮತ್ತು ಚಿ। ವೆಂಕಟೇಶ ಬಾಬು ಅವರ ವಿವಾಹವು ದಿ. 14–10–1991ರಂದು ಬೆಂಗಳೂರಿನ ವಿಶ್ವೇಶ್ವರ ಪುರದಲ್ಲಿರುವ ಕೋಟ ವಿಜಯಲಕ್ಷ್ಮಿ ಕಲ್ಯಾಣ ಮಂಟಪದಲ್ಲಿ ನಡೆಯಿತು. ವಧುವಿನ ತಾಯಿ : ಸರೋಜ ವಧುವಿನ ತಂದೆ : ಕೆ.ಎಸ್. ಗೋವಿಂದರಾಜು. ವರನ ತಾಯಿ : ಕನಕರತ್ನಮ್ಮ ವರನ ತಂದೆ : ತಿಪ್ಪರಾಜ ಶೆಟ್ಟಿ

ಈ ದಂಪತಿಗಳಿಗೆ 'ವನಿತಾ' ಪ್ರಥಮ ವಿವಾಹ ವಾರ್ಷಿಕೋತ್ಸವಕ್ಕೆ ಹಾರ್ದಿಕ ಶುಭಾಶಯ ಗಳನ್ನು, ದೀರ್ಘಕಾಲ ಸುಖ ದಾಂಪತ್ಯ ಜೀವನವನ್ನೂ ಹಾರೈಸುತ್ತದೆ.



ಆರ್. ಗೀತಾಂಜಲಿ : 19–10–1991
ತಾಯಿ : ಎಂ.ಸಿ. ಭಾರತಿ, ಬೆಂಗಳೂರು



ಸುಶ್ರುತ ಸುನೀತಾರಾವ್ : 10–10–1991
ತಾಯಿ : ಸುನೀತಾ ಸೂರ್ಯಪ್ರಕಾಶ್, ಬೆಂಗಳೂರು





ಚೈತ್ರ : 23–10–1991
ತಾಯಿ : ವನಮಾಲ, ಬೆಂಗಳೂರು



ಜ್ಯೋತಿ : 16–10–1991
ತಾಯಿ : ಶ್ರೀಮತಿ ಸೌಭಾಗ್ಯ ಬಸವರಾಜ ದಲಾಲ್, ಧಾರವಾಡ

# ಹುಟ್ಟಿದಹಬ್ಬ

ರಕ್ಷಿತ್ : 24–10–1991
ತಾಯಿ : ಮಾಲಾ ಆನಂದ ಪಾಟೀಲ, ಬೆಂಗಳೂರು



ಶಿವಕುಮಾರ್ ಎಸ್. ಹಿರೇಮಠ : 1–10–1991
ತಾಯಿ : ಕಮಲಾ ಎಸ್. ಹಿರೇಮಠ, ಬಿಜಾಪುರ

ಚಿ। ವಿನೀತ : 1–10–1991
ತಾಯಿ : ವಸುಧ ವಾಮನ ಹೇಮಾದ್ರಿ, ಬೆಳಗಾವಿ







ಹೆಚ್.ಎನ್. ಸುಧೀಂದ್ರ : 28–10–1991
ತಾಯಿ : ಸುಮ ನಾಗೇಂದ್ರ, ಹೆಬ್ಬಲಗುಪ್ಪೆ

(45 ನೇ ಪುಟದಿಂದ)

ಯಿಂದಲೂ, ಅರ್ಧ ಅಚ್ಚರಿಯಿಂದಲೂ ನುಡಿದೆ "ಇದೇನ್ರೀ, ಅನ್ನ ಸಾರೇ ನೆಟ್ಟಗೆ ಮಾಡಲು ಬರದ ನೀವು ಈ ಬಿಸಿಬೇಳೆ ಭಾತ್ ಮಾಡಲು ಎಲ್ಲಿ ಕಲಿತಿರಿ? ನಮಗೆಲ್ಲಾ ಸರ್‌ಪ್ರೈಜ್ ಮಾಡ್ಬೇಕೂಂತ ಇರ್‍ಬೇಕು. ಅಂದ್ಹಾಗೆ ಮಾಡಿದ್ದೇನೋ ಸರಿ, ಆದರೆ ಅದಕ್ಕೆ ಬೇಕಾದ ಭಾತಿನ ಪುಡಿ, ತರಕಾರಿ, ತುಪ್ಪ....."

"ಎಲ್ಲಾ ಬಹಳ ಸಿಂಪಲ್ ಕಣೇ! ಅನ್ನ ಸಾರು ಮಾಡಲೆಂದೇ ಕುಕ್ಕರ್ ಜೋಡಿಸಿಟ್ಟೆ. ಅದೇನು ನೀರು ಜಾಸ್ತಿಯಾಯಿತೋ, ಏನು ಹೆಚ್ಚು ಕಡಿಮೆಯಾಯಿತೋ, ಒಂದು ಗಂಟೆಯಾದ್ರೂ ಕುಕ್ಕರ್ ಕೂಗಲಿಲ್ಲ. ತೆಗೆದು ನೋಡಿದ್ರೆ ಅನ್ನ, ಬೇಳೆ ಎಲ್ಲಾ ಒಂದಕ್ಕೊಂದು ಸೇರಿಕೊಂಡುಬಿಟ್ಟಿತ್ತು. ಸರಿ, ಏನ್ಮಾಡೂದೋಂತ ಯೋಚಿಸಿದೆ. ಮಾಸ್ಟರ್ ಪ್ಲಾನ್ ಹೊಳೆದೇ ಬಿಡ್ತು. ಹೇಗಿದ್ರೂ ಬಿಸಿಬೇಳೆಭಾತ್‌ಗೆ ಅಕ್ಕಿ, ಬೇಳೆ ಎಲ್ಲಾ ಒಟ್ಟಿಗೆ ಸೇರಿಸಿಯೇ ತಾನೆ ಮಾಡೋದು! ಅಲ್ಲೇ ಪಕ್ಕದಲ್ಲಿ ಹಾರ್ಲಿಕ್ಸ್ ಬಾಟಲಿಯಲ್ಲಿ ಪುಡಿ ಇತ್ತು. ಪೂರ್ತಿ ಹಾಕಿದೆ. ಸರಿ ತರಕಾರಿ ಇಲ್ಲದೆ ಭಾತ್ ಹೇಗೆ ಪೂರ್ಣವಾಗುತ್ತೆ ಅಂತ ಯೋಚಿಸಿ ಬೆಂದ ಅಕ್ಕಿ ಬೇಳೆಗೆ ಸ್ವಲ್ಪ ಆಲೂಗೆಡ್ಡೆ, ಈರುಳ್ಳಿ ಹೆಚ್ಚಿ ಹಾಕಿ ಅಚ್ಚುಕಟ್ಟಾಗಿ ಒಗ್ಗರಣೆ ಹಾಕಿದೆ. ಅಷ್ಟೇ" ಹೆಮ್ಮೆಯಿಂದ ಹುಬ್ಬು ಹಾರಿಸಿದಾಗ ಭಯಂಕರ ಆಘಾತವಾಯ್ತು.

'ರೀ, ಅದು ಭಾತಿನ ಪುಡಿ ಅಲ್ರೀ, ಉಪ್ಪಿನಕಾಯಿಗೇಂತ ತರಿಸಿಟ್ಟಿದ್ದ ಅಚ್ಚಮೆಣಸಿನ ಪುಡಿ. ಅದೂ ಅಲ್ಲದೆ, ಅಕ್ಕಿ, ಬೇಳೆ ಎಲ್ಲಾ ಬೆಂದಮೇಲೆ ಅದಕ್ಕೆ ತರಕಾರಿ ಹಾಕಿದರೆ ಅದು ಬೇಯುವುದಿಲ್ಲರೀ, ರಾಮಾ.... ರಾಮಾ.... ನನ್ನನ್ನ ಒಂದ್ಮಾತು ಕೇಳಿದ್ದಿದ್ರೆ...."

"ಸುಮ್ಮನೆ ಅಬ್ಬರ ಮಾಡ್ಬೇಡ್ವೇ! ಮೊದಲು ತಿಂದು ನೋಡು. ಯಾವಾಗ್ಲೂ ಒಂದೇ ರುಚಿಗೆ ಅಂಟಿಕೊಳ್ಳಬಾರದು, ರುಚಿಯಲ್ಲೂ ವೈವಿಧ್ಯತೆಯಿದ್ದರೇ ಸೊಗಸು ಕಣೇ! ತಿಂದು ನೋಡಿ ಬೇಕಾದರೆ ನಿನ್ನ ಮೆಚ್ಚಿನ ವನಿತಾದ ಹೊಸರುಚಿ ವಿಭಾಗಕ್ಕೂ ಕಳಿಸು. ನೂರಾರು ಜನ ಮಾಡಿ, ಸವಿದು ಆನಂದಿಸುತ್ತಾರೆ." ಎಂದವರೇ ತಟ್ಟೆಗೆ ಸುರಿದರು. ಬಿತ್ತು. ಬೀಳಲಾರದೆ ಬಿತ್ತು. ಬೆಂದು, ಬೆಂದು ಅಕ್ಕಿ ಬೇಳೆಯ ಗುರುತೂ ಇಲ್ಲದಂತೆ ಪೇಸ್ಟಿನಂತಾದ, ಅಂಟು ಅಂಟಾದ ಪದಾರ್ಥ. ಮಧ್ಯೆ, ಮಧ್ಯೆ ಹಸಿಯಾಗಿಯೇ ಉಳಿದ ಆಲೂಗೆಡ್ಡೆ, ಈರುಳ್ಳಿ ಚೂರುಗಳು. ಅಚ್ಚುಕಟ್ಟಾಗಿ ಅರ್ಧ ಕೆ.ಜಿ. ಬ್ಯಾಡಗಿ ಮೆಣಸಿನ ಕಾಯಿಯ ಪುಡಿಯನ್ನು ಹಾಕಿದ್ರಿಂದ ಬಣ್ಣ ಮಾತ್ರಾ ಮುಖಕ್ಕೆ ಹೊಡೆಯುವಂತಹ ಕೆಂಬಣ್ಣದಿಂದ ಕಂಗೊಳಿಸುತ್ತಿತ್ತು.

ರುಚಿ? ರುಚಿ ಮಾತ್ರಾ ನಾನು ವರ್ಣಿಸಲಾರೆ. ಕಾರಣ ಕೇವಲ ಅದರ ದರ್ಶನ ಮಾತ್ರದಿಂದಲೇ ಹೊಟ್ಟೆ ತುಂಬಿದ್ದರಿಂದ ಮಾಡಿದ್ದೆಲ್ಲಾ ಮನೆಯ ಮುಂದಿನ ತಿಪ್ಪೆಯನ್ನಲಂಕರಿಸಿದುದರಿಂದ ಅದರ ರುಚಿ ವರ್ಣನೆಗೆ ಅತೀತ. ನಿಮಗೆ ಬೇಕೆನ್ನಿಸಿದರೆ ಒಮ್ಮೆ ಮಾಡಿ, ರುಚಿ ನೋಡಿ ಬರೆಯಿರಿ. ಇದು ಕೇವಲ ನನ್ನವರ ಪಾಂಡಿತ್ಯ ಪ್ರದರ್ಶನದ ಕೇವಲ ಒಂದು ಸ್ಯಾಂಪಲ್ ಅಷ್ಟೇ. ಇನ್ನು ಅವರ ಭಂಡಾರದಲ್ಲಿ ಇಂಥವು ಬೇಕಾದಷ್ಟಿದೆ. ಆದರೆ ಈ ಲೇಖನವನ್ನು 350 ಪದಗಳಿಗೆ ಸೀಮಿತಗೊಳಿಸಿರುವುದರಿಂದ ಇಷ್ಟಕ್ಕೇ ನಿಲ್ಲಿಸುವುದು ಅನಿವಾರ್ಯ.

ಆ ದಿನದ ಬಿಸಿಬೇಳೆ ಭಾತ್ ಪ್ರಸಂಗದ ನಂತರ ಹಸಿವಿನಿಂದ ಚುರುಗುಟ್ಟುತ್ತಿದ್ದ ಎಲ್ಲರ ಹೊಟ್ಟೆಯನ್ನೂ ನಮ್ಮೂರಿನ 'ಗೀತಾಭವನ'ದ ಊಟದಿಂದ ತಣಿಸಿದ್ದು ಇನ್ನೊಂದೇ ಕಥೆ.

—ಕೆ.ಎಸ್. ವತ್ಸಲಾ ವಿಶ್ವನಾಥ್,



## ಉದ್ದಿನ ವಡೆ—ಚಟ್ನಿ

ನಾವು ವರ್ಗವಾಗಿ ತ್ರಿವೇಂದ್ರಂಗೆ ಬಂದ ಹೊಸದರಲ್ಲಿ ಇವರಿಗೆ ಇವರ ಬ್ಯಾಂಕಿನಲ್ಲಿ ಒಬ್ಬ 'ಅಯ್ಯರಿ' ಪರಿಚಯವಾಯ್ತು. ಸದ್ಯ ಇವರಂತೂ ಒಬ್ಬ ಬ್ರಾಹ್ಮಣನಾದ್ರೂ ಸಿಕ್ಕನೆಂದು ದಿನಾ ಅವನು–ಇವರು ಒಟ್ಟಿಗೆ ಕುಳಿತು ಊಟ ಮಾಡುತ್ತಾ ಮನೆಯ ವಿಷಯಗಳನ್ನು ಹೇಳಿಕೊಳ್ಳುತ್ತಿದ್ದರು. ಅವನಂತೂ ಪಕ್ಕಾ ಅಯ್ಯರ್, ಹೆಂಡತಿಯನ್ನು ಮೂರು ದಿನ ಬೇರೆಯಾಗಿ ಕೂರಿಸುತ್ತಿದ್ದನಂತೆ ಮತ್ತು ಪ್ರತೀ 'ಅಮವಾಸ್ಯೆ' ವಡೆ–ಪಾಯಸ ಮಾಡಿ 'ತರ್ಪಣ' ಬೇರೆ ಕೊಡುತ್ತಿದ್ದನಂತೆ. ಆದರೆ ನಮ್ಮವರು ಜಂಭಕ್ಕಾಗಿ "ನಾನು ಹಾಗೇನಿಲ್ಲಪ್ಪ. ಅದೂ ಅಲ್ಲದೆ ನಮ್ಮ ಕಡೆ ಅದನ್ನು ಬಿಡುದಿನಗಳಲ್ಲಿ ಮಾಡುವುದು ನಿಷಿದ್ಧವೆಂದು ನನಗೆ ಅಡಿಗೆ ರುಚಿ ನೋಡಿ ಗೊತ್ತೇ ಹೊರತು ಮಾಡಲು ಬರುವುದಿಲ್ಲ" ಎಂದು ಹೇಳಿ ಬಂದು, ನನಗೂ ಸಹ ಅವನ ಹೆಂಡತಿಯ ಹತ್ತಿರ ಇಲ್ಲಿಗೆ ಬಂದಾಗ ಹಾಗೇ ಹೇಳಬೇಕೆಂದಿದ್ದರು.

ಒಂದು ಭಾನುವಾರ ನನ್ನ ಎಂಟು ವರ್ಷದ ಮಗ "ಅಪ್ಪಾ, ನಾವು ಈ ಊರಿಗೆ ಬಂದಾಗಿಂದ ಹೋಟೆಲ್ಲಿಗೆ ಹೋಗಿಲ್ವಲ್ಲಪ್ಪ. ನನಗಂತು ಉದ್ದಿನ ವಡೆ ತಿನ್ನಬೇಕೆನ್ನಿಸಿದೆ. ಅದಕ್ಕೆ ಇವತ್ತು ಸಂಜೆ ಇಡ್ಲಿಗೆ ಉದ್ದನ್ನು Grinder ಗೆ ಹಾಕುವಾಗ ಸ್ವಲ್ಪ ತೆಗೆದು ಮಾಡಿಕೊಡಿ. ಈ ಅಮ್ಮಾ ಇದ್ದರೆ ಅದಕ್ಕೆಲ್ಲ ಒಪ್ಪಲ್ಲ" ಎಂದು ಹಟ ಹಿಡಿದ. ಸರಿ! ಯಜಮಾನರಿಗೂ ಆಸೆ ಆಗಿರಬೇಕು. ಆಗ್ಲಿ ಕಣೋ ಸಂಜೆಗೆ Sunday Special 'ಉದ್ದಿನ ವಡೆ–ಚಟ್ನಿ' ಮಾಡೇ ಬಿಡೋಣ" ಎಂದು ನಿರ್ಧಾರ ಮಾಡಿಬಿಟ್ರು.

ಅಪ್ಪ, ಮಗ ಸೇರಿ ಹಿಟ್ಟನ್ನು ತೆಗೆದು ಮಸಾಲೆಗಳನ್ನು ಬೆರಸಿ 'ಗರಗು ವಡಾ' ತಯಾರಿಸೇ ಬಿಟ್ಟರು. ಚಟ್ನಿಯೂ ರೆಡಿ ಆಯ್ತು. ಇನ್ನೇನು ಅವರಿಬ್ಬರೂ ಹಾಕಿಕೊಂಡು ನನ್ನ ತಟ್ಟೆಗೆ ತಂದು ಹಾಕುವಷ್ಟರಲ್ಲೇ ಇವರ ಅಯ್ಯರ್ ಸಂಸಾರ ಸಮೇತನಾಗಿ ಹಾಜರ್!



ರಾಮಚಂದ್ರ

ಎನ್ನಪ್ಪಾ ಘಮ ಘಮ Smell ವರದಿಕ್ಕೆ [ಏನಪ್ಪಾ, ಘಮ ಘಮ ವಾಸನೆ ಬರ್‍ತಿದೆ] Wife ಎಂಗೆ? ನೀಡಾ ಪಣ್ಣಿರಿಕ್ಕಿಯಾ [ಹೆಂಡತಿ ಎಲ್ಲಿ? ನೀನೇ ಮಾಡಿದ್ಯಾ?] ಅಂತ ಒಂದೇ ಸಮನೆ ಬಡಬಡಾಯಿಸ್ತಾ ಇರುವುದನ್ನು ಕೇಳಿ ನನಗೋ ನಗು ತಡೆಯಲಾಗುತ್ತಿಲ್ಲ. ಇವರಿಗೋ ಒಂದು ಕಡೆ ನಾಚಿಕೆ, ಅವಮಾನ, ಆಫೀಸ್‌ನಲ್ಲಿ ಫ್ರೆಂಡ್ ಹತ್ತಿರ ತಾನು ಅಷ್ಟೇನು ಸಂಪ್ರದಾಯಸ್ಥನಲ್ಲ ಎಲ್ಲಾ ಅಮ್ಮನ ಮನೇಲಿ ಅಷ್ಟೆ ಎಂದು ಹೇಳಿಬಿಟ್ಟಿದ್ದಾರೆ. ಆದರೆ ಅಷ್ಟರಲ್ಲೇ ನಾನು ಹೊರಗೆ ಬಂದು "ಇವರೇನೋ ಎಲ್ಲಾ ಬಿಟ್ಟು ಬಿಡು ನಾವಿಬ್ಬರೇ ಇದ್ದಾಗ ಈ ಮಡಿ– ಎಲ್ಲಾ ಬೇಡ ಅನ್ನುತ್ತಾರೆ. ನಾನೇ ನಮ್ಮ ಸಂಪ್ರದಾಯ, ಸಂಸ್ಕೃತಿಗಳನ್ನು ಬಿಡೋಕೆ ಆಗುತ್ತಾ. ದೂರ ಇದ್ದರೇನು ನಮ್ಮ ಕಟ್ಟು–ಪಾಡುಗಳನ್ನು ಬಿಡಲಾಗಲ್ಲ" ಎಂದೆ. ಅದಕ್ಕೆ ಅವರ ಫ್ರೆಂಡ್ "ಆಮಾ, ಆಮಾ, ಅದು ತುಂಬಾ ಒಳ್ಳೇದು ನನಗೂ ಅದೇ ಇಷ್ಟ" ಎಂದು ವಡಾ–ಚಟ್ನಿ ನಿಮ್ಮೆಜಮಾನರು ತುಂಬಾ ಚೆನ್ನಾಗಿ ಮಾಡಿದ್ದಾರೆಂದು ಹೊಗಳಿ ತಿಂದು ಮುಗಿಸಿದ್ದ. ಇವರು ಮಾತ್ರ ಅವನೆದುರಿಗೆ ನನ್ನ ಮುಖ ನೋಡುವ ಸಾಹಸ ಮಾಡಲಿಲ್ಲ. ಅವನಂತೂ ನಾವು ಮತ್ತೆ ವರ್ಗವಾಗಿ ಬೇರೆ ಊರಿಗೆ ಬರೋವರೆಗೂ ಆಫೀಸ್‌ನಲ್ಲಿ ಪ್ರತೀ ತಿಂಗಳೂ ವೈಫ್ ರಜಾ ಅಂದ್ರೆ, "ಉದ್ದಿನ ವಡೆ ಮಾಡಿದ್ರೆ ನನ್ನ ಮರೀಬೇಡಾಪ್ಪ" ಅಂತ ಚುಡಾಯಿಸ್ತಿದ್ದನಂತೆ.

—ಅಂಬಿಕಾ ರಾಮಚಂದ್ರ



## ದಿಢೀರ್ ದೋಸೆ

ನನ್ನ ಯಜಮಾನರ ನಳಪಾಕ ಸವಿಯುವ ಯೋಗವಿದ್ದರೆ ಅದು ನಾನು ಬರವಣಿಗೆಯಲ್ಲಿ ತಲ್ಲೀನಳಾಗಿದ್ದ ಅವಧಿಯಲ್ಲಿ. ಈ ಅವಧಿ ಆಗಾಗ ಬರುತ್ತಲೇ ಇರುತ್ತದೆ. ನನ್ನ ಕೈಯಲ್ಲಿ ಪೆನ್ನು ಇದೆ ಎಂದರೆ ಅವರ ಕೈಯಲ್ಲಿ ಸೌಟು ಇದೆ ಎಂದರ್ಥ. ಅಷ್ಟು ಸಹಕಾರ! ನಮ್ಮದು ಹಳ್ಳಿ ಮನೆ. ತೋಟ–ಗದ್ದೆಗಳ ಬದುಕು, ಅದಕ್ಕೆ ತಕ್ಕಂತೆ ಕೆಲಸಗಳ ವಹಿವಾಟು ಜಾಸ್ತಿ. ಆದರೂ ನನ್ನ ಸಾಹಿತ್ಯಕೃಷಿ ನಿರಾತಂಕವಾಗಿ ಸಾಗಿದೆ ನನ್ನ ಯಜಮಾನರ ಸೌಟಿನ ಸಹಕಾರದಿಂದ!

ಸಾಮಾನ್ಯವಾಗಿ ಕಥೆ–ಕಾದಂಬರಿಗೆ ವಸ್ತುವಿನ ಆಯ್ಕೆ ಮಾಡಿ ಟಿಪ್ಪಣಿ ಸಿದ್ಧ ಪಡಿಸಿದ ಮೇಲೆ ಹೊರಗಿನ ಮೇಜು–ಖುರ್ಚಿಗೆ ಸಾಗುತ್ತದೆ ನನ್ನ ಸವಾರಿ. ಗಂಟೆಗಟ್ಟಲೆ ತಲ್ಲೀನಳಾಗಿ ಬರೆಯುವುದು ನನ್ನ ಕೆಲಸ. ಆಗೆಲ್ಲ ನನಗೆ ತೊಂದರೆಯಾಗದಂತೆ ಪಾತ್ರೆಗಳ ಕಿಣಿಕಿಣಿಯೊಂದಿಗೆ ಲಯಬದ್ಧವಾಗಿ ಗುಣುಗುಡುತ್ತ ಹೊಸರುಚಿ ಮಾಡುವುದು ನನ್ನ ಯಜಮಾನರ ಕೆಲಸ. ಆಗ ಅವರೇನು ಅಡಿಗೆ ಮಾಡಿದರೂ ತುಟಿ ಎರಡು ಮಾಡದೆ ತಿನ್ನುತ್ತೇನೆ. ನನ್ನ ಮಕ್ಕಳೆದುರು ಹೊಗಳುತೇನೆ. ಸಾಂಬಾರು ಖಾರವಾದರೆ ನೀರು ಬೆರಸಿ, ಉಪ್ಪು ಕಡಿಮೆಯಾದರೆ ಹಾಕಿಕೊಂಡು, ಸಿಹಿಯಾದರೆ ನಿಂಬೆಹಣ್ಣು ನಂಜಿಕೊಂಡು ಒಟ್ಟಿನಲ್ಲಿ ತಿನ್ನುವ ಸಹಕಾರ ನಮ್ಮದು! (ಅವರು ಅಡಿಗೆ ಮುಗಿಸಿದ ಮೇಲೆ ಕೋಣೆ ಎಷ್ಟು ಹಗರಣ ಮತ್ತು ಅದನ್ನೆಲ್ಲ ಸ್ವಚ್ಛಗೊಳಿಸಲು ನನಗೆ

ಎಷ್ಟು ಸಮಯ ಬೇಕು? ಎಂಬ ಪ್ರಶ್ನೆ ಕೇಳಬೇಡಿ!)

ಅವರು ಮಾಡುವ ರುಚಿಯ ಬಗ್ಗೆ ಹೇಳುತ್ತ ಹೋದರೆ ನಿಮ್ಮ ಬಾಯಲ್ಲಿ ನೀರೂರೀತು ಜೋಕೆ! ಕಡಿಮೆ ಖರ್ಚಿನಲ್ಲಿ ಎಂತಹ ರುಚಿ! ಬೆಳಗಿನ ಉಪಹಾರಕ್ಕೆ ಹಚ್ಚಿದ ಅವಲಕ್ಕಿ ಮತ್ತು ದೋಸೆ ಎಂದರೆ ಅವರಿಗಿಷ್ಟ. ಹಚ್ಚಿದ ಅವಲಕ್ಕಿ ಕ್ರಮ ಎಲ್ಲರಿಗೂ ತಿಳಿದದ್ದೇ. ಆದರೆ ಮೃದುವಾದ ದೋಸೆ ಅವರಿಂದಲೇ ಮಾಡಿಸಿ ತಿನ್ನಬೇಕು. ಮಾಡುವ ಕ್ರಮ ಅವರಿಂದಲೇ ಕೇಳಿ ತಿಳಿಯಿರಿ–

"ಕುಸುಲಕ್ಕಿ ಮತ್ತು ಬೆಳ್ತಿಗೆ ಅಕ್ಕಿ ತಲಾ ಒಂದು ಬಟ್ಟಲು, ಅರ್ಧ ಬಟ್ಟಲು ಉದ್ದಿನಬೇಳೆ, ಒಂದು ಮುಷ್ಟಿ ಮೆಂತ್ಯ ಇಷ್ಟನ್ನು ನೆನೆಸಿ ಅರೆಯಿರಿ. ಅರೆಯುವಾಗ ನಾಲ್ಕು ಬಾಳೆಹಣ್ಣು, ಒಂದು ಮುಷ್ಟಿ ಅವಲಕ್ಕಿ ಸೇರಿಸಿರಿ. ರಾತ್ರಿ ಅರೆದಿಟ್ಟ ಈ ಹಿಟ್ಟಿಗೆ ಬೆಳಿಗ್ಗೆ ಉಪ್ಪು ಸೇರಿಸಿ ದೋಸೆ ಮಾಡಿ ನೋಡಿ!''

ಹೌದು, ಈ ದೋಸೆಗೆ ಮೈತುಂಬಾ ತೂತುಗಳು, ಹತ್ತಿಗಿಂತಲೂ ಮೃದು. ಬೆಳಿಗ್ಗೆ ಮಾಡಿಟ್ಟ ದೋಸೆ ಸಂಜೆ ತನಕ ಗಟ್ಟಿಯಾಗುವುದಿಲ್ಲ.

ಇನ್ನೊಂದು ದಿಢೀರ್ ದೋಸೆ. ಇದರ ಗುಟ್ಟು ತಿಳಿದದ್ದು ನಾನು ಲೇಖಕಿಯರ ಸಮ್ಮೇಳನವೊಂದನ್ನು ಮುಗಿಸಿ ಹಿಂದಿರುಗಿ ಬಂದಾಗ. ಸಮ್ಮೇಳನ ಪೂರೈಸಿದ ಗುಂಗಿನಲ್ಲಿ ರಾತ್ರಿ ಕಳೆದು ಬೆಳಿಗ್ಗೆ ಏಳುವಾಗ ನನ್ನ ಯಜಮಾನರು ದೋಸೆ ಹಿಡಿದು ನನ್ನೆದುರು ಹಾಜರು. "ನೀನಿಲ್ಲದ ನಾಲ್ಕು ದಿನಗಳೂ ಅರೆಯುವ ಕಲ್ಲು ಮುಟ್ಟಲಿಲ್ಲ. ಈ ದೋಸೆ ಹೇಗಿದೆ ನೋಡು!'' ಎಂದರು. ಅಪರೂಪದ ಈ ದೋಸೆ ಒಳಗೆ ಬೆಂದಿರುವುದಿಲ್ಲ, ಅರ್ಧ ಹಸಿ, ಬಿಸಿ, ಎಲ್ಲೋ ನಾಲಿಗೆಗೆ ಮೆತ್ತಿದ ಕಿರಿಕಿರಿ. ಆದರೂ ಪ್ರಶ್ನಿಸುತ್ತೇನೆ, "ರುಚಿಯಾಗಿದೆ, ಹೇಗೆ ಮಾಡಿದಿರಿ?''

"ಅಕ್ಕಿ ಹಿಟ್ಟಿನ ಮೇಲೆ ಹೆಚ್ಚಿದ ನೀರುಳ್ಳಿ, ಗರಂ ಮಸಾಲೆ, ಜೀರಿಗೆ ಪುಡಿ, ಕುತ್ತುಂಬರಿ ಸೊಪ್ಪು, ಉಪ್ಪು ಹಾಕಿ, ತುಪ್ಪದ ಒಗ್ಗರಣೆ ಕೊಡಿ. ಅನಂತರ ಬಿಸಿ ನೀರು ಬೆರೆಸಿ ಮೊಸರಿನ ಹದಕ್ಕೆ ಕಲಸಿ ಕಾವಲಿಯ ಮೇಲೆ ದಪ್ಪಕ್ಕೆ ಹುಯ್ದು ತುಪ್ಪದಲ್ಲಿ ಬೇಯಿಸಿದರೆ ದಿಢೀರ್ ದೋಸೆ ರೆಡಿ!''

ದಿಢೀರ್ ದೋಸೆ ಕಾಲಕಾಲಕ್ಕೆ ಬದಲಾಗುತ್ತದೆ ಅವರ ಕೈ ಚಳಕದಿಂದ. ಟೊಮೆಟೋ, ಕ್ಯಾಬೇಜ್, ದಾಸವಾಳದ ಹೂವು, ತೊಂಡೆಸೊಪ್ಪು ಹೀಗೆ ಏನೆಲ್ಲಾ ಬೆರೆಸಿ ಹೊಸರುಚಿ ಮಾಡುತ್ತ ನಮ್ಮ ಕುತೂಹಲ ಕೆರಳಿಸುತ್ತಾರೆ. ಕೆಲವೊಮ್ಮೆ ತಿನ್ನುವುದೂ ನಮಗೆ ಶಿಕ್ಷೆಯೇ!

"ದಿನಾ ಒಂದು ಸಾರು ತಿಂದು ನಾಲಿಗೆ ಜಿಡ್ಡುಗಟ್ಟಿದೆ'' ಎನ್ನುತ್ತ ನಾನು ಬರೆಯದ ದಿನಗಳಲ್ಲಿ ಅಥವ ನೆಂಟರಿಷ್ಟರು ಬಂದಾಗಲೂ ಅವರು ಅಡಿಗೆ ಕೋಣೆಗೆ ಹಾಜರು. ಅರ್ಧ ಗಂಟೆಯಲ್ಲಿ ಅವರಿಂದ ಸಾರು ಸಿದ್ಧ. ಮನೆ ತುಂಬಾ ಘಮ ಘಮ. ಕುತ್ತುಂಬರಿ, ಜೀರಿಗೆ, ಕಾಳು ಮೆಣಸು, ಒಣ ಮೆಣಸು ಮತ್ತು ಇಂಗು ಹುರಿದು ಬೀಸಿದ ಸಾರು! ಈ ಸಾರಿಗೆ ನಾಲ್ಕು ತರಕಾರಿ ಹೋಳು, ಅರ್ಧ ತೆಂಗಿನಕಾಯಿ ಹಾಕಿದರೆ ಸಾಂಬಾರು ರೆಡಿ. ಅವರ ಸಾಂಬಾರು ಖಾರ ಜಾಸ್ತಿ, ಉಪ್ಪು ಕಡಿಮೆ. ಬಾಳೆಹೂವಿನ ಗೊಜ್ಜು, ಬಾಳೆದಿಂಡಿನ ಪಲ್ಯ, ಹಲಸಿನ ಬೆಂದಿ, ಹೀರೇಕಾಯಿ ಗೊಜ್ಜು ಇವಕ್ಕೆಲ್ಲ ಜೀರಿಗೆ ಒಗ್ಗರಣೆ. ಅದೆಂತಹ ರುಚಿ! ಬೆಳ್ಳುಳ್ಳಿ ಬೇಕೇ? ಸೇರಿಸಿ ನೀವೂ ಒಮ್ಮೆ ಮಾಡಿ ನೋಡಿ!

ಒಮ್ಮೆ ಅವರಿಗೆ ಹೋಳಿಗೆ ತಿನ್ನುವ ಆಸೆಯಾಯಿತು. ನನಗೋ ಆ ತಿಂಗಳ ಕೊನೆಗೆ ಒಂದು ಕಾದಂಬರಿ ಬರೆದು ಸ್ಪರ್ಧೆಗೆ ಕಳುಹಿಸಬೇಕಿತ್ತು. ಸಮಯ ವ್ಯಯ ಮಾಡುವ ವ್ಯವಧಾನ ನನ್ನಲ್ಲಿರಲಿಲ್ಲ. ಬರೆಯಲು ಕುಳಿತಿದ್ದೆ. ಅವರು ತಾನೇ ಮಾಡುತ್ತೇನೆಂದು ಸಿದ್ಧರಾಗಿ ಬಿಟ್ಟರು. ಆದರೆ ಬೆಂದ ಕಡಲೆಗೆ ಸಕ್ಕರೆ ಹೆಚ್ಚಾಗಿಯೋ, ನೀರು ಉಳಿದ ಕಾರಣವೋ ಹೂರಣ ಓಚಿ ಓಚೆ. ಕಣಕದೊಳಗೆ ತುಂಬಲಾಗದೆ ಫಜೀತಿ. ಯಜಮಾನರು ಸಿಟ್ಟಿನಲ್ಲಿ ಎಲ್ಲವನ್ನೂ ಹಾಗೇ ಒತ್ತಿಟ್ಟು ತೋಟಕ್ಕೆ ಹೊರಟುಹೋದರು. ಎರಡು ತಾಸಿನ ನಂತರ ಹಿಂದಿರುಗಿದವರು ನಾನಿನ್ನೂ ಬರೆಯುವ ಮೇಜಿನ ಬಳಿ ಕುಳಿತದ್ದು ನೋಡಿ ಸದ್ದಿಲ್ಲದೆ ಜಾರಿದರು ಅಡಿಗೆಕೋಣೆಗೆ. ಅಲ್ಲೇನು ಮಾಡಿದರೋ ನಾನರಿಯೆ, ಅರ್ಧ ಗಂಟೆ ನಂತರ ಹೋಗಿ ನೋಡುತ್ತೇನೆ, ಹೇಗೋ ಒಂದು ತರಹದ ರೊಟ್ಟಿಯಂತೆ ದಪ್ಪಗಾದ ಗಟ್ಟಿ ಹೋಳಿಗೆ ಸಿದ್ಧವಾಗುತ್ತಿದೆ. ನನ್ನ ಹಿರಿಮಗ ತಂದೆಗೆ ಜೊತೆಗೂಡಿದ್ದ. ನನ್ನ ಕಣ್ಣುಗಳು ನೀರಾಡಿದುವು. "ಏಳಿ, ಮಾಡುತ್ತೇನೆ'' ಎಂದೆ. "ನೀನು ಬರಿ, ಸ್ಪರ್ಧೆಗೆ ಕಾದಂಬರಿ ಕಳುಹಿಸಿದ ಮೇಲೆ ಮೆತ್ತಗಿನ ಹೋಳಿಗೆ ಮಾಡಿ ಹಾಕು. ಈಗ ನನ್ನ ಸ್ಪೆಷಲ್ ತಿಂದು' ನೋಡು'' ಎಂದರು ಆತ್ಮೀಯವಾಗಿ. ನಾನೆಲ್ಲೋ ಕರಗಿ ಹೋದೆ. ಗಟ್ಟಿ ಹೋಳಿಗೆ ತಿನ್ನಲು ಕಷ್ಟವಾದರೂ ಮೃದುವಾಗಿದೆ ಎನ್ನುತ್ತ ಬಾಯಿ ಚಪ್ಪರಿಸಿ ತಿಂದೆ.

ಹೀಗೆ ಇಪ್ಪತ್ತೈದು ವರ್ಷದ ನನ್ನ ಬರವಣಿಗೆಯ ಉತ್ಸಾಹಕ್ಕೆ ನನ್ನ ಯಜಮಾನರ ನಳಪಾಕದಲ್ಲಿ ಸಿಹಿ–ಕಹಿಯಿರಲಿ, ಹಸಿ–ಬಿಸಿಯಿರಲಿ, ಹುಳಿ–ಖಾರವಿರಲಿ ಹೊಂದಿಕೊಳ್ಳುವುದು ನನ್ನ ಅಭ್ಯಾಸ. ಅವರೇನು ಮಾಡಿ ಹಾಕಿದರೂ ಬರವಣಿಗೆಗೆ ಸಹಕಾರವೀಯುವ ನನಗೆ ಅದೇ ಪಂಚಭಕ್ಷ್ಯ ಪರಮಾನ್ನ!

—ಎ.ಪಿ. ಮಾಲತಿ

(ಮುಂದಿನ ಸಂಚಿಕೆಯಲ್ಲಿ)

'ಮೈಸೂರು ದಸರ:

38 ನೇ ಪುಟದಿಂದ)

ಮೈಸೂರು ದಸರೆಯು 'ರಾಜ ಒಡೆಯರ್'ರವರಿಂದ ಆರಂಭವಾಯಿತು. ಒಂಬತ್ತು ದಿನಗಳು ನಡೆಯುವ ಈ 'ನವರಾತ್ರಿ' ಉತ್ಸವಕ್ಕೆ ಸುಮಾರು 375 ವರ್ಷಗಳು ಕಳೆದು ಹೋಗಿದ್ದರೂ, ಮೈಸೂರಿನಲ್ಲಿ ನಡೆದ ಪ್ರಥಮ 'ದಸರೆ' ಸುಮಾರು 183 ವರ್ಷಗಳ ಹಿಂದೆ 1799ನೆಯ ಮೇ 4ರಂದು ನಡೆದ ನಿರ್ಣಾಯಕ ಯುದ್ಧದಲ್ಲಿ 'ಟಿಪ್ಪು ಸುಲ್ತಾನ್' ಮಡಿದ ನಂತರ ಒಡೆಯರ್‌ರವರು ತಮ್ಮ ರಾಜಧಾನಿಯನ್ನು ಶ್ರೀರಂಗಪಟ್ಟಣದಿಂದ ಮೈಸೂರಿಗೆ ವರ್ಗಾಯಿಸಿಕೊಂಡ ನಂತರವೇ ನಡೆಯಿತು.

30ನೇ ಜೂನ್ 1799ನೆಯ ಭಾನುವಾರ ಮೈಸೂರು ಲಕ್ಷ್ಮೀನಾರಾಯಣ ದೇವಸ್ಥಾನದಲ್ಲಿ (ಆಗಿನ್ನು ಮೈಸೂರಿನ ಈಗಿನ ಅರಮನೆ ನಿರ್ಮಾಣಗೊಂಡಿರಲಿಲ್ಲ) ಐದು ವರ್ಷದ ಬಾಲಕ ಮುಮ್ಮಡಿ ಕೃಷ್ಣರಾಜ ಒಡೆಯರ್‌ರವರು ಸಿಂಹಾಸನವನ್ನೇರಿದರು. ಅದೇ ವರ್ಷದಲ್ಲಿ "ನವರಾತ್ರಿ'' ಉತ್ಸವವನ್ನು ಪ್ರಥಮಬಾರಿಗೆ ನಡೆಸಲಾಯಿತು.

ಸಾಂಸ್ಕೃತಿಕ, ಐತಿಹಾಸಿಕ ರಾಜಧಾನಿಯಾದ ಉದ್ಯಾನನಗರ ಮೈಸೂರಿನಲ್ಲಿ ದಸರೆಯು ತನ್ನದೇ ಆದ ಗಾಂಭೀರ್ಯ ಹಾಗೂ ಸುಂದರ ಸೊಬಗಿನಿಂದ ವಿಶ್ವವಿಖ್ಯಾತಿಯನ್ನು ಪಡೆಯಿತು. ಮೈಸೂರು ದಸರೆಯಂತೆ ಮೈಸೂರು ರೇಷ್ಮೆ, ಮೈಸೂರು ಶ್ರೀಗಂಧವೂ ವಿಶ್ವ ವಿಖ್ಯಾತವಾಗಿದೆ.

ಮೈಸೂರು ದಸರೆಯ ಪ್ರಮುಖ ಆಕರ್ಷಣೆ 'ಜಂಬೂಸವಾರಿ'. ಶ್ರೀಕೃಷ್ಣರಾಜ ಒಡೆಯರರವರಿಂದ ಹಿಡಿದು ಜಯಚಾಮರಾಜೇಂದ್ರ ಒಡೆಯರ್‌ರವರ ಕಾಲದವರೆಗೂ ವೈಭವಯುತವಾಗಿ ನಾಡಿನ ನಾಡ ಹಬ್ಬವಾಗಿ ಆಚರಿಸಲ್ಪಡುತ್ತಿತ್ತು. ಸಿಂಗರಿಸಿದ ಪಟ್ಟದಾನೆಯ ಮೇಲಿದ್ದ ಚಿನ್ನದ ಅಂಬಾರಿಯಲ್ಲಿ ಮಹಾರಾಜರು ಕುಳಿತು ಮೆರವಣಿಗೆಯಲ್ಲಿ ಬನ್ನಿಮಂಟಪಕ್ಕೆ ಹೊರಡುತ್ತಿದ್ದರು. ರಸ್ತೆಯ ಉದ್ದಕ್ಕೂ, ಎರಡೂ ಕಡೆಗಳಲ್ಲಿ ಜನಸ್ತೋಮ ತುಂಬಿಕೊಂಡಿರುತ್ತಿತ್ತು. ಮೆರವಣಿಗೆಯಲ್ಲಿ ಪೋಲೀಸ್‌ಪಡೆ, ಎನ್.ಸಿ.ಸಿ. ಮಹಿಳಾ ದಳ, ಸೇವಾದಳ, ಸ್ಕೌಟ್, ಇವರುಗಳೊಡನೆ ಕರ್ನಾಟಕದ ಸಂಸ್ಕೃತಿಯನ್ನು ಮೆರೆಸುವ, ಐತಿಹಾಸಿಕ, ಸಾಂಸ್ಕೃತಿಕ, ವ್ಯವಸಾಯ, ಕೈಗಾರಿಕೆ ಇವುಗಳ ಹಾಗೂ ನಾಡಿನ ಮೂಲೆ ಮೂಲೆಯ ಜಾನಪದ ಸಂಸ್ಕೃತಿಯನ್ನು ಬಿಂಬಿಸುವ ಸ್ತಬ್ಧ ಚಿತ್ರಗಳು, ವಿವಿಧ ಜಿಲ್ಲೆಗಳ ಐತಿಹಾಸಿಕ ಸಂಗತಿಗಳು, ಪರಂಪರೆಗಳನ್ನು ಪ್ರತಿಬಿಂಬಿಸುವ ಸ್ತಬ್ಧ ಚಿತ್ರಗಳು, ಪ್ರತಿಮೆಗಳು, ರೂಪಕಗಳು ಇವುಗಳು ಜಂಬೂಸವಾರಿಯ ರಮ್ಯತೆಯನ್ನು ಇಮ್ಮಡಿ ಮುಮ್ಮಡಿಯಾಗಿ ಬೆಳೆಸುತ್ತಿವೆ.

ಬನ್ನಿಮಂಟಪ ಮುಟ್ಟಿದ ನಂತರ ಅಲ್ಲಿ ಸಾಂಪ್ರದಾಯಿಕ ಶಾಸ್ತ್ರವಿಧಿ ಪ್ರಕಾರ ಪೂಜೆಯನ್ನು ಸಲ್ಲಿಸಲಾಗುತ್ತಿತ್ತು. ಈ ಪೂಜೆ ಮುಗಿದ ನಂತರ ಮೆರವಣಿಗೆ ಅರಮನೆಗೆ ಮರಳುತ್ತಿತ್ತು. ಮೆರವಣಿಗೆ ಹೊರಟಾಗ ಅದರ ಅಂದ ಒಂದು ಬಗೆಯದಾಗಿದ್ದರೆ, ಅದು ಮರಳಿ ಅರಮನೆಯತ್ತ ಹೊರಟಾಗಿನ ಅದರ ಅಂದ ಇನ್ನೊಂದು ಬಗೆಯದು.

ದಾರಿಯುದ್ದಕ್ಕೂ ಏರ್ಪಡಿಸಿರುವ ದೀಪೋತ್ಸವವು ರಾತ್ರಿಯನ್ನೇ ಹಗಲನ್ನಾಗಿ ಮಾರ್ಪಡಿಸುವಂತಿರುತ್ತಿತ್ತು. ಸಾಕ್ಷಾತ್ ದೀಪದಲ್ಲಿಯೇ ಮೈಸೂರು ನಗರವನ್ನು ಎರೆಯುತ್ತಿರುವಂತೆ ಭಾಸವಾಗುತ್ತಿತ್ತು. ಚಾಮುಂಡಿ ಬೆಟ್ಟದ ಮೇಲೆ ಕಾಣುವ 'ಸುಸ್ವಾಗತ' ಎಂಬ ದೀಪಾಲಂಕೃತಮಾಲೆ, ಗಗನದಿಂದ ತೂಗಿಬಿಟ್ಟ ಅಕ್ಷರಗಳ ಸಾಲಿನಂತೆ, ನಯನ ಮನೋಹರವಾಗಿದೆ ಇಂದಿಗೂ. ಅರಮನೆಯ ದೀಪಗಳಂತೂ ಕಣ್ಣಿಗೆ ಹಬ್ಬವನ್ನುಂಟು ಮಾಡುತ್ತವೆ.

ಆದರೆ ಇಂದಿನ ದಸರೆಯು ಗಮ್ಮತ್ತೇ ಬೇರೆ. ಮಹಾರಾಜರ ಬದಲಿಗೆ 'ಚಾಮುಂಡೇಶ್ವರಿ' ಮಾತೆಯ ಮೆರವಣಿಗೆ ರಾರಾಜಿಸುತ್ತಿದೆ. ಹಿಂದಿನ ದಸರಾ ಮೆರವಣಿಗೆಯ ವೈಭವ ಇಂದಿಲ್ಲ. ಕೇವಲ ಯಾಂತ್ರಿಕವಾಗಿಬಿಟ್ಟಿದೆ. ಈಗ ಪ್ರಾಚೀನ ಭವ್ಯ ಪರಂಪರೆ, ನವ್ಯದ ನಾಜೂಕಿನ ಮಿಲನ ಇಲ್ಲಿ ಮೇಳೈಸಿದೆ.

ಮಾನಸ ಜೈನ ಹಳ್ಳೀ ಸತ್ಯನಾರಾಯಣನ್

ವರ್ಣ ಪಾರದರ್ಶಿಕೆಗಳು :
ಎಸ್. ತಿಪ್ಪೇಸ್ವಾಮಿ

# ಆತನ ಕನಸು ಕಣ್ಮರೆಯಾಗಲು ಬಿಡಬೇಡಿರಿ.

# ಮಕ್ಕಳ ಉಪಹಾರ ವೃದ್ಧಿ ನಿಧಿಯ ಮುಖಾಂತರ ಆ ಕನಸುಗಳನ್ನು ನನಸಾಗಿಸಿರಿ.



ನಿಮ್ಮ ಕಂದನಿಗೆ, ಆತನೊಂದಿಗೇ ಬೆಳೆಯುವ ಉಪಹಾರವೊಂದನ್ನು ನೀಡಿರಿ. ಯುನಿಟ್ ಟ್ರಸ್ಟ್‌ನ ಮಕ್ಕಳ ಉಪಹಾರ ವೃದ್ಧಿ ನಿಧಿಯಲ್ಲಿ ವಿನಿಯೋಗಿಸಿರಿ. ನಿಮ್ಮ ಮಗುವು 21ರ ಹರೆಯದಲ್ಲಿ ಕಾಲಿರಿಸಿದಾಗ, ಆತ ತಾನೇನು ಮಾಡಬಯಸುವನೋ ಅದಕ್ಕಾಗಿ, ನೀವು ವಿನಿಯೋಗಿಸಿದ ಹಣ ಸಿದ್ಧವಾಗಿ ಸಹಾಯಕ್ಕೆ ಒದಗುವುದು.

ಒಂದೇ ಗಂಟಿನಲ್ಲಿ ನೀವೊಂದು ಮೊಬಲಗನ್ನು ಆತನಿಗೆ ಉಪಹಾರ ನೀಡಬಲ್ಲಿರಿ. ಅಥವಾ ಪ್ರತಿ ವರ್ಷವೂ ಸಣ್ಣ ಸಣ್ಣ ಮೊತ್ತಗಳನ್ನು ಕೂಡಿಸುತ್ತ ಬರಬಲ್ಲಿರಿ. ಯಾವ ರೀತಿಯಲ್ಲಾದರೂ, ನಿಮ್ಮ ಕಂದನಿಗೆ 21 ತುಂಬಿದಾಗಲೇ ಆತ ಲಕ್ಷಾಧೀಶನಾಗುವುದನ್ನು ಕಾಣಬಲ್ಲಿರಿ. (18ರ ಪ್ರಾಯದಲ್ಲೂ, ಅಗತ್ಯವಿದ್ದರೆ ಆತ ಹಣವನ್ನು ಹಿಂದಕ್ಕೆ ಪಡೆಯಬಹುದು).

ಯುನಿಟ್ ಟ್ರಸ್ಟ್‌ನ ಮಕ್ಕಳ ಉಪಹಾರ ವೃದ್ಧಿ ನಿಧಿ. ಏಕೆಂದರೆ, ಒಂದಿಷ್ಟೇ ಯೋಜಿಸಿ ಭವ್ಯ ಭವಿಷ್ಯದ ಭರವಸೆ ಗಳಿಸಬಲ್ಲಿರಿ.

ಎಪ್ಲಿಕೇಶನ್ ಫಾರ್ಮ್‌ಗಳನ್ನು ಯುನಿಟ್ ಟ್ರಸ್ಟ್‌ನ ಶಾಖೆಗಳಲ್ಲಿ, ಎಲ್ಲಾ ಬ್ಯಾಂಕ್‌ಗಳಲ್ಲಿ ಮತ್ತು ಕಲೆಕ್ಷನ್ ಸೆಂಟರ್‌ಗಳಲ್ಲಿ ಸ್ವೀಕರಿಸಲಾಗುತ್ತದೆ.

ನಮ್ಮ ಎಪ್ಲಿಕೇಶನ್ ಫಾರ್ಮ್-ಕಮ್-ಬ್ರೋಶರ್‌ಗಾಗಿ ಯಾವುದೇ ಯುನಿಟ್ ಟ್ರಸ್ಟ್ ಶಾಖೆ, ಮುಖ್ಯ ಪ್ರತಿನಿಧಿ ಅಥವಾ ಏಜಂಟರನ್ನು ಸಂಪರ್ಕಿಸಿರಿ.

ಮಕ್ಕಳ ಉಪಹಾರ ವೃದ್ಧಿ ಯೋಜನೆ

~~13%~~ 14% ಡಿವಿಡೆಂಡ್

ಬೋನಸ್ ಪ್ರತಿ ~~5~~ 3 ವರ್ಷಗಳಿಗೊಮ್ಮೆ.



**ಯುನಿಟ್ ಟ್ರಸ್ಟ್ ಆಫ್ ಇಂಡಿಯಾ**

22 ಮಿಲಿಯನ್‌ಗೂ ಮಿಗಿಲಾದ ಯೂನಿಟ್‌ಧಾರಕರ ಸೇವೆಯಲ್ಲಿ

[illegible]

**Branch Offices:** • Bangalore Ph: 263739 • Hubli Ph: 51098

Sista's UTI 1968 92 KN A

ಧಾರಾವಾಹಿ

# ಸಪ್ತಸ್ವರ

—ಗೀತಾ ಸೀತಾರಾಮ್

ಇಲ್ಲಿಯವರೆಗೆ...
ಅಲೋಕನಂತಹ ವ್ಯಕ್ತಿಯಿಂದಾಗಿ ಗಂಡಿನ ಸಹವಾಸವೇ ಸಾಕೆಂದುಕೊಂಡ ರಜನಿಗೆ ವಿಶ್ವಾಸ್‌ನ ವ್ಯಕ್ತಿತ್ವ ವಿಶ್ವಾಸ ಹುಟ್ಟಿಸುತ್ತದೆ. ಬಿಂದು ರೇಖಾಳನ್ನು ದತ್ತು ಪಡೆಯುವ ನಿರ್ಣಯ ವ್ಯಕ್ತಪಡಿಸಿದಾಗ ಎರಡು ಮಕ್ಕಳ ಹೊರೆ ಹೊತ್ತ ಶ್ರುತಿ ಮೊದಲು ಯೋಚಿಸಿದರೂ ಮಕ್ಕಳ ಭವಿಷ್ಯ ಸುಗಮವಾಗುತ್ತದೆಂದು ಒಪ್ಪಿಗೆ ನೀಡಿದಳು. ಆದರೆ ಪೂರ್ಣಾಳ ಕಥೆಯೇ ಬೇರೆ. ಸ್ಮೃತಿಯನ್ನು ಮನೆಯ ಔಟ್‌ಹೌಸಿನಲ್ಲಿ ತಂದಿಟ್ಟುಕೊಂಡು, ತನ್ನ ಗಂಡ ಹಾಗೂ ಸ್ಮೃತಿ ಆತ್ಮೀಯವಾಗಿರುವುದನ್ನು ಕಂಡಾಗ ಪೂರ್ಣಾ ಧೃತಿಗೆಟ್ಟಳು. ಆದರೆ ಪಶ್ಚಾತ್ತಾಪದಿಂದ ಬೆಂದ ಪತಿನೊಂದು ಕ್ಷಮೆ ಬೇಡಿದಾಗ ಕ್ಷಮಿಸುವ ಹಿರಿತನವನ್ನೂ ತೋರಿದಳು.

....ಇನ್ನು ಮೇಲೆ

ಅಷ್ಟೊಂದು ಗಾಢವಾಗಿ ಶ್ಯಾಮನನ್ನು ಪ್ರೀತಿಸುತ್ತಿದ್ದ ಸ್ಮೃತಿಯೇ ಈ ದಾರಿ ಹಿಡಿದಳೆಂದರೆ, ಪ್ರೀತಿಯ ಬೆಲೆಯೇನಾಯ್ತು?

ತಲೆ ಬಿಸಿಯಾಗಿ ಯೋಚಿಸಲಾರದಾದೆ. ಲೆಡ್ಜರ್ ಮುಚ್ಚಿ ಎದ್ದೆ. ಸಂಜೆ, ಯಾಂತ್ರಿಕವಾಗಿ ಮನೆಯ ಕಡೆ ಹೆಜ್ಜೆ ಹಾಕಿದೆ. ನಡೆಯುವಾಗ, ಒಂದು ನಿರ್ಧಾರಕ್ಕೆ ಬಂದೆ. ನನ್ನ ಮನದ ಈ ದುಃಖ, ನೋವು ಯಾರಿಗೂ ತಿಳಿಯಬಾರದು. ಅದಕ್ಕೊಂದು ಸಮಾಧಾನದ ತೆರೆ ಎಳೆದುಬಿಡಬೇಕು ಎಂದುಕೊಂಡೆ.

ಎಂದಿನಂತೆ ನಗುನಗುತ್ತಲೇ ಮನೆಗೆ ಕಾಲಿಟ್ಟೆ. ಮನೆಗೆ ಬರುತ್ತಿದ್ದಂತೆಯೇ ಸುಹಾಸ ಹೇಳಿದ. "ಅಮ್ಮಾ ಸ್ಮೃತಿ ಆಂಟಿ, ಪಾಪು ಈವತ್ತು ಅವರ ಅಜ್ಜನ ಮನೆಗೆ ಹೋಗಿದ್ದಾರಂತೆ. ಔಟ್‌ಹೌಸ್ ಬೀಗದ ಕೈ ಇಲ್ಲಿ ಕೊಟ್ಟು ಹೋಗಿದ್ದಾರೆ.'' ಬೀಗದ ಕೈಯನ್ನೊಮ್ಮೆ ಶೂನ್ಯವಾಗಿ ನೋಡಿ, ಅದರ ಸ್ಥಳದಲ್ಲಿರಿಸಿದೆ. ಮಲಗಿದ್ದ ಶ್ರೀಹರಿಯ ಮುಸುಕು ಸರಿಸಿ, ಹಣೆ ಮುಟ್ಟಿ ನೋಡಿದೆ. ಇನ್ನೂ ಸುಡುತ್ತಿತ್ತು. "ಗಂಜಿ ಕುಡೀತೀರಾ, ಹಾರ್ಲಿಕ್ಸ್ ಮಾಡಲಾ?'' ಎಂದೆ.

"ಬೇಡ. ನನಗೆ ತುಂಬಾ ತಲೆನೋವು. ಕುಡಿದರೆ ವಾಂತಿಯಾಗುತ್ತೆ'' ಎನ್ನುತ್ತಾ ನನಗೆ ಬೆನ್ನು ಹಾಕಿದ ಅವರನ್ನು ನೋಡಿ ನಿಟ್ಟುಸಿರೆಳೆದೆ.

ಚಿಕ್ಕಂದಿನಿಂದ ಶೇಖರಿಸಿಕೊಂಡಿದ್ದ ತಾಳ್ಮೆ ಸಹನೆ ನನ್ನನ್ನು ಇಂದೂ ಕಾಯ್ದವು. ಮಕ್ಕಳಿಗೆ, ನಾದಿನಿ–ಮೈದುನರಿಗೆ ಊಟ ಬಡಿಸಿ, ನಾನೊಂದು ಚೊಂಬು ನೀರು ಕುಡಿದೆ. ಅದರೊಂದಿಗೆ ನುಂಗಿಕೊಂಡೆ ಉಕ್ಕಿ ಬರುತ್ತಿದ್ದ ಎದೆಯ ಉಮ್ಮಳವನ್ನು ಸಹ. ಇದೆಲ್ಲಾ ನಡೆದು ಇಂದಿಗೆ ಮೂರು ದಿನವಾಯ್ತು. ಆದರೂ ನಾನು ಮಾಮೂಲಿನಂತೆಯೇ ವರ್ತಿಸುತ್ತಿದ್ದೇನೆ, ಶ್ರೀಹರಿಯೊಡನೆಯೂ ಸಹ.'ಹೀಗೇಕೆ ಮಾಡಿದಿರಿ?' ಎಂದು ಶ್ರೀಹರಿಯನ್ನು ಛಾಟಿಸಿ ಕೇಳುವ ಹಕ್ಕು ನನಗಿರಲಿಲ್ಲವೇನು? ಇತ್ತು ಖಂಡಿತಾ ಇತ್ತು. ಆದರೆ ದೇಕೋ ಹಾಗೆ ಮಾಡದಾದೆ. ಅದರಿಂದ ಯಾವ ರೀತಿಯ ಪ್ರಯೋಜನವೂ ಇಲ್ಲ. ಬರಿಯ ಮನಸ್ತಾಪ ಮಾತ್ರ ಎನಿಸಿದ್ದರಿಂದಲೇ ಏನೋ ನನ್ನ ದುಃಖ ಅವರಿಗೆ ತಿಳಿಯದಂತೆ ನಟಿಸಿದೆ. ಆದರದೇಕೋ ಶ್ರೀಹರಿ ಎಂದಿನಂತೆ ನನ್ನೊಡನೆ ಮಾತನಾಡುತ್ತಿಲ್ಲ. ಇಂದು ಸ್ವಲ್ಪ ಚೇತರಿಸಿಕೊಂಡು ಆಫೀಸಿಗೂ ಹೊರಟರು. ನನಗೇಕೋ ಮನಸ್ಸಿನಂತೆ ದೇಹವೂ ಭಾರವೆನಿಸಿ ಬ್ಯಾಂಕಿಗೆ ರಜೆ ಬರೆದು ಕಳುಹಿಸಿಬಿಟ್ಟೆ.

ಹುರಿಯಲೆಂದು ಬಾಣಲೆಗೆ ಹಾಕಿದ ಮೆಂತ್ಯವೆಲ್ಲಾ ಸೀದು ಕರುಕಾದಾಗ, ನನ್ನ ಯೋಚನೆಗೆ ತಡೆ ಹಾಕಿ, ನಡುಮನೆಗೆ ಬಂದೆ. 'ಪೋಸ್ಟ್' ಕರೆಯೊಂದಿಗೆ ಕಿಟಕಿಯಿಂದ ನೂಕಲ್ಪಟ್ಟ ಎರಡು ಲಕೋಟೆಗಳನ್ನು ಕೈಗೆತ್ತಿಕೊಂಡೆ. ಎರಡೂ ನನಗೇ ಬರೆಯಲ್ಪಟ್ಟಿದ್ದವು. ಒಂದರ ಅಕ್ಷರ ಸುಪರಿಚಿತ. ಅದು ಶ್ರೀಹರಿಯದ್ದು. ಎದುರಿಗೇನೂ ಹೇಳದೆ, ಪತ್ರ ಬರೆದದ್ದೇಕೆ? ಆತುರದಿಂದ ಬಿಡಿಸಿದೆ.

'ಒಲವಿನ ಪೂರ್ಣ,

ಬದುಕು ಅನಿರೀಕ್ಷಿತ ತಿರುವುಗಳ ಒಂದು ದೀರ್ಘ ರಸ್ತೆ. ನಿನ್ನನ್ನು ಕಂಡದ್ದು, ಪ್ರೀತಿಸಿದ್ದು, ಮದುವೆಯಾದದ್ದು, ನಿನ್ನೊಡನೆ ಪ್ರೀತಿಯ ಬಾಳ್ವೆ ನಡೆಸುತ್ತಿರುವುದು ಇವೆಲ್ಲವೂ ನನ್ನ ಬದುಕಿನ ಅನಿರೀಕ್ಷಿತ ತಿರುವುಗಳೇ. ಮೊನ್ನೆ ನಡೆದದ್ದು ಇಂತಹ ಒಂದು ಅನಿರೀಕ್ಷಿತ ಘಟನೆಯೇ. ಇದನ್ನು ನೀನು ತಿಳಿದೂ ತಿಳಿಯದಂತೆ ಎರಡು ದಿನಗಳಿಂದ ವರ್ತಿಸುತ್ತಿರುವುದು ನನಗೆ ನುಂಗಲಾರದ ಬಿಸಿತುಪ್ಪವಾಗಿದೆ. ನಾಲ್ಕು ಮಾತಾಡಿ ನನ್ನ ಮೇಲೆ ಎಗರಾಡಿ, ನನ್ನನ್ನು ಚುಚ್ಚು ನುಡಿಗಳಿಂದ ಇರಿದಿದ್ದರೆ, ನನ್ನ ಮನಸ್ಸಿನ ನೋವು ಕಡಿಮೆಯಾಗುತ್ತಿತ್ತೇನೋ. ಆದರೆ ಹಾಗೆ ಮಾಡುವುದು ನಿನ್ನ ಸ್ವಭಾವವಲ್ಲ. ನಿನ್ನ ಸಹನೆಯಿಂದ, ತಾಳ್ಮೆಯಿಂದ, ಅಸಹನೀಯ ಮೌನದಿಂದ ನನ್ನನ್ನು ಕೊಲ್ಲುತ್ತಿದ್ದೀ ಪೂರ್ಣ! ನಿನ್ನ ನೋವಿನ ಆಳ ನನಗೆ ಅರ್ಥವಾಗದೆಂದು ತಿಳಿದೆಯಾ? ನೀನು ಹೇಳದಿದ್ದರೂ ನೀನು ನಡುಮನೆಯಲ್ಲಿ ಮರೆತುಹೋದ ನಿನ್ನ ಚಪ್ಪಲಿಗಳು ನೀನು ಮನೆಗೆ ಬಂದು ಹೋದದ್ದನ್ನು, ನಡೆದದ್ದಕ್ಕೆ ಮೂಕ ಸಾಕ್ಷಿಯಾದುದನ್ನೂ ಹೇಳಿದುವು.

ಪೂರ್ಣ, ನೀನು ನೋಡಿದುದಕ್ಕಿಂತ ಊಹಿಸಿಕೊಂಡಿರಬಹುದಾದದ್ದೇ ಹೆಚ್ಚಾಗಿರಬಹುದು. ಎಂತಲೇ ಇರುವ ವಿಷಯವನ್ನು ನಿನ್ನ ಮುಂದಿಡುತ್ತಿದ್ದೇನೆ. ನಾನು ಎಂದಿನಂತೆಯೇ ನಿನ್ನನ್ನು ಅತೀವವಾಗಿ ಪ್ರೀತಿಸುತ್ತಿದ್ದೇನೆ. ಸ್ಮೃತಿ ನಮ್ಮ ಔಟ್‌ಹೌಸಿಗೆ ಬಂದಾಗಿನಿಂದ ನನಗವಳ ಮೇಲೆ ಒಂದು ವಿಧವಾದ ಮರುಕ, ಅಪಾರವಾದ ಸಹಾನುಭೂತಿ ಉಂಟಾಗಿತ್ತು. ಅವಳ ಅನುಕಂಪಾರ್ಹ ಪರಿಸ್ಥಿತಿಗೆ ನನ್ನ ಹೃದಯ ತೋರಿದ 'ಸಾಫ್ಟ್ ಕಾರ್ನರ್' ಎಂದಿಟ್ಟುಕೋ. ಆದರೆ ಅವಳು ನನ್ನ ಬಳಿ ಎಷ್ಟೋ ವೇಳೆ ಆತ್ಮೀಯವಾಗಿ 'ಭಾವ' ಎಂದು ಕರೆದು ಮಾತನಾಡಿದಾಗ ನಾನು ಅದಕ್ಕೆ ಅಪಾರ್ಥ ಕಲ್ಪಿಸಿಕೊಂಡೆ. ಸ್ಮೃತಿ, ಪುರುಷ ಸಾನ್ನಿಧ್ಯಕ್ಕಾಗಿ, ಪುರುಷ ಹೃದಯದ ಅನುಕಂಪಕ್ಕಾಗಿ ಹಾತೊರೆಯುತ್ತಿರಬಹುದು, ಅವಳಿಗೆ ಪತಿಯ ಮರಣಾನಂತರ ವಿರಹ ಅಸಹನೀಯವಾಗಿರಬಹುದು ಎಂದೆಲ್ಲಾ ತಪ್ಪು ಕಲ್ಪನೆ ನನ್ನಲ್ಲಿ ಬೇರೂರಿತು.

ಮೊನ್ನೆಯ ದಿನ ನೀನೇ ಅವಳಿಗೆ ಬಡಿಸಲು ಹೇಳಿದ್ದಿ ಎಂದು ನನಗೆ ತಿಳಿದಿರಲಿಲ್ಲ. 'ನಾನು ನಿಮಗೆ ಬಡಿಸುತ್ತೇನೆ ಭಾವ' ಎಂದು ಅವಳು ಬಂದಾಗ, ನನ್ನೊಡನೆ ಏಕಾಂತವಾಗಿರಲು ಬಯಸಿ ಈ ಅವಕಾಶ ಉಪಯೋಗಿಸಿಕೊಂಡಿದ್ದಾಳೆ ಎಂದು ತಪ್ಪಾಗಿ ಭಾವಿಸಿಬಿಟ್ಟೆ ಪೂರ್ಣ! ಪಾಪ! ಆಕೆ ನಿರಪರಾಧಿ! ಅವಳು ಅಡಿಗೆ ಮನೆಯಲ್ಲಿ ಸಾರು ಬಿಸಿ ಮಾಡುತ್ತಿರುವಾಗ ನಾನೇ ಹಿಂದಿನಿಂದ ಅವಳ ಸೊಂಟ ಬಳಸಿ ಬೆನ್ನ ಮೇಲೆ ತಲೆಯಿಟ್ಟೆ. ಪಾಪ! ಏನೋ ಆಳವಾದ ಯೋಚನೆಯಲ್ಲಿದ್ದಳೆಂದು ಕಾಣುತ್ತದೆ. ಮೈಮರೆತು ನಿಂತಿದ್ದಳು. ಪುರುಷ ಸ್ಪರ್ಶದ ಬಿಸಿ ಅವಳ ಮರಗಟ್ಟಿದ ದೇಹಕ್ಕೆ ತಗಲಿದಾಗ, ಅವಳು ಜಡವಾದಳು. ನಿಶ್ಚೇಷ್ಟಿತಳಾದಳು. ಕ್ಷಣ ಕಾಲ ಹಿಮದಂತೆ ತಣ್ಣಗಾದದ್ದು ನನ್ನ ಕೈಗಳಿಗೂ ತಿಳಿಯಿತು. ಮರುಕ್ಷಣದಲ್ಲೇ ಸ್ಮೃತಿ ತನ್ನ ಬಲವನ್ನೆಲ್ಲಾ ಬಿಟ್ಟು ನನ್ನನ್ನು ದೂರ ನೂಕಿ ಕೆಂಗಣ್ಣಿನಿಂದ ಸುಡುವಂತೆ ನೋಡಿದಳು.

"ಛೀ! ನಿಮ್ಮನ್ನು ದೇವರೆಂದು ಭಾವಿಸಿ ಗೌರವಿಸುತ್ತಿದ್ದೆನಲ್ಲಾ ಭಾವ. ಒಂದು ಕ್ಷಣದ ಮೋಹದಿಂದ ಯಾವ ಕೆಳಮಟ್ಟಕ್ಕೆ ಇಳಿದುಬಿಟ್ಟಿರಿ! ನೀವಿಷ್ಟು ದಿನ ಪ್ರೀತಿಯಿಂದ ನೋಡಿಕೊಂಡದ್ದು, ಈ ನನ್ನ ದೇಹದ ಮೇಲಿನ ಚಾಪಲ್ಯದಿಂದ ಎಂದರೆ ನನಗೆ ನಂಬಲಾಗುತ್ತಿಲ್ಲ. 'ನಾನು ವಿಧವೆ, ಪುರುಷ ಸಾನ್ನಿಧ್ಯಕ್ಕಾಗಿ ಹಾತೊರೆದಿದ್ದೇನೆ' ಎಂಬ ಭಾವನೆಯಿಂದ ನೀವು ನನ್ನ ಮೇಲೆ ಅನುಕಂಪ ತೋರಿಸಲು ಬಂದಿದ್ದರೆ, ಸರಿಯಾಗಿ ಕೇಳಿಕೊಳ್ಳಿ – ಈ ಸ್ಮೃತಿ ಗಂಡನನ್ನು ಕಳೆದುಕೊಂಡವಳಿರಬಹುದು. ಆದರೆ ಗಂಡನನ್ನು ಮರೆತವಳಲ್ಲ. ನನ್ನನ್ನು ಅಷ್ಟೊಂದು ಪ್ರೀತಿಸಿದ ಶ್ಯಾಮನ ನಿತ್ಯ ಸ್ಮೃತಿಯನ್ನು ಅಳಿಸಿ ಹಾಕಿ, ಅಲ್ಲಿ ಕ್ಷಣಿಕ ಸುಖದ ಗೋರಿ ಕಟ್ಟುವಷ್ಟು ಕೊಳೆತಿಲ್ಲ ನನ್ನ ಮನಸ್ಸು; ಹಸಿದಿಲ್ಲ ನನ್ನ ದೇಹ.

ನನ್ನ ಮನಸ್ಸಿನಲ್ಲಿ ನಿಮ್ಮ ಬಗ್ಗೆ ಇರುವ ಸದ್ಭಾವನೆ ಸಂಪೂರ್ಣವಾಗಿ ಅಳಿಸಿಹೋಗುವ ಮುನ್ನ ನಾನಿಲ್ಲಿಂದ ಕಣ್ಮರೆಯಾಗಿ ಹೊರಟುಹೋಗುತ್ತೇನೆ. ಆದರೆ, ಈ ವಿಷಯವನ್ನು ಯಾವುದೇ ಕಾರಣಕ್ಕೂ ಪೂರ್ಣಾಳಿಗೆ ತಿಳಿಸಬೇಡಿ' ಎಂದವಳೇ ಒಲೆಯನ್ನು ಆರಿಸಿ ಧಡಧಡನೆ ಹೊರಬಂದಳು. ಬಂದವಳಿಗೆ ನಡುಮನೆಯಲ್ಲಿ ನಿನ್ನ ಚಪ್ಪಲಿಗಳನ್ನು ಕಂಡು ಬವಳಿ ಬಂದಂತಾಯ್ತು. ಅಂತೆಯೇ ಆಯ್ತು ಹಿಂದೆಯೇ ಹೊರಬಂದ ನನಗೂ. ಅವಳು ನನ್ನನ್ನೊಮ್ಮೆ ನೋಡಿ, ಭಾರವಾದ ಹೆಜ್ಜೆಗಳನ್ನಿಡುತ್ತಾ ತನ್ನ ಕೋಣೆಗೆ ಹೋಗಿಬಿಟ್ಟಳು. ಸಂಜೆ ಮಕ್ಕಳು ಶಾಲೆಯಿಂದ ಬಂದ ಮೇಲೆ, ಒಂದು

ಆಟೋ ತರಿಸಿಕೊಂಡು, ತನ್ನ ಸಾಮಾನುಗಳನ್ನೆಲ್ಲಾ ತುಂಬಿಸಿಕೊಂಡು, ಮಗುವಿನೊಂದಿಗೆ ಹೊರಟು ಹೋದಳು.

ನನ್ನ ಒಂದು ಕ್ಷಣದ ಮಾನಸಿಕ ದೌರ್ಬಲ್ಯದಿಂದಾಗಿ ಒಂದು ಹೆಣ್ಣಿನ ಮನಸ್ಸನ್ನು ಅಪಾರ್ಥ ಮಾಡಿಕೊಂಡದ್ದರ ಫಲವಾಗಿ ಒಂದು ಉದಾತ್ತ ಜೀವಿಗೆ ನೋವನ್ನುಂಟು ಮಾಡಿದೆ ಪೂರ್ಣೆ. ನಿನ್ನ ನಲ್ಮೆಯ ಗೆಳತಿಯನ್ನು ನಿನ್ನಿಂದ ದೂರ ಮಾಡಿದೆ. ಒಲುಮೆಯ ಅಣ್ಣನಾಗಬಹುದಾಗಿದ್ದ ನಾನು, ಒಂದು ವಿಷಘಳಿಗೆಯಲ್ಲಿ ಅವಳಿಗೆರಾವಣನಾದೆ. ನಿನ್ನನ್ನಲ್ಲದೆ ಮತ್ತಾರನ್ನೂ ಬಯಸದ ನನ್ನ ಮನ ಅಂದೇಕೆ ಹಾಗೆ ದುರ್ಬಲವಾಯಿತೋ ಈಗಲೂ ನಾನರಿಯೆ.

ಪೂರ್ಣ, ನಡೆದದ್ದನ್ನು ನಿನ್ನ ಮುಂದಿಟ್ಟು, ನನ್ನ ಮನಸ್ಸನ್ನು ಹಗುರ ಮಾಡಿಕೊಂಡಿದ್ದೇನೆ. 'ಟು ಎರ್ರ್ ಈಸ್ ಹ್ಯೂಮನ್. ಟು ಫರ್ಗಿವ್ ಈಸ್ ಡಿವೈನ್' (ತಪ್ಪುವುದು ಮಾನವ ಸಹಜ ಗುಣ; ಕ್ಷಮಿಸುವುದು ದೈವೀಕ).

ನಿನ್ನ ತಾಳ್ಮೆ ದೈವೀಕ ಎಂದು ಈ ಎರಡು ದಿನಗಳಲ್ಲಿ ಅರಿತಿದ್ದೇನೆ. ನಿನ್ನ ಕ್ಷಮೆಯೂ ದೈವೀಕವಾಗಿರಲಿ. ಅದರ ಪವಿತ್ರತೆಯಲ್ಲಿ ಮಿಂದು ನಾನು ಪುನೀತನಾಗುತ್ತೇನೆ.. ಮತ್ತೆ ನಿನ್ನವನೇ ಆಗ ಬಯಸುತ್ತೇನೆ. ಪೂರ್ಣ, ನನ್ನನ್ನು ಅರ್ಥಮಾಡಿಕೊಳ್ಳಲಾರೆಯಾ?

'ಶ್ರೀಹರಿ'

ಪತ್ರ ಓದಿ ಎರಡು ಕ್ಷಣ ಹೃದಯಕ್ರಿಯೆ ನಿಂತ ಅನುಭವ, 'ಶ್ರೀಹರಿಯ ಮಾತುಗಳು ನಂಬಲರ್ಹವೇ? ಸತ್ಯವೇ?' ಎಂಬ ಸಂದೇಹ ಹಾದುಹೋದರೂ ಹಾಗಿಲ್ಲದ ಪಕ್ಷದಲ್ಲಿ ಅವರೇಕೆ ಎಲ್ಲವನ್ನೂ ನನ್ನೆದುರು ಬಿಚ್ಚಿಡುತ್ತಿದ್ದರು ಎನಿಸಿತು. ಮರುಕ್ಷಣ, ನನ್ನ ಕೈಯಲ್ಲಿ ಒಡೆಯದೇ ಉಳಿದ ಮತ್ತೊಂದು ಪತ್ರ ನೆನಪಿಗೆ ಬಂತು. ಅಪರಿಚಿತ ಅಕ್ಷರ. ಒಡೆದು ಓದಿದೆ.

'ನಲ್ಮೆಯ ಗೆಳತಿ ಪೂರ್ಣ,

ಯಾವ ವಿಚಾರವನ್ನು ನಿನಗೆ ತಿಳಿಸದೆಯೇ ಇರಬೇಕೆಂದು ಭಾವಿಸಿದೆನೋ, ಅದನ್ನು ಈಗ ತಿಳಿಸಲೇ ಬೇಕಾಗಿದೆ. ಕಾರಣ ನೀನು ಬಿಟ್ಟು ಹೋದ ಚಪ್ಪಲಿಗಳು. ಕಣ್ಣು ಕಂಡದ್ದರ ಬಗ್ಗೆ ನೂರೆಂಟು ಕೋನಗಳಲ್ಲಿ ಯೋಚಿಸಬಹುದು. ನೀನೂ ಹಾಗೆ ಮಾಡಿರಬಹುದೆಂಬ ಕಾರಣದಿಂದ ಇದನ್ನು ಬರೆದಿದ್ದೇನೆ ಪೂರ್ಣ, ಗಂಡಸಿನ ಮನಸ್ಸು ಹೆಣ್ಣಿನ ಮನಸ್ಸಿನಷ್ಟು ಧೃಡವಾಗಿರುವುದಿಲ್ಲ. ಅದು ಕೈಗೆಟುಕಬಲ್ಲ ಯಾವುದೇ ವಸ್ತುವನ್ನು ಅಪೇಕ್ಷಿಸುತ್ತದೆ. ಇದಕ್ಕೆ ಹೊರತಲ್ಲ ನಿನ್ನ ಪತಿ. ನನ್ನ–ಶ್ಯಾಮನ ಪ್ರೀತಿಯ ಆಳ ತಿಳಿಯದ ಭಾವ, ನನ್ನ ನಡತೆಯನ್ನು ಅಪಾರ್ಥ ಮಾಡಿಕೊಂಡರು. ನನಗೆ ಅನಗತ್ಯವಾಗಿದ್ದ ಅನುಕಂಪ ತೋರಬಂದರು. ನನ್ನ ಸ್ಥಿತಿಯೇ ಹಾಗಿರುವಾಗ ಯಾರದ್ದೇನು ತಪ್ಪು ಪೂರ್ಣ? ಆದರೆ ನನ್ನ–ಶ್ಯಾಮನ ಪ್ರೀತಿಯ ಆಳ



ನಿನಗೆ ಗೊತ್ತು. ಪೂರ್ಣ, ನನ್ನ ಬದುಕಿನ ಮಧುರ ಸ್ಮೃತಿಯೇ ನನಗೆ ಸಾಕು. ಮತ್ತಾವ ಆಸೆಯೂ ನನಗಿಲ್ಲ. ನನ್ನ ಮುರಳಿಯ ಭವಿಷ್ಯಕ್ಕಾಗಿ ನಾನು ಜೀವಿಸಲೇಬೇಕು. ನನ್ನ ರೂಪ-ಅಸಹಾಯಕತೆಗಳು ನಿನ್ನ ಬದುಕಿನ ರಾಹು-ಕೇತುಗಳಾಗದಿರಲಿ ಎಂಬ ಆಶಯದಿಂದ, ನಿನ್ನ ಅನುಮತಿಯಿಲ್ಲದೆಯೇ ನಿನ್ನಿಂದ ದೂರ ಸರಿದಿದ್ದೇನೆ. ಇದರೊಂದಿಗೆ ನನ್ನ ರಾಜೀನಾಮೆ ಪತ್ರವಿದೆ. ಬ್ಯಾಂಕ್ ಮ್ಯಾನೇಜರರಿಗೆ ಸಕಾರಣ ಹೇಳಿ ಕೊಟ್ಟು ಬಿಡು. ನಾನು ಶ್ಯಾಮನ ಅಣ್ಣನ ಮನೆಗೆ, ಮುಂಬಯಿಗೆ ಹೊರಟಿದ್ದೇನೆ. ಅಲ್ಲೇನು ಕಾದಿದೆಯೋ ನೋಡೋಣ.

ಪೂರ್ಣ, ನಿನಗೆ ವಿದಾಯ ಹೇಳುವ ಮೊದಲು ಒಂದು ಮಾತು. ಭಾವ ತಪ್ಪು ಕಲ್ಪನೆ ಮಾಡಿ ಕೊಂಡದ್ದರಿಂದ, ಇದೊಂದು ಬಾರಿ ಎಡವಿದ್ದಾರೆ. ಅವರನ್ನು ಉದಾರ ಮನಸ್ಸಿನಿಂದ ಕ್ಷಮಿಸಿಬಿಡು. ಕ್ಷಮೆ-ಪ್ರೀತಿ ಇವೆರಡೂ ದೇವರು ನಮಗಿತ್ತಿರುವ ಆಯುಧಗಳು. ಇವಿಲ್ಲವಾದರೆ ಈ ಅಪರಿಪೂರ್ಣ ಪ್ರಪಂಚದಲ್ಲಿ ನಾವು ಕಡೆತನಕ ಬದುಕಿರಲು ಸಾಧ್ಯವಿತ್ತೇ?

ನೀನು ವಿವೇಕಿ. ಪ್ರಸಂಗಾವಧಾನಿ. ಎಲ್ಲರ ಕಷ್ಟಕ್ಕೆ ಆಗುವವಳು. ಅವರವರ ಮನದ ಹುಣ್ಣಿಗೆ ತಕ್ಕ ಮುಲಾಮು ಹಚ್ಚುವವಳು. ಈಗ ಯಾರಲ್ಲಿಯೂ ಹೇಳಿಕೊಳ್ಳಲಾಗದ ನಿನ್ನ ಮನದ ಹುಣ್ಣಿಗೆ ನಾನು ಅಂಜನ ಹಚ್ಚಲೇ? ನಡೆದಿದ್ದನ್ನು ಒಂದು ದುಸ್ವಪ್ನ ಎಂದು ತಿಳಿದು ಮರೆತುಬಿಡು. ಭಾವನನ್ನು ಮೊದ ಲಿನಂತೇ ಪ್ರೀತಿಸು. ದ್ವೇಷ-ಪ್ರೀತಿಗಳಲ್ಲಿ ಪ್ರೀತಿಯದೇ ಮೇಲುಗೈ. ಅಂದ ಮೇಲೆ ನಿನ್ನ ಸಂಸಾರದ ಸೌಖ್ಯಕ್ಕೆ, ನಿನ್ನ ಮಾನಸಿಕ ಶಾಂತಿಗೆ, ಭಾವನ ಅಂತರಂಗದ ನೆಮ್ಮದಿಗೆ, ನಿನ್ನ ಕ್ಷಮೆಯೇ ಅಡಿಗಲ್ಲಾಗಲಿ. ನನಗಾಗಿ ನೀನು ಅಷ್ಟು ಮಾಡಲಾರೆಯಾ ಪೂರ್ಣ?

ಒಲವಿರಲಿ

ಸ್ಮೃತಿ

ಪತ್ರಗಳನ್ನು ಅದೆಷ್ಟೋ ಬಾರಿ ಓದಿದೆ. ಎದೆ ಯಾಳದಲ್ಲಿ ಅದುಮಿಕೊಂಡಿದ್ದ ದುಃಖವೆಲ್ಲಾ ಅಶ್ರು ಧಾರೆಯಾಗಿ ಹರಿದು ಪತ್ರಗಳನ್ನು ತೋಯಿಸುವವರೆಗೂ ಓದಿದೆ. ಕರೆಗಂಟೆಯೊತ್ತಿದಾಗ ಮಕ್ಕಳು ಬಂದಿರ ಬಹುದೆಂದು ಪತ್ರಗಳನ್ನು ಲಕೋಟೆಯೊಳಗೆ ಸೇರಿಸಿ ದಿಂಬಿನಡಿ ಇಟ್ಟೆ. ಲಗುಬಗೆಯಿಂದ ಕಣ್ಣೊರೆಸಿಕೊಂಡು ಬಾಗಿಲು ತೆರೆದೆ. ಶ್ರೀಹರಿ ಮ್ಲಾನವದನರಾಗಿ ನಿಂತಿದ್ದರು. ಅಚ್ಚರಿಯಿಂದ ಕಣ್ಣರಳಿಸಿದೆ. ನಿತ್ಯ ಬರುವ ವೇಳೆಗೆ ಎರಡು ಗಂಟೆ ಮುಂಚೆಯೇ ಮನೆ ತಲುಪಿದ್ದರು. 'ಮಕ್ಕಳು ಬರುವ ಮುನ್ನ ಮನೆಗೆ ಬರಬೇಕೆಂದೇ ಬೇಗ ಬಂದೆ' ನನ್ನ ಪ್ರಶ್ನಾರ್ಥಕ ಮುಖಕ್ಕೆ ಅವರ ಉತ್ತರ. ಬಾಗಿಲ ಚಿಲುಕ ಹಾಕಿ ನನ್ನ ಬಳಿ ಬಂದು ತಗ್ಗಿದ ದನಿಯಲ್ಲಿ ಕೇಳಿದರು. "ನನ್ನನ್ನು ಕ್ಷಮಿಸುವೆಯಾ ಪೂರ್ಣ?" ಅವರ ಅಸಹಾಯ ಮುಖವನ್ನು ಕಂಡಾಗ ಬೆಣ್ಣೆಯಂತೆ ದ್ರವಿಸಿತು ನನ್ನ ಮನಸ್ಸು. ತಪ್ಪು ನಡೆದ ಮಗು ತಪ್ಪೊಪ್ಪಿಕೊಂಡು ತಲೆತಗ್ಗಿಸಿ ನಿಂತಂತೆ ನಿಂತಿದ್ದ ನನ್ನವರನ್ನು ಪ್ರೀತಿಯಿಂದ ಅಪ್ಪಿ, ಎದೆಗೊತ್ತಿ ಸಂತೈಸಿದೆ. ಮುದ್ದಿಸಿದೆ. ಕ್ಷಮಿಸಿದೆ. ಧರಿತ್ರಿಯಂತೆ.

ತಾರಸ್ವಾಮಿ

ಕವಿತಾ

ಜೀವನ ಅನಿರೀಕ್ಷಿತ ತಿರುವುಗಳ ಜಾಲ. ನನ್ನ ಗೆಳತಿಯರ ಬಾಳಿನ ನೋವು-ನಿರಾಸೆಗಳಿಂದ ಭವಿಷ್ಯದ ಬಗ್ಗೆ ಕರಾಳ ಕಲ್ಪನೆಯೊಂದೇ ನನ್ನ ಪಾಲಿಗೆ ಬೆಳೆದದ್ದು. ಹೊಂಗನಸಿನ ಹೊರೆಯನ್ನು ಹೊತ್ತು ಪ್ರೇಮದ ಶಿಖರವೇರಲು ಹೊರಟ ಸ್ಮೃತಿ, ವಿಧಿಯ ಹಿಮವನ್ನು ತುಳಿದು ಜಾರಿ ಪ್ರಪಾತಕ್ಕುರುಳಿದಾಗ ನಾನು ಕಂಬನಿ ಮಿಡಿದದ್ದೆಷ್ಟೋ? ತನ್ನ ರಕ್ತ ಮಾಂಸಗಳನ್ನು ಹಂಚಿ ಹುಟ್ಟುವ ಮಗುವಿಗಾಗಿ ಹಂಬಲಿಸಿದ ಬಿಂದು ಬಂಜೆಯಾಗಿಯೇ ಉಳಿದಾಗ ನಾನು ಮರುಗಿದು ದೆಷ್ಟೋ! ಬದುಕಿನ ಮೌಲ್ಯಗಳಿಗೆ ಬೆಲೆ ಕೊಡದೆ ತನ್ನನ್ನೇ ಬಲಿಕೊಟ್ಟ ಮೇನಕಾಳ ದೌರ್ಬಲ್ಯಕ್ಕಾಗಿ ನಾನು ಕಣ್ಣೀರಿಟ್ಟದ್ದೇನು ಕಡಿಮೆಯೇ? ಸಂಸಾರದ ನೊಗಕ್ಕೆ ಬೆನ್ನು ಕೊಟ್ಟು ತನ್ನ ಯೌವನದ ಹಸಿರು ದಿನಗಳನ್ನು ವ್ಯರ್ಥವಾಗಿ ಕಳೆದ ಶ್ರುತಿಗಾಗಿ ನಾನೆಷ್ಟು ನೊಂದಿದ್ದೇನೆ! ತನ್ನತನವನ್ನೇ ಕಳೆದುಕೊಂಡು ಸಂಸಾರದ ರಕ್ಷಣೆಗೆಂದು ದುಡಿಮೆಯ ಯಂತ್ರವಾಗಿ ಜೀವ ಸವೆಸುವ ಪೂರ್ಣಾಳನ್ನು ಕಂಡು ಅದೆಷ್ಟು ಅನುತಾಪ ಪಟ್ಟೆನಲ್ಲ! ವೈವಾಹಿಕ ಜೀವನವೇ ಒಂದು ದುಸ್ವಪ್ನ ವಾದ ರಜನಿಯ ಬದುಕನ್ನು ಕಂಡ ಮೇಲಂತೂ 'ಮದುವೆ' ಎಂಬ ಮೂರಕ್ಷರಕ್ಕೆ ನಾನು ತಿಲಾಂಜಲಿ ಅರ್ಪಿಸಿದ್ದೆ.

ಬದುಕಿನ ನಲುವತ್ತೆರಡು ವಸಂತಗಳನ್ನು ಕಂಡಿರುವ ನಾನು, ಇದ್ದಕ್ಕಿದ್ದಂತೆ ಪ್ರೇಮಪಾಶದಲ್ಲಿ ಸಿಕ್ಕಿದ್ದು ವಿಧಿಯ ವಿಚಿತ್ರ ಜಾಲವಲ್ಲದೇ ಮತ್ತೇನು? ನಾನು ಅಂತರರಾಷ್ಟ್ರೀಯ ಬ್ಯಾಂಕಿಂಗ್ ಸಮ್ಮೇಳನಕ್ಕೆ 'ಬ್ಯಾಂಕಾಕ್'ಗೆ ಹೋದದ್ದೂ, ದೆಹಲಿಯಿಂದ ಅದೇ ಸಮ್ಮೇಳನಕ್ಕೆ ಹೊರಟ ಕೃಷ್ಣಮೂರ್ತಿಯ ಪರಿಚಯ ವಾದದ್ದೂ ಅನಿರೀಕ್ಷಿತ. ವಿಮಾನದಲ್ಲಿ ಅಕ್ಕ-ಪಕ್ಕದ ಸೀಟುಗಳಲ್ಲಿ ಕುಳಿತಾಗ ತೊಡಗಿದ ಪರಿಚಯ, ಸ್ನೇಹಕ್ಕೆ ತಿರುಗಿ, ಸಮ್ಮೇಳನದ ಆರು ದಿನಗಳಲ್ಲಿ ನಿಕಟ ಪ್ರೇಮವಾಗಿ, ಭಾರತಕ್ಕೆ ಹಿಂತಿರುಗಿ ಬರುವ ವೇಳೆಗೆ ಪ್ರೀತಿಯ ಹೆಮ್ಮರವಾಗಿ ಬೆಳೆದದ್ದು ವಿಚಿತ್ರ; ಆದರೂ ನಿಜ. ಮಂಗಳೂರಿನ ವಿಮಾನ ಹತ್ತುವವರೆಗೂ, ದೆಹಲಿಯಲ್ಲಿ ಅವರೊಡನೆ ಕಳೆದ ಆ ಹತ್ತಾರು ಘಂಟೆಗಳ ಮಧುರ ನೆನಪು ನನ್ನ ಜೀವಕ್ಕೊಂದು ತಂಪನ್ನಿತ್ತಿದೆ. ನನ್ನಂತೆಯೇ ಮೂರ್ತಿ ಕೂಡ ತಮ್ಮ ಆಪ್ತ ಗೆಳೆಯರ ವೈವಾಹಿಕ ಜೀವನದ ಸೋಲು-ಸಂಕಟಗಳಿಂದ ರೋಸಿ ಹೋಗಿ ಆಜನ್ಮ ಬ್ರಹ್ಮ ಚಾರಿಯಾಗಿರುವ ಹಠ ತೊಟ್ಟಿದ್ದರು.

ದೆಹಲಿಯಲ್ಲಿದ್ದಾಗ ಅವರು ಹೇಳಿದ ಮಾತು ಜ್ಞಾಪಿಸಿಕೊಂಡರೆ ಮೈ ಪುಲಕಿತವಾಗುತ್ತದೆ. "ಹೆಣ್ಣು ಎಷ್ಟು ಹಿತವಾಗಿರಬಲ್ಲಳು; ಜೀವಕ್ಕೆ ಇಷ್ಟೊಂದು ತಂಪನ್ನು ಕೊಡಬಲ್ಲಳು ಎಂಬುದು ತಿಳಿದದ್ದೇ ನಿನ್ನಿಂದ ಕವಿತಾ. ಮನಸ್ಸಿಗೆ ಇಷ್ಟೊಂದು ಆಹ್ಲಾದವನ್ನು, ಉದ್ರೇಕವನ್ನು, ಶಾಂತಿಯನ್ನು, ಸೌಖ್ಯವನ್ನು ಏಕ ಕಾಲದಲ್ಲಿ ಕೊಡುವ ಹೆಣ್ಣಿನ ಒಡನಾಟವಿಲ್ಲದೆ ಈ ಐವತ್ತು ವರ್ಷಗಳನ್ನು ಹೇಗೆ ಕಳೆದೆ ಎಂದು ನನಗೇ ಅಚ್ಚರಿಯಾಗುತ್ತದೆ.'' ಎಂದಿದ್ದರು ಮೂರ್ತಿ. ಅವರ ನಡೆ-ನುಡಿಯ ಮಾಧುರ್ಯಕ್ಕೆ ಸಂಪೂರ್ಣ ಮನಸೋತಿದ್ದ ನಾನು ಕೂಡ ಹೇಳಿದ್ದೆ. "ನಿಮ್ಮಂತಹ ಅಪರೂಪದ ವ್ಯಕ್ತಿ ಈವರೆಗೆ ಬೇರಾರ ಸೊತ್ತಾಗದೆ ನನಗಾಗಿಯೇ ಉಳಿದದ್ದು ನನ್ನ ಪುಣ್ಯ ಮೂರ್ತಿ'' ಮೂರ್ತಿ ಮೆಲುನಗೆ ನಕ್ಕು ಹೇಳಿದ್ದರು. "ಎಲ್ಲರೂ ಯೌವನದಲ್ಲಿ ಪ್ರೀತಿ-ಪ್ರೇಮ ಎಂದು ಎಡವಿಬಿದ್ದು ಪೆಟ್ಟು ಮಾಡಿಕೊಳ್ಳುತ್ತಾರೆ. ಆದರೆ ನಾವಿಬ್ಬರೂ ರಿಟೈರಾಗುವ ವಯಸ್ಸಿನಲ್ಲಿ ಹಳ್ಳಕ್ಕೆ ಬಿದ್ದು ದೊಡ್ಡ ಫ್ರ್ಯಾಕ್ಚರೇ ಮಾಡಿಕೊಂಡಿದ್ದೇವಲ್ಲ!'' ನಾನು ಅವರ ಎದೆಯಲ್ಲಿ

## ವನಿತಾ ಪದಸಂಪದ 48

## ಫಲಿತಾಂಶಗಳು

ಈ ಬಾರಿಯ ಸ್ಪರ್ಧೆಯಲ್ಲಿ ಇಪ್ಪತ್ತು ಅಭ್ಯರ್ಥಿ ಗಳು ಗೆದ್ದಿದ್ದು, ಅವರಿಗೆ ಬಹುಮಾನದ ಹಣವನ್ನು ಸಮನಾಗಿ ಹಂಚಲಾಗುವುದು. ಬಹುಮಾನ ಪಡೆದವರ ಹೆಸರುಗಳನ್ನು ಈ ಕೆಳಗೆ ನಮೂ ದಿಸಲಾಗಿದೆ.

| | | | | | | | | | | |
|---|---|---|---|---|---|---|---|---|---|---|
| 1 ಸ್ವಾ | ಭಿ | ಮಾ | 2 ನ | | 3 ಅ | | 4 ಅ | ಭಿ | ನ | 5 ವ |
| ತಂ | | | 6 ವ | ರ್ಣ | ಸಂ | ಕ | ರ | | | ರ |
| ತ್ರ್ಯ | | | ನೀ | | ಭ | | ವಿಂ | | | ಮ |
| ದಿ | | 7 ಮ | ತ | | ವ | | 8 ದ | 9 ನಿ | | ಹಾ |
| 10 ನಾ | ರ | ದ | | 11 ಧೀ | | 12 ನಾ | | 13 ಕ | ಮ | ಲ |
| ಚ | | 14 ನ | 15 ಗ | ರ | 16 ಪ | ರಿ | 17 ಸ | ರ | | ಕ್ಷ್ಮೀ |
| 18 ರ | ಫ್ತು | | ರ | | ದ್ಮ | | ಕಾ | | 19 ಶ್ರೀ | ವ್ರ |
| ಣೆ | | 20 ಸಂ | ಡಿ | 21 ಗ | | 22 ಸ | ರ | 23 ಕು | | ತ |
| | | ಗ | | ಣ | | ಮಾ | | ಹೆ | | |
| 24 ಸಂ | | ಡಿ | | 25 ಸು | 26 ಜ | ನ | | ಗ | | 27 ಜಾ |
| 28 ತ | ರ | ಗ | ತಿ | | ಪ | | 29 ಚಿ | ಟ್ಟೆ | ಬಾ | ಣ |

1) ಶ್ರೀಮತಿ ಪಾರ್ವತಿ ಚಂದ್ರಶೇಖರ ಕರಡಿ, ಕೆರೂರ
2) ಎಚ್.ಎಸ್. ಜಾನಕಿ, ಬೆಂಗಳೂರು
3) ಜಯಲಕ್ಷ್ಮಿ ಕ್ರೋಡಾಶ್ರಮ
4) ಭಾರತಿ ನಾಗೇಂದ್ರ, ಮುಂಬಯಿ
5) ಶ್ರೀಮತಿ ಶೀಲಾ ಸತ್ಯನಾರಾಯಣ್, ಹುಣಸಗಿ
6) ರೇಖಾ ಇನಾಮದಾರ, ಬೆಳಗಾವಿ
7) ಕೆ.ವಿ. ಮಂಜುಳ, ಹೈದರಾಬಾದ್
8) ಟಿ.ಎಸ್. ಸಾವಿತ್ರಿಬಾಯಿ, ಕೆ.ಜಿ.ಎಫ್
9) ಕುಸುಮ ಮಂಜುನಾಥ, ಕೆ.ಆರ್. ನಗರ
10) ಗೌರಿ ವಿ. ಭಟ್, ಹಾಸನ
11) ಕೆ.ಎನ್. ರಂಗನಾಥರಾವ್, ಕೆ.ಜಿ.ಎಫ್
12) ಜಿ. ನಿರ್ಮಲಾದೇವಿ, ಕೋಲಾರ
13) ಚಂದ್ರಿಕಾ ಅರುಣ್‌ಕುಮಾರ್, ಬೆಂಗಳೂರು
14) ಶ್ರೀಮತಿ ಭಾರತಿ ಚಂದ್ರಶೇಖರ್, ಬೆಂಗಳೂರು
15) ಶ್ರೀಮತಿ ಎಸ್. ಹೆಗಡೆ ಮಲವಳ್ಳಿ, ಮನಮನೆ
16) ಶೈಲಜಾ ಕೆ. ಪೆರಡಾಲ
17) ಕೆ. ರುಕ್ಮಿಣಿ, ದೊಮ್ಮಲೂರು
18) ವಸುಮತಿ ಎನ್. ಜೋಯಿಸ, ಕಾರ್ಗಲ್
19) ಸಿಂಧು ಕಶ್ಯಪ್
20) ಲಲಿತಾ ಮಿರ್ಲೆ, ಬೆಂಗಳೂರು

ಮುಖ ಹುದುಗಿಸಿ ಹೇಳಿದ್ದೆ. "ಮೂರ್ತಿ ಮದುವೆ ಎಂಬ ಪದಕ್ಕೆ ನನ್ನ ದೃಷ್ಟಿಯಲ್ಲಿ ಇದು ಸರಿಯಾದ ಅರ್ಥ. ಯೌವನದ ಅಮಲಿನಲ್ಲಿ ಸಿಕ್ಕಸಿಕ್ಕಮಗೆ ತೆಕ್ಕೆ ಬೀಳದೆ, ಸಂಯಮದಿಂದ ವರ್ತಿಸಿದ ನಾವು, ದೈಹಿಕ ಚಾಪಲ್ಯಕ್ಕಾಗಲೀ ಸುತಾನಾಪೇಕ್ಷೆಯಿಂದಾಗಲೀ ಮದುವೆಯಾಗುತ್ತಿಲ್ಲ. ಈಗ ನಾವು ಮದುವೆಯಾದರೆ ಅದು ಪರಸ್ಪರ ಮಾನಸಿಕ ಬೆಂಬಲ ಕೊಡುತ್ತದಷ್ಟೇ. ಈ ವಯಸ್ಸಿನಲ್ಲಿ ನಮಗೆ ಅಗತ್ಯವಾಗಿರುವುದೆಂದರೆ 'ಫೀಲಿಂಗ್ ಆಫ್ ಬಿಲಾಂಗಿಂಗ್‌ನೆಸ್'. ಪರಸ್ಪರ ಅವಲಂಬನೆ, ಸಾಹಚರ್ಯ ಇವೆಲ್ಲಾ ಬಹುಮಟ್ಟಿಗೆ ಬೇಕಾಗುವುದು ನಲುವತ್ತರ ಗಡಿ ದಾಟಿದ ಮೇಲೆ".

"ನಿಜ ಕವಿತಾ. ನಮ್ಮದೀಗ ಅನುಕೂಲ ದಾಂಪತ್ಯ ಏಕೆಂದರೆ ಮಕ್ಕಳ ಪಾಲನೆ-ಪೋಷಣೆಯ ಹೊಣೆಯಿಲ್ಲ. ಮಕ್ಕಳಾಗಲಿಲ್ಲವಲ್ಲಾ ಎಂಬ ಚಿಂತೆಯಿಲ್ಲ. ಮಕ್ಕಳು ನಮ್ಮನ್ನು ಅನಾದರ ಮಾಡಿದರೆಂಬ ಬೇಸರವಿಲ್ಲ. ಭವಿಷ್ಯ ಹೇಗೋ ಹಣ ಕೂಡಿಸಿಡಬೇಕಲ್ಲಾ ಎಂಬ ಭಯವಿಲ್ಲ. ಕವಿತಾ, ಮದುವೆಯಾಗೋಣ. ಜೊತೆಗಿರುವಷ್ಟು ದಿನ ಸಂತೋಷವಾಗಿ, ನಿಶ್ಚಿಂತೆಯಾಗಿ, ನೆಮ್ಮದಿಯಾಗಿ ಇದ್ದು ಬಿಡೋಣ". "ನಾನು ಮದುವೆಯಾಗಲಿಲ್ಲವೆಂಬ ಕೊರಗಿನಲ್ಲೇ ಅಸು ನೀಗಿದ ನನ್ನ ತಂದೆ-ತಾಯಿಯರ ನಂತರ, ನನ್ನನ್ನು ಒಂಟಿತನ ಭೂತದಂತ ಹೆದರಿಸುತ್ತಿತ್ತು. ಮೂರ್ತಿ, ನಿಮ್ಮಿಂದ ನಿಮ್ಮ ಒಡನಾಟದಿಂದ, ನಾನೀಗ ಸಂಪೂರ್ಣ ತೃಪ್ತೆ. ನನಗಿನ್ನು ಯಾವುದರ ಬಗ್ಗೆಯೂ ಚಿಂತೆಯಿಲ್ಲ."

ಮೂರ್ತಿ ನನ್ನನ್ನು ತಮ್ಮೆದೆಗೆ ಒತ್ತಿಕೊಂಡು ನನ್ನ ತಲೆಗೂದಲನ್ನು ನೇವರಿಸುತ್ತಾ ಹೇಳಿದರು."ಮಂಗಳೂರಿನಲ್ಲಿ ಯಾವುದಾದರೂ ದೇವಸ್ಥಾನದಲ್ಲಿ ಸರಳವಾಗಿ ಮದುವೆಯಾಗೋಣ. ಹನಿಮೂನ್‌ಗೆ ಸ್ವಿಟ್ಜರ್ ಲ್ಯಾಂಡ್‌ಗೆ ಎರಡು ಏರ್‌ಟಿಕೆಟ್ ಬುಕ್ ಮಾಡಿಸಿ ಬಿಡುತ್ತೇನೆ. ಓ.ಕೆ. ಕವಿತಾ"

ಓಹ್! ಇದು ಕನಸಲ್ಲವಲ್ಲ! ಅಂದು ಮೂರ್ತಿ ಹೋದುದು ನಾನು ಉಸಿರಾಡುತ್ತಿರುವಷ್ಟೇ ನಿಜ. ನಾನು-ಮೂರ್ತಿ ಮದುವೆಯಾಗುವ ದಿನಕ್ಕೆ ಒಂದು ತಿಂಗಳು ಮಾತ್ರವಿದೆ. ನನ್ನ ವಿವಾಹದ ಆಹ್ವಾನ ಪತ್ರಿಕೆಯನ್ನು ನನ್ನ ಗೆಳತಿಯರಿಗೆಲ್ಲಾ ಕಳುಹಿಸಬೇಕು. ಅಲ್ಲಿಯವರೆಗೆ ನನಗೆ ನೆಮ್ಮದಿಯಿಲ್ಲ. ಅವರೆಲ್ಲರ ಪ್ರತಿಕ್ರಿಯೆ ಹೇಗಿದ್ದೀತು?

ಬಿಂದು :

ಅರವಿಂದ ಶಾಲೆಯಿಂದ ಬರುವ ಹೊತ್ತು. ಬರುತ್ತಿರುವಂತೆಯೇ "ಅಜ್ಜಿ, ತಿಂಡಿ ಏನ್ಮಾಡಿದ್ದೀ? ಉಪ್ಪಿಟ್ಟಾದ್ರೆ ನಾನು ತಿನ್ನೋಲ್ಲ. ನಂಗೆ ಚಪಾತಿ ಮಾಡಿಕೊಡು" ಅಂತ ಕೂಗಾಡುತ್ತಲೇ ಬರುತ್ತಾನೆ ಅವನು. ಅರವಿಂದನಿಗೆ ರೇಖಾಳ ಹಾಗೆ ಸೌಮ್ಯ ಸ್ವಭಾವವಿಲ್ಲ. ಎಲ್ಲಾ ತಂದೆಯ ತರಹ ಹಠ. ಹಾಗಿಲ್ಲದಿದ್ದರೆ ರಮೇಶ್ ಕೈ ತುಂಬಾ ಸಂಬಳ, ವಾಸಕ್ಕೆ ಸ್ವಂತ ಬಂಗಲೆ, ಕಾರು ಎಲ್ಲವನ್ನೂ ತೃಣೀಕರಿಸಿ ಅಮೇರಿಕಾಕ್ಕೆ ಹಾರುತ್ತಿದ್ದರೇನು? ಅಳಿಯಂದಿರಿಗೆ ನಮ್ಮವರೂ ಎಷ್ಟೋ ಬುದ್ಧಿ ಹೇಳಿದರು. "ಇಲ್ಲೇ ಎಲ್ಲಾ ಅನುಕೂಲವಾಗಿದೆಯಲ್ಲಾ. ಪರದೇಶದ ಆಸೆ ಯಾಕೆ ಅಂತ" ಕಡೆಗೂ ಅರವಿಂದನನ್ನು ನಮ್ಮ ಬಳಿಯೇ ಓದಲು ಬಿಟ್ಟು ಅವಂತಿಯನ್ನು ಮಾತ್ರ ಅಮೇರಿಕಾಕ್ಕೆ ಕರೆದುಕೊಂಡು ಹೋದರು, ರೇಖಾ-ರಮೇಶ್. ಅರವಿಂದ ಈಗ ನಾಲ್ಕು ವರ್ಷಗಳಿಂದ ನನ್ನ ಬಳಿಯೇ ಇದ್ದಾನೆ. ತಂದೆ-ತಾಯಿಯಿಂದ ದೂರವಿದ್ದಾನಲ್ಲಾ ಎಂದು ನಾನು-ನಮ್ಮವರು ಸ್ವಲ್ಪ ಹೆಚ್ಚಾಗಿಯೇ ಮುದ್ದು ಮಾಡಿದುದರ ಫಲ ಅವನು ಹಠಮಾರಿಯಾಗುತ್ತಿದ್ದಾನೆ.

ನೆನಪಿನ ಕುದುರೆ ಇಪ್ಪತ್ತು ವರ್ಷಗಳ ಹಿಂದಕ್ಕೆ ಜಿಗಿಯಿತು. ನನ್ನದೇ ಮಗುವಿಗಾಗಿ ಹಂಬಲಿಸಿ ಕಡೆಗೆ ಶ್ರುತಿಯ ಅಣ್ಣನ ಮಗಳು ರೇಖಾಳನ್ನು ದತ್ತು ತೆಗೆದುಕೊಂಡು ಸಾಕಿದೆ. ಅಂದು ಅವಳನ್ನು ಮನೆಗೆ ಕರೆತಂದಾಗ ಮನದಲ್ಲೇನೋ ಅಳುಕು. ಸಾಕಿದ ವಸ್ತು ನಮ್ಮದಾದೀತೇ ಎಂಬ ಶಂಕೆ. ಆದರೆ ರೇಖಾ ಸೌಮ್ಯ ಸ್ವಭಾವದವಳು. ಜಾಣೆ. ನಮ್ಮನ್ನು ಬಹು ಬೇಗ ಹೊಂದಿಕೊಂಡದ್ದಲ್ಲದೆ ನಮ್ಮಿಬ್ಬರನ್ನೂ 'ಅಮ್ಮ-ಅಪ್ಪ' ಎಂದೇ ಸಂಬೋಧಿಸಿದಳು ರೇಖಾ. ಎಂದಾದರೊಮ್ಮೆ "ಶ್ರುತಿ ಅತ್ತೆ, ರವೀನ ನೋಡ್ಕೊಂಡು ಬರೋಣ್ವಾಮ್ಮಾ?" ಎಂದು ತನ್ನಾಸೆ ವ್ಯಕ್ತಪಡಿಸಿದಾಗ ನಾನೇ ಹೋಗಿ ಎರಡು ದಿನ ಶ್ರುತಿಯ ಮನೆಯಲ್ಲಿ ಇದ್ದು ಬರುತ್ತಿದ್ದೆ. ಓದಿನಲ್ಲಿ, ನೃತ್ಯದಲ್ಲಿ ತುಂಬಾ ಆಸಕ್ತಿ ತೋರಿದ ರೇಖಾಳಿಗೆ ಎರಡರಲ್ಲೂ ಉನ್ನತ ಶಿಕ್ಷಣವನ್ನೇ ಕೊಡಿಸಿದೆ. ಅವಳು ಎಂ.ಕಾ. ಮುಗಿಸಿದ ಮೇಲೆ ಹೆಚ್ಚು ಹೆಚ್ಚು ನೃತ್ಯ ಪ್ರದರ್ಶನಗಳನ್ನು ಕೊಡತೊಡಗಿದಳು. ನೃತ್ಯ ಪ್ರದರ್ಶನವೊಂದರಲ್ಲಿ ಅವಳನ್ನು ಮೆಚ್ಚಿಕೊಂಡ ರಮೇಶ್ ಅವಳನ್ನು ಮದುವೆಯಾದಾಗ ನಾನು ತುಂಬಾ ಸಂತಸಪಟ್ಟೆ. ಪ್ರಖ್ಯಾತ ವಿಜ್ಞಾನಿ ರಮೇಶ್, ಕಲಾಭಿರುಚಿಯುಳ್ಳವನೂ ಆಗಿದ್ದುದರಿಂದ ರೇಖಾಳ ನೃತ್ಯಕ್ಕೆ ಪ್ರೋತ್ಸಾಹ ದೊರಕಿತಲ್ಲಾ ಎಂದೇ ನನಗೆ ಆನಂದ. ಈಗವಳು ವಿದೇಶದಲ್ಲೂ ನೃತ್ಯ ಪ್ರದರ್ಶನಗಳನ್ನು ನೀಡುತ್ತಿರುವುದು ನನಗೆ-ರಾಜೇಶ್‌ಗೆ ಬಲು ಹೆಮ್ಮೆ

ಹೋದ ವರ್ಷ ಎಂ.ಇ. ಮುಗಿಸಿದ ರೇಖಾಳ ಅಣ್ಣ ರವೀಂದ್ರನನ್ನು, ಉನ್ನತ ಶಿಕ್ಷಣಕ್ಕೆಂದು ಅಮೇರಿಕಾಕ್ಕೆ ಕರೆಸಿಕೊಂಡ ರಮೇಶ್-ರೇಖಾಳಿಗೆ ಮಕ್ಕಳನ್ನು ಭಾರತದ ಸಂಸ್ಕೃತಿಯಂತೆಯೇ ಬೆಳೆಸಬೇಕೆಂಬ ಆಸೆ. ಅದಕ್ಕೇ ಕೈ ಮಗು ಅವಂತಿಯನ್ನು ಮಾತ್ರ ತನ್ನೊಂದಿಗೆ ಇರಿಸಿಕೊಂಡಿದ್ದಾಳೆ.

"ಇನ್ನೊಂದೆರಡು ವರ್ಷಗಳಾದ ಮೇಲೆ ಅವಳನ್ನು ಭಾರತಕ್ಕೆ ಕಳುಹಿಸಿಬಿಡುತ್ತೇನೆ. ಒಬ್ಬ ಅಡಿಗೆಯವಳನ್ನು ಗೊತ್ತು ಮಾಡಿಕೊಂಡು ನೀನೇ ಇಬ್ಬರನ್ನೂ ನೋಡಿಕೊಳ್ಳಮ್ಮಾ" ಎನ್ನುತ್ತಾಳೆ ರೇಖಾ. ದೇವರು ಶಕ್ತಿ-ಆಯುಸ್ಸು ಎರಡೂ ಕೊಡಲಿ. ಎರಡು ಮಕ್ಕಳನ್ನೂ ನಾನೇ ನೋಡಿಕೊಳ್ಳುತ್ತೇನೆ. ಅಡಿಗೆಯವಳೂ ಬೇಡ.

ಮುಖಪುಟದ ಚೆಲುವೆ

# ಪರಿಸರ — ಪ್ರೋತ್ಸಾಹ — ಸ್ಫೂರ್ತಿ



ಮುಖಪುಟದ ಚೆಲುವೆ 'ಸ್ವರೂಪ್ ಕೆಸ್ತೂರ್' ಮೈಸೂರು ವಿಶ್ವವಿದ್ಯಾನಿಲಯದ ಎಂ.ಬಿ.ಎ. ಪರೀಕ್ಷೆಯಲ್ಲಿ ಅತಿ ಹೆಚ್ಚಿನ ಅಂಕ ಗಳಿಸಿ ಪ್ರಥಮ ರ್ಯಾಂಕ್‌ನಲ್ಲಿ ಉತ್ತೀರ್ಣಳಾಗಿರುವುದಷ್ಟೇ ಅಲ್ಲ — ಎರಡು ಬಂಗಾರದ ಪದಕ ಹಾಗೂ ನಗದು ಬಹುಮಾನವನ್ನೂ ಮೈಸೂರು ವಿಶ್ವವಿದ್ಯಾನಿಲಯದ 72ನೆಯ ಘಟಿಕೋತ್ಸವದಲ್ಲಿ ಕರ್ನಾಟಕ ರಾಜ್ಯಪಾಲರಾದ ಶ್ರೀಯುತ ಖುರ್ಷಿದ್ ಆಲಂಖಾನ್‌ರವರಿಂದ ಸ್ವೀಕರಿಸಿದ ತರುಣಿ.

ತಂದೆ ಡಾ। ಯಡಿಯೂರಪ್ಪನವರು ಮೆಡಿಸಿನ್ ಪ್ರೊಫೆಸರ್ ಆಗಿ ಓ.ಕೆ. ಸ್ಯಾನಿಟೋರಿಯಂನಲ್ಲಿ ಸೇವೆ ಸಲ್ಲಿಸಿರುವ ತಜ್ಞ ವೈದ್ಯರು. ತಾಯಿ ಶ್ರೀಮತಿ ಲಲನಾ ಯಡಿಯೂರಪ್ಪನವರು ಸಸ್ಯ ಶಾಸ್ತ್ರ ಪದವೀಧರೆ. ಇನ್ನು ಹಿರಿಯ ಇಬ್ಬರು ಸೋದರಿಯರಲ್ಲಿ ಒಬ್ಬರು ಮೈಸೂರು ಮೆಡಿಕಲ್ ಕಾಲೇಜಿನಲ್ಲಿ ಉಪನ್ಯಾಸಕಿಯಾಗಿದ್ದಾರೆ. ಇನ್ನೊಬ್ಬ ಸೋದರಿ 'ಇಂಡಿಯನ್ ಆಡಿಟ್ ಮತ್ತು ಅಕೌಂಟ್ಸ್ ಸರ್ವೀಸ್'ನಲ್ಲಿ ಉನ್ನತ 'ಡೆಪ್ಯುಟಿ ಅಕೌಂಟೆಂಟ್ ಜನರಲ್' ಹುದ್ದೆಯಲ್ಲಿ ಬೆಂಗಳೂರಿನಲ್ಲಿದ್ದಾರೆ. ಇನ್ನು ಕಿರಿಯ ಸೋದರಿ 'ಇನ್‌ಸ್ಟ್ರುಮೆಂಟ್ ಟೆಕ್ನಾಲಜಿ'ಯಲ್ಲಿ ವ್ಯಾಸಂಗ ಮಾಡುತ್ತಿದ್ದಾರೆ.

ವಿದ್ಯಾವಂತ ಕುಟುಂಬದ ಪರಿಸರದಲ್ಲೇ ಹುಟ್ಟಿ ಬೆಳೆದ 'ಸ್ವರೂಪ್' 'ಬಿಸಿನೆಸ್ ಮ್ಯಾನೇಜ್‌ಮೆಂಟ್' ಪದವಿ ಪರೀಕ್ಷೆಯಲ್ಲಿ ಒಂಭತ್ತನೇ ರ್ಯಾಂಕ್ ಪಡೆದು ಉತ್ತೀರ್ಣರಾಗಿದ್ದಾರೆ.

ಪರಿಸರದ ಜೊತೆಗೆ ತಂದೆ — ತಾಯಿಯರ ಪ್ರೋತ್ಸಾಹವೂ ನಮ್ಮ ಈ ಹೆಚ್ಚಿನ ವ್ಯಾಸಂಗಕ್ಕೆ 'ಸ್ಫೂರ್ತಿ' ನೀಡಿತು ಎನ್ನುವ 'ಸ್ವರೂಪ್'ಗೆ ಅಂದವಾದ ಮೈಮಾಟ-ಆಕರ್ಷಕ ಮುಖ ಇವುಗಳು ದೈವದತ್ತವಾದ ಕೊಡುಗೆಯೇ ಸರಿ.

ಇದೀಗ ಬೆಂಗಳೂರಿನ 'ಕಂಪ್ಯೂಟರ್ ಮೇಯಿಂಟನೆನ್ಸ್' ಸಂಸ್ಥೆಯೊಂದರಲ್ಲಿ 'ಎಕ್ಸಿಕ್ಯೂಟಿವ್' ಆಗಿ ಕೆಲಸ ಮಾಡುತ್ತಿರುವ ಸ್ವರೂಪ್, "ಮೈಸೂರಿನಲ್ಲಿ ತನ್ನ ಕಾಲೇಜಿನ ವಿದ್ಯಾಭ್ಯಾಸದ ದಿನಗಳಲ್ಲಿ ಹಲವಾರು 'ಫ್ಯಾಷನ್ ಷೋ'ಗಳಲ್ಲಿ 'ಮಾಡಲ್' ಆಗಿ ಭಾಗವಹಿಸಿದ್ದು ಉಂಟು" ಎನ್ನುತ್ತಾರೆ.

'ಕುದುರೆ ಸವಾರಿ, ಹಾಗೂ ಶಾಸ್ತ್ರೀಯ ಮತ್ತು ಪಾಶ್ಚಿಮಾತ್ಯ ಸಂಗೀತಗಳನ್ನು ಆಲಿಸುವುದು ನನ್ನ ಹವ್ಯಾಸ' ಎನ್ನುವ ಸ್ವರೂಪ್‌ಗೆ ಚಿತ್ರರಂಗದಿಂದಲೂ ಕರೆ ಬಂದಿತ್ತು. ಆದರೆ 'ಚಿತ್ರಗಳಲ್ಲಿ ಅಭಿನಯಿಸಲು ಆಸಕ್ತಿ ಇಲ್ಲ' ಎನ್ನುವ ಸ್ವರೂಪ್ 'ಫ್ಯಾಷನ್ ಷೋ' ಹಾಗೂ ಜಾಹಿರಾತು ಚಿತ್ರಗಳಲ್ಲಿ ಭಾಗವಹಿಸಲು ಮಾತ್ರ ಇಷ್ಟ' ಎನ್ನುತ್ತಾರೆ.

ವರ್ಣಚಿತ್ರ : ತಿಪ್ಪೇಸ್ವಾಮಿ

ಯಾರೂ ಬೇಡ. ನನ್ನ ಮೊಮ್ಮಕ್ಕಳಿಗೆ ನಾನು ಮಾಡಲಾರೆನೇ? ಹೊಟ್ಟೆಯಲ್ಲಿ ಹುಟ್ಟಿದರೆ ಮಾತ್ರ ಮಕ್ಕಳೇ? ಯಾರೋ ಹೆತ್ತು ಕೊಟ್ಟದ್ದನ್ನು ನಾನು ಸಾಕಲಿಲ್ಲವೇ? ಅದು ನನ್ನನ್ನು ತಾಯಿಯೆಂದು ಪ್ರೀತಿಸಿ–ಗೌರವಿಸುತ್ತಿಲ್ಲವೇ? ಅವಳ ಮಕ್ಕಳು ನನಗೆ ಹೊರೆಯೇ? ಆವಂತಿ ಹುಟ್ಟಿದಾಗ, ನಾನೇ ಅಮೇರಿಕಾಕ್ಕೆ ಹೋಗಿ ರೇಖಾಳಿಗೆ ಬಾಣಂತಿತನ ಮಾಡಿದೆ. ಆವಂತಿ ರೇಖಾಳಿಗಿಂತ ನನ್ನನ್ನೇ ಜಾಸ್ತಿ ಹಚ್ಚಿಕೊಂಡಿದ್ದಾಳೆ. ರಾಜೇಶ್ ನನ್ನನ್ನು ಆಗಾಗ ಹಾಸ್ಯ ಮಾಡುತ್ತಾರೆ. "ಬಿಂದೂ ನೀನು ಹೆತ್ತು, ಹಾಲೂಡಿಸದಿದ್ದರೂ, ಮಕ್ಕಳ ಲಾಲನೆ–ಪಾಲನೆಯಲ್ಲಿ ನಿನಗೀಗ ಡಾಕ್ಟರೇಟ್ ಕೊಡಬಹುದು ಕಣೆ" ಅವರ ಮಾತು ನೆನಪಿಗೆ ಬಂದು ತುಟಿಯಂಚಿನಲ್ಲೊಂದು ಕಿರುನಗೆ ಮೂಡಿತು. ನಿಜ. ನಾನೀಗ ಪೂರ್ಣ ತೃಪ್ತೆ. ರೇಖಾಳಿಂದ, ಅವಳ ಮಕ್ಕಳಿಂದ ನನ್ನ ಬಂಜೆತನದ ಬಾಧೆ ಇಂಗಿದೆ. ನನ್ನ ಮನಸ್ಸೀಗ ಮಾತೃತ್ವದ ಸವಿಯನ್ನು ಅನುಭವಿಸಿ ಹಗುರವಾಗಿದೆ.

ಶ್ರುತಿ :

ಬಿಂದು ಆ ದಿನ ಬಂದು ರೇಖಾಳನ್ನು ಕರೆದುಕೊಂಡು ಹೋಗುವಾಗ ನನ್ನೆದೆ ನೋವಿನಿಂದ ಚೀರಿತ್ತು. ನಾನಷ್ಟೊಂದು ಪ್ರೀತಿಸುವ ರೇಖಾಳಿಂದ ದೂರವಿರಬೇಕಲ್ಲಾ ಎಂದು ಅತ್ತಿದ್ದೆ. ರವಿಯನ್ನು, ತಂದೆ–ತಾಯಿಯರ ಪ್ರೀತಿಯೊಂದಿಗೆ, ತಂಗಿಯ ಪ್ರೀತಿಯಿಂದಲೂ ವಂಚಿಸಿಬಿಟ್ಟೆನೋ ಎಂದು ದುಃಖಿಸಿದ್ದೆ. 'ಸಾಕಲಾರದೆ, ಮಗುವನ್ನು ಹಣದಾಸೆಗೆ ಮಾರಿದಳು' ಎಂದು ಜನ ಆಡಿಕೊಳ್ಳಬಹುದೇ ಎಂದು ಶಂಕಿಸಿದ್ದೆ.

ಆದರೆ ರೇಖಾಳನ್ನು ಹೂವಿನಂತೆ ಕಾಪಾಡುವ ಕೈಗಳಿಗೆ ಒಪ್ಪಿಸಿದ ನಾನು ವಿವೇಕಿಯೇ ಆದೆ. ಹೂವಿನಿಂದ ನಾರು ಸ್ವರ್ಗಕ್ಕೆ ಹೋದಂತೆ, ಶ್ರೀಮಂತ ವಿಜ್ಞಾನಿ ರಮೇಶ್‌ನ ಕೈ ಹಿಡಿದ ರೇಖಾ, ಅಣ್ಣ ರವಿಯನ್ನು ಅಮೇರಿಕಾಕ್ಕೆ ಕರೆಸಿಕೊಂಡಾಗ ನಾನು ಅದೆಷ್ಟು ಸಂತಸಪಟ್ಟೆ! ನನ್ನ ಅಣ್ಣ–ಅತ್ತಿಗೆ ಬಿಟ್ಟು ಹೋದ ಕುಡಿಗಳಿಗೆ ಸರಿಯಾದ ದಾರಿ ತೋರಿಸಿ, ಉತ್ತಮ ವ್ಯಕ್ತಿಗಳನ್ನಾಗಿಸಿದ ತೃಪ್ತಿ ನನಗಿದೆ. ಒಂದು ಗುರುತರ ಕರ್ತವ್ಯವನ್ನು ಸಮರ್ಪಕವಾಗಿ ನೆರವೇರಿಸಿದ ಸಮಾಧಾನ ನನ್ನದಾಗಿದೆ.

ಅಂದು ಜೇಮ್ಸ್ ನನ್ನ ಬಾಳಿನಲ್ಲಿ ಪ್ರವೇಶಿಸದೆ ಹೋಗಿದ್ದರೆ, ನನ್ನ ಬದುಕಿನ ತೊರೆ ಒಂದೇ ರೀತಿಯಲ್ಲಿ ಹರಿದು, ಇದ್ದ ಸ್ಥಳ ತಿಳಿಯದಂತೆ ಬತ್ತಿ ಹೋಗುತ್ತಿತ್ತೇನೋ. ಆದರೆ ವಿಧಿಯ ಲೀಲೆ ವಿಚಿತ್ರ. ರವೀಂದ್ರ ಪಿ.ಯು.ಸಿ.ಯಲ್ಲಿದ್ದಾಗ ಒಂದು ರಾತ್ರಿ ಅವನಿಗೆ ಕೆಂಡಾಮಂಡಲ ಜ್ವರ. ಘಂಟೆ ಎಂಟಿರಬಹುದು. ಹೊರಗೆ 'ಧೋ' ಎಂದು ಸುರಿಯುತ್ತಿದ್ದ ಮಳೆ. ಹತ್ತಿರದಲ್ಲಿ ಒಂದು ಆಟೋ ಸಿಕ್ಕರೆ ಡಾಕ್ಟರ್ ಷಾಪ್‌ಗೆ ಕರೆದೊಯ್ಯಬಹುದಲ್ಲಾ ಎಂದು ಮನೆಯ ಬಾಗಿಲಿಗೆ ಬೀಗ ಹಚ್ಚಿ, ರಸ್ತೆಯಂಚಿಗೆ ಬಂದು ನಿಂತೆ.

ಛತ್ರಿ ಹಿಡಿದಿದ್ದರೂ ಮಳೆಯ ಹೊಡೆತಕ್ಕೆ ಸಿಕ್ಕು, ಸೀರೆಯೆಲ್ಲಾ ನೆನೆದು ಒದ್ದೆಯಾಗಿ ಮೈಗಂಟಿಕೊಂಡಿತ್ತು. ಆ ಸ್ಥಿತಿಯಲ್ಲಿ, ಹೆಣ್ಣೊಂದು ರಾತ್ರಿ ವೇಳೆಯಲ್ಲಿ, ಒಂಟಿಯಾಗಿ ನಿಂತರೆ, ನೋಡುವ ರಸ್ತೆ ಕಾಮುಕರ ಕಣ್ಣಿಗೆ ಹಬ್ಬವೇ ತಾನೇ?

"ಲೇ, ಯಾವುದೋ ಡೇಗೆ ಹಕ್ಕಿ ಕಾದಿದೆ. ಒಂದು ಕೈ ನೋಡೋಣ ನಡಿಯೋಲೇ" ಕೆಣಕು ಮಾತುಗಳು ನನ್ನ ಕಿವಿಗೆ ಬಿದ್ದಿತಾದರೂ ನಾನು ಅಲಕ್ಷ್ಯ ಮಾಡಿ ನಿಂತೆ. ನನ್ನ ದುರದೃಷ್ಟಕ್ಕೆ ಒಂದು ಆಟೋವಾಗಲಿ, ಕುದುರೆ ಗಾಡಿಯಾಗಲಿ ಕಣ್ಣಿಗೆ ಬೀಳಲಿಲ್ಲ.

ಕೆಲವೇ ಕ್ಷಣಗಳಲ್ಲಿ ಎದುರು ರಸ್ತೆಯಲ್ಲಿದ್ದ ಆ ಪೋಲಿ ಗುಂಪು ನನ್ನ ಹತ್ತಿರ ಬಂದು ನಿಂತುಕೊಂಡಿತು. ಅದರಲ್ಲೊಬ್ಬ ನನ್ನನ್ನು ತಿಂದು ಬಿಡುವಂತೆ ನೋಡುತ್ತಾ 'ಒಳ್ಳೆ ಮಾಧವಿ ಫಿಗರ್ರು ಕಣ್ಲೇ. ಇಷ್ಟು ಸುಲಭವಾಗಿ ಕೈಗೆ ಸಿಕ್ಕಿರೋವಾಗ ಬಿಡ್ಬಾರ್ದು, ನಡಿರೋಲ್ರೇ, ಎಲ್ರೂ ಒಂದ್ ಕೈ ನೋಡೋಣ' ಎಂದವನೇ ನನ್ನನ್ನು ಅನಾಮತ್ತು ಎತ್ತಿಕೊಂಡು ಧಾಪುಗಾಲು ಹಾಕಿದ. ಕೂಗಲು ಹೊರಟ ನನ್ನ ಬಾಯಿ ಸುತ್ತ ಮತ್ತೊಬ್ಬ ಭದ್ರವಾಗಿ ಕರ್ಚೀಫ್ ಸುತ್ತಿದ.

ಅಷ್ಟರಲ್ಲಿ ಎದುರಿಗೆ ಬಂದ ಟ್ಯಾಕ್ಸಿಯೊಂದನ್ನು ನಿಲ್ಲಿಸಿ ನಾಲ್ವರೂ ನನ್ನನ್ನು ಒಳಗೆ ತಳ್ಳಿ ತಾವೂ ಕುಳಿತರು. 'ಗಾಂಧಿ ಬಜಾರ್ ಜಾವೋ ಭಾಯ್' ಎಂದ ಮುಂದೆ ಕುಳಿತವ ಟ್ಯಾಕ್ಸಿಯವನಿಗೆ. ನನ್ನ ಒದ್ದೆ ಬಟ್ಟೆ, ಒದರಾಟ, ಪದರಾಟ, ಬೆದರಿದ ಕಣ್ಣು, ಬಾಯಿಗೆ ಕಟ್ಟಿದ ಕರ್ಚೀಫು ಟ್ಯಾಕ್ಸಿಯವನಿಗೆ ವಿಷಯವನ್ನು ಸೂಕ್ಷ್ಮವಾಗಿ ತಿಳಿಸಿರಬೇಕು. ಅವನು ಮುಂದಿನವನನ್ನು ನಯವಾಗಿಯೇ ಕೇಳಿದ. "ಹುಡುಗಿ ಯಾರು? ಯಾಕಪ್ಪಾ ಎತ್ತಿಕೊಂಡು ಹೋಗ್ತಿದ್ದೀರಾ?"

ಮುಂದೆ ಕುಳಿತವ ಕೆಂಗಣ್ಣು ಬಿಟ್ಟು ನೂರರ ನೋಟೊಂದನ್ನು ಮುಂದೆ ಹಿಡಿದು "ತಗೆದುಕೋ. ನಿನಗ್ಯಾಕೆ ಅದೆಲ್ಲಾ. ಹೇಳಿದಷ್ಟು ಮಾಡು. ಬೇಕಾದರೆ ನಮ್ಮ ಜೊತೆಗೆ ಬಾ. ನೀನೂ ರುಚಿ ನೋಡುವಿಯಂತೆ' ಎಂದ. ಟ್ಯಾಕ್ಸಿಯವ ಎರಡು ಕ್ಷಣ ಯೋಚಿಸಿ ಹಣವನ್ನು ತೆಗೆದುಕೊಂಡು ಜೋಬಿಗೇರಿಸಿದ. ಮನೆಗಳ ಸಾಲೆಲ್ಲಾ ಮುಗಿದು ಒಂದು ಬಯಲು ಪ್ರದೇಶಕ್ಕೆ ಬಂದಾಗ ಗಕ್ಕನೆ ಟ್ಯಾಕ್ಸಿ ನಿಲ್ಲಿಸಿದ ಡ್ರೈವರ್. "ಸ್ವಲ್ಪ ಗಾಡೀನ ತಳ್ಳಬೇಕು. ಎಲ್ರೂ ಇಳೀರಿ" ಎಂದ. ಎಲ್ಲರೂ ಇಳಿದ ಮೇಲೆ 'ಆ ಹೆಂಗ್ಸು ಅಲ್ಲೇ ಇರ್‍ಲಿ' ಎಂದು ಮಳೆ ಒಳಗೆ ಬೀಳದಂತೆ ಕಿಟಕಿಯ ಗಾಜೆಲ್ಲಾ ಹಾಕಿದ. ಎಲ್ಲರೂ ಗಾಡಿ ತಳ್ಳಲು ಹಿಂದೆ ಸೇರಿದಾಗ, ಟ್ಯಾಕ್ಸಿಯವ ನಾಲ್ವರ ಮುಖಕ್ಕೂ ಮುಷ್ಠಿಗಳಿಂದ ಒಂದೊಂದು ಗುದ್ದಿದ. ನಾನು ನೋಡು ನೋಡುತ್ತಿರುವಂತೆಯೇ ಅವನು ಕರಾಟೆ ವೀರನಂತೆ ಎಲ್ಲರಿಗೂ ಒಂದೊಂದು ಏಟು ಒದೆತ ಕೊಟ್ಟು ಎಲ್ಲರನ್ನೂ ನೆಲಕ್ಕೆ ಕೆಡವಿದ. ಅವನು ಕೊಟ್ಟ ಒದೆತಗಳಿಗೆ ಅವರೆಲ್ಲಾ ಏಳಲಾರದಂತೆ ತತ್ತರಿಸಿ ಹೋಗಿದ್ದರು.

ಟ್ಯಾಕ್ಸಿಯವ ತಕ್ಷಣ ಟ್ಯಾಕ್ಸಿಯೊಳಗೆ ತೂರಿ ಗಾಡಿಯನ್ನು ಹೊರಡಿಸಿದ. ಒಂದು ಕೈಯಿಂದ ನನ್ನ ಬಾಯಿಯ ಪಟ್ಟಿಯನ್ನು ಕಿತ್ತೆಸೆದು, ಕುಡಿಯಲು ತನ್ನ ಬಳಿಯಿದ್ದ ಬಾಟಲಿಯಿಂದ ನೀರು ಕೊಟ್ಟ. 'ಅಮ್ಮಾ ಇಂಥಾ ಹೊತ್ನಲ್ಲಿ ಈ ಪೋಲಿಗಳ ಕೈಗೆ ಯಾಕಮ್ಮಾ ಸಿಕ್ಕಿಬಿದ್ರಿ? ನೋಡಿದ್ರೆ ಮರ್ಯಾದಸ್ಥ ಮನೆತನದ ಹೆಣ್ಣು ಮಗಳ ತರಹ ಕಾಣ್ತೀರ'

ನಾನು ಬಿಕ್ಕಳಿಸುತ್ತಾ ಹೇಳಿದೆ. "ನನ್ನ ಅಣ್ಣನ ಮಗನಿಗೆ ವಿಪರೀತ ಜ್ವರ ಬಂದುಬಿಟ್ಟಿದೆ. ಮನೇಲಿ ಬೇರೆ ಯಾರೂ ಇಲ್ಲ. ಅವನನ್ನು ಆಸ್ಪತ್ರೆಗೆ ಕರೆದುಕೊಂಡು ಹೋಗೋಣಾಂತ ಆಟೋಗಾಗಿ ಕಾದು ರಸ್ತೆಯಂಚಿನಲ್ಲಿ ನಿಂತಿದ್ದೆ. ಎಲ್ಲಿಂದಲೋ ಬಂದ ಈ ನಾಲ್ವರು ನನ್ನ ಹೀಗೆ ಎತ್ಕೊಂಡ್ಬಿಟ್ರು. ದೇವರ ಹಾಗೆ ಬಂದು ನೀವು ನನ್ನನ್ನು ಕಾಪಾಡಿದ್ರಿ"

'ಇನ್ನು ಬಿಡಿ ತಾಯಿ. ನಮ್ಮ ಏಸು ಒಳ್ಳೇವ್ರನ್ನ ಹೇಗಾದ್ರೂ ಕಾಪಾಡ್ತಾನೆ' ಎನ್ನುತ್ತಾ ತನ್ನ ಕತ್ತಿನಲ್ಲಿದ್ದ ಕ್ರಾಸನ್ನು ತುಟಿಗೆ ಮುಟ್ಟಿಸಿಕೊಂಡ. 'ನಿಮ್ಮ ಮನೆದಾರಿ ತೋರಿಸಿಯಮ್ಮ ಮೊದಲು ಈ ಒದ್ದೆ ಬಟ್ಟೆ ಬದಲಾಯಿಸಿ ಬೇರೆ ಉಟ್ಟುಕೊಂಡು ಬನ್ನಿ. ಹುಡುಗನನ್ನೂ ಕರೆದುಕೊಂಡೇ ಬನ್ನಿ. ಇಲ್ಲೇ ಮುಂದಿನ ರಸ್ತೆಯ ಕಡೆಗೆ ಡಾಕ್ಟರ್ ಷಾಪಿದೆ. ಅಲ್ಲಿಗೆ ಬಿಡ್ತೀನಿ' ಎಂದ.

ಅವನ ಮಾತಿನಂತೆ ಮನೆಗೆ ಹೋಗಿ, ಬಟ್ಟೆ ಬದಲಿಸಿ, ರವಿಯನ್ನು ಕರೆದುಕೊಂಡು ಟ್ಯಾಕ್ಸಿಯಲ್ಲಿ ಆಸ್ಪತ್ರೆಗೆ ಹೋದೆ. ಡಾಕ್ಟರರ ಫೀಜಿಗೆ ಕೈಯಲ್ಲಿದ್ದ ಕಡೆಯ ಇಪ್ಪತ್ತು ರೂಪಾಯಿ ಕೊಟ್ಟೆ. ಟ್ಯಾಕ್ಸಿ ಬಾಡಿಗೆಗೇನು ಮಾಡುವುದು? ಔಷಧಿಗೇನು ಮಾಡುವುದು ಎಂದು ಯೋಚಿಸುತ್ತಾ ನಾನು ಮನೆ ತಲುಪಿದಾಗ, ಟ್ಯಾಕ್ಸಿಯವ ರವಿಯನ್ನು ಮನೆಯಲ್ಲಿ ಮಲಗಿಸಿ ಹೇಳಿದ. 'ಇಲ್ಲೇ ಮೂಲೇಲಿ ಔಷಧಿ ಅಂಗಡಿ ಇದೆಯಲ್ಲ. ಆ ಚೀಟಿ ಕೊಡಿ. ನಾನು ಔಷಧಿ ತಂದುಕೊಡ್ತೀನಿ' ನಾನು ಹಣವಿಲ್ಲದ ಕಾರಣ ಹಿಂದು ಮುಂದು ನೋಡಿದೆ. ನನ್ನ ಮನಸ್ಸನ್ನು ಅರಿತವನಂತೆ ಅವನೇ ಹೇಳಿದ 'ಈಗ್ತಾನೇ ಆ ರೌಡಿಗಳು ನನಗೆ ಕೊಟ್ರಲ್ಲಾ ನೂರು ರೂಪಾಯಿ ನೋಟು. ಅದನ್ನ ಈ ಒಳ್ಳೇ ಕೆಲಸಕ್ಕಾದ್ರೂ ಉಪಯೋಗಿಸ್ತೀನಿ. ಕೊಡೀಮ್ಮ' ಎನ್ನುತ್ತಾ ನನ್ನ ಕೈಯಲ್ಲಿದ್ದ ಚೀಟಿಯನ್ನು ತೆಗೆದುಕೊಂಡು ಹೊರಟೇ ಹೋದ.

ಹತ್ತು ನಿಮಿಷಗಳಲ್ಲಿ ಔಷಧಿಗಳೊಂದಿಗೆ ಪ್ರತ್ಯಕ್ಷನಾದ ಡ್ರೈವರ್ ಅದನ್ನೂ, ಉಳಿದ ಹತ್ತರ ಆರು ನೋಟುಗಳನ್ನೂ ನನ್ನ ಕೈಯಲ್ಲಿಟ್ಟು 'ಪ್ಯಾರಾ ಟೈಫಾಯ್ಡ್ ಅಂತ ಬರೆದಿದ್ದಾರಲ್ಲಮ್ಮಾ ಔಷಧಿ–ಹಣ್ಣು ಹಂಪಲಿಗೆ ಹಣ ಬೇಕಾಗುತ್ತೆ. ಇದನ್ನು ನೀವೇ ಇಟ್ಕೊಳ್ಳಿ. ತಿಂಗಳ ಕಡೆ ಪಾಪ. ನೀವ್ತಾನೇ ಎಲ್ಹೋಗ್ತೀರಾ' ಎಂದ.

ನನ್ನ ಕಣ್ಣು ತೇವವಾದುವು. ಮೊದಲ ಬಾರಿಗೆ ಆ ವ್ಯಕ್ತಿಯನ್ನು ತಲೆಯೆತ್ತಿ ಸರಿಯಾಗಿ ನೋಡಿದೆ. ಆ ರೌಡಿಗಳನ್ನು ಹೊಡೆದುರುಳಿಸಿದಾಗ ಆ ವ್ಯಕ್ತಿಯ ಕಟ್ಟುಮಸ್ತಾದ ಶರೀರ ಕಣ್ಣಿಗೆ ಬಿದ್ದಿತ್ತು. ಇದೀಗ

ಲೋಕಜ್ಞಾನ — ಉತ್ತರಗಳು

1) ನೊಬೆಲ್ ಪ್ರಶಸ್ತಿ
2) ಸರೋಜಿನಿ ನಾಯ್ಡು
3) ಅಬ್ಬಕ್ಕ (ಬುಕ್ಕಾದೇವಿ)
4) ಡಾ। ಪಿ. ಸೆಲ್ವಿದಾಸ್
5) ಲಕ್ಕುಂಡಿಯಲ್ಲಿ
6) ಡಾ। ಅನಿಬೆಸೆಂಟ್
7) ವಿಲಿಯಂ ಬೆಂಟಿಂಕ್
8) ಈಜಿಪ್ಟ್ ದೇಶವನ್ನು ಕ್ರಿ.ಪೂ. 69ರಿಂದ ಆಳಿದಳು.
9) ಮಾರ್ಗರೇಟ್ ಥ್ಯಾಚರ್
10) ಚೆನ್ನ ಮಲ್ಲಿಕಾರ್ಜುನ
11) ದಾದಾ ಸಾಹೇಬ್ ಫಾಲ್ಕೆ ಪ್ರಶಸ್ತಿ
12) ಒಡಿಸ್ಸಿ

ಅವನ ಆ ಆರಡಿ ದೇಹದಲ್ಲಿದ್ದ ಎರಡು ಜೊತೆ ಕಣ್ಣುಗಳು ನನ್ನನ್ನು ಸೆರೆಹಿಡಿದುವು. ಅನುಕಂಪವೇ ಮೂರ್ತೀಭವಿಸಿದ ಆ ಎರಡು ಕಣ್ಗಳಲ್ಲಿ ನಾನು ಏಸುಕ್ರಿಸ್ತನನ್ನೇ ಕಂಡೆ.

'ಟ್ಯಾಕ್ಸಿ ಬಾಡಿಗೆಯನ್ನಾದ್ರೂ ತೆಗೆದುಕೊಳ್ಳಿ' ಎಂದೆ.

'ಹುಡುಗನಿಗೆ ಹುಷಾರಾಗ್ಲೀಮ್ಮಾ ಆಮೇಲೆ ನಾನೇ ಬಂದು ತೆಗೆದುಕೊಳ್ತೀನಿ. ಇದೀಗ ನಿಮ್ಮ ಮನೆ ಗೊತ್ತಾಯ್ತಲ್ಲಾ' ಎಂದವನೇ ಹೊರಟೇ ಹೋದ.

ಅದಾಗಿ ಎರಡು ದಿನಕ್ಕೆ ಆತ ಮತ್ತೆ ಬಂದ. "ಪಾಪಿಗೆ ಕರದು ಕೊಂಡು ಹೋಗೋಣಾಂತ ಬಂದೇಮ್ಮ" ಎಂದ. ಹತ್ತು ದಿನಗಳಲ್ಲಿ ರವಿ ಮೊದಲಿನಂತಾದ. ಅವನಿಗೆ ತಿಳಿದಿರಲೆಂದು ಆ ದಿನ ನಡೆದದ್ದನ್ನು ಹೇಳಿದೆ. ಟ್ಯಾಕ್ಸಿಯವನ ಉಪಕಾರ ತಿಳಿಸಿದೆ.

ರವಿ ಕಾಲೇಜಿಗೆ ಹೋಗಿ ಬರುವಂತಾದಾಗ, ನಾನೂ ಬ್ಯಾಂಕಿಗೆ ಹೋಗತೊಡಗಿದೆ. ಒಂದು ಸಂಜೆ ಮನೆಗೆ ಬರುತ್ತಿದ್ದಂತೆ ಬಾಗಿಲಲ್ಲಿ ಯಾರೋ ಗಂಡಸರು ಕಾದು ನಿಂತಿರುವಂತೆ ಕಂಡಿತು. ಹಸಿರು ಬಿಳಿಯ ಸಣ್ಣ ಗೆರೆಗಳಿದ್ದ ಅರ್ಧ ತೋಳಿನ ಷರ್ಟ್. ಬಿಳಿಯ ಪ್ಯಾಂಟ್. ಅಗಲವಾದ ಬೆಲ್ಟ್. ಗೌರವರ್ಣದ, ಅಗಲ ಮೀಸೆಯ ಗುಂಗುರು ಕೂದಲಿನ ವ್ಯಕ್ತಿ. ಕಣ್ಣಿಗೆ ಕಪ್ಪು ಕನ್ನಡಕ. ದೂರಕ್ಕೆ ವ್ಯಕ್ತಿ ಯಾರೆಂದೇ ಗುರುತು ಸಿಗಲಿಲ್ಲ.

ಹತ್ತಿರ ಬಂದಾಗ ಬೆಚ್ಚಿ ಬಿದ್ದೆ. ಖಾಕಿ ಸಮವಸ್ತ್ರದಲ್ಲಿ ಡ್ರೈವರ್‌ನಂತೆ ಬರುತ್ತಿದ್ದ ವ್ಯಕ್ತಿ ಇಂದು ಧಿಡೀರನೆ ಈ ವೇಷದಲ್ಲಿ ಬಂದರೆ ಗುರುತು ಸಿಗುವುದಾದರೂ ಹೇಗೆ? ಉಕ್ಕಿ ಬಂದ ನಗೆಯನ್ನು ಹತ್ತಿಕ್ಕಿ ಕೇಳಿದೆ – 'ಷೂಟಿಂಗ್ ಎಲ್ಲಿ?'

ಈಗ ಬೆಚ್ಚಿ ಬೀಳುವ ಸರದಿ ಅವನದ್ದು.

"ಯಾರದ್ದು?'

'ನಿಮ್ಮದು. ಒಳ್ಳೆ ಸಿನಿಮಾ ಹೀರೋ ತರಹ ಬಂದು, ನನಗೆ ಗುರುತು ಸಿಗದಂತೆ ಮಾಡಿದ್ದೀರಿ'

ಹತ್ತು ಘಂಟೆಗಳು ಒಟ್ಟಿಗೆ ಮೊಳಗಿದಂತೆ ಸಶ್ಶಬ್ದವಾಗಿ ನಕ್ಕು ಹೇಳಿದ "ನನಗೆ ಹೀಗೆ ಡ್ರೆಸ್ ಮಾಡಿಕೊಳ್ಳಲು ತುಂಬಾ ಇಷ್ಟ. ಆದರೆ ನನ್ನ ವೃತ್ತಿಗೆ ಇದು ಹೊಂದುವುದಿಲ್ಲವಲ್ಲ. ಅದಕ್ಕೆ ಎಂದಾದರೊಮ್ಮೆ ಹೀಗೆ ಬರುತ್ತೇನೆ"

ಮನೆಯ ಬೀಗ ತೆಗೆದು ಅವನನ್ನು ಒಳಗೆ ಕರೆದು ಕುಳ್ಳಿರಿಸಿದೆ.

"ನಿಮ್ಮ ಹೆಸರೇ ಕೇಳಲಿಲ್ಲವಲ್ಲ?'

'ಶ್ರುತಿ'

'ಓಹ್, ಸುಂದರವಾಗಿದೆ. ತುಂಬಾ ಸುಂದರವಾದ ಹೆಸರು.'

'ನಿಮ್ಮದು?'

'ಜೇಮ್ಸ್'

'ನನ್ನ ಪಾಲಿಗೆ ಜೀಸಸ್'

'ತುಂಬಾ ದೊಡ್ಡ ಮಾತಾಯ್ತು. ಅವನು ಹೇಗೆ ನಿರ್ದೇಶಿಸುತ್ತಾನೋ ಹಾಗೆ ನಡೆದುಕೊಳ್ಳುವ ಸಾಧಾರಣ ಯಂತ್ರಗಳು ನಾವು'

'ಬರೀ ಮಾತಿನಲ್ಲೇ ಕಾಲ ಹಾಕುತ್ತಿದ್ದೇನೆ. ನಿಮಗೇನು ಕೊಡಲಿ? ತಿಂಡಿ? ಕಾಫಿ?'

'ತಿಂಡಿ ಬೇಡ. ಇದೀಗ ದೋಸೆ ತಿಂದು ಬಂದೆ. ಕಾಫಿ ಕೊಡಿ ಸಾಕು'

ನಾನು ಒಳಹೋಗಿ ತಿಂಡಿ–ಕಾಫಿಯೊಡನೆ ಹೊರಬಂದೆ.

'ನಿಮ್ಮ ಹೆಂಡತಿ ಮಾಡಿದ ದೋಸೆಯಷ್ಟು ಇದು ರುಚಿಯಿರಲಾರದು. ಆದರೂ ನಮ್ಮ ಮನೆಯ ರೊಟ್ಟಿಯನ್ನಷ್ಟು ತಿಂದು ನೋಡಿ'

'ಹೆಂಡತಿ? ನನಗೆ ಮದುವೆಯೆಲ್ಲಾಗಿದೆ? ನಾನು ತಿನ್ನುವುದು ನಮ್ಮ 'ಪರ್ಮನೆಂಟ್' ಉಡುಪಿ ಮಾವನ ಮನೆಯಲ್ಲಿ'

'ಅದ್ಯಾಕೆ ನೀವು ನಾನ್–ವೆಜ್ ತಿನ್ನುವುದಿಲ್ಲ ವೇನು?'

'ಇಲ್ಲಮ್ಮ ನನಗೆ ಮೊದಲಿನಿಂದಲೂ ಸಸ್ಯಾಹಾರಿ ಊಟ ತಿಂದೇ ರೂಢಿ. ನನ್ನ ತಂದೆ–ತಾಯಿ ಇಬ್ಬರೂ ರೈಲಿನ ಅಪಘಾತದಲ್ಲಿ ತೀರಿಕೊಂಡಾಗ, ನನ್ನ ತಂದೆಯ ಫ್ರೆಂಡ್ ಅವರ ಮಕ್ಕಳೊಂದಿಗೆ ನನ್ನನ್ನು ಸಾಕಿದರು. ಅವರು ಬ್ರಾಹ್ಮಣರು. ಹಾಗಾಗಿ ನನಗೆ ಇಡ್ಲಿ–ದೋಸೆಯೇ ರೂಢಿ.'

'ಈಗ ಅವರೆಲ್ಲಿದ್ದಾರೆ'

'ಅವರೆಲ್ಲಾ ಊಟಿಯಲ್ಲಿದ್ದಾರೆ. ದೊಡ್ಡ ಎಸ್ಟೇಟ್ ಓನರ್ಸ್. ಅವರ ಮಕ್ಕಳೆಲ್ಲಾ ಚೆನ್ನಾಗಿ ಓದಿ ಬೇರೆ ಬೇರೆ ದೇಶಗಳಲ್ಲಿ ಉದ್ಯೋಗ ಮಾಡುತ್ತಿದ್ದಾರೆ. ನನ್ನನ್ನು ಓದಿಸುತ್ತಿದ್ದರು. ಆದರೆ ನನ್ನ ತಲೆಗೆ ವಿದ್ಯೆ ಹತ್ತಲಿಲ್ಲ. ಹಾಗೂ ಹೀಗೂ ನಾಲ್ಕು ಬಾರಿ ಢುಮ್ಕಿ ಹೊಡೆದು ಎಸ್.ಎಸ್.ಎಲ್.ಸಿ. ಮುಗಿಸಿದಾಗ ಅವರಿಗೆ ಬೇರೇನೂ ಮಾಡಲು ತೋಚದೆ ಎರಡು ಟ್ಯಾಕ್ಸಿ ತೆಗೆದುಕೊಟ್ಟು ಬಿಸಿನೆಸ್ ಮಾಡಿಕೋ ಎಂದರು. ನನ್ನ ಹೆಸರಿಗೆ ಎಸ್ಟೇಟ್‌ನ ಒಂದು ಸಣ್ಣ ಭಾಗ ಬರೆದಿದ್ದಾರೆ. ಭವಿಷ್ಯಕ್ಕೆ ಯೋಚನೆಯಿಲ್ಲ. ಅಲ್ಲೇ ಒಂದು ಸಣ್ಣ ಕಾಟೇಜ್ ಕೂಡ ಕಟ್ಟಿಸಿಕೊಟ್ಟಿದ್ದಾರೆ. ಅವರ ಮಕ್ಕಳೆಲ್ಲಾ ವಿದೇಶಗಳಲ್ಲಿರುವುದರಿಂದ, ಅವರು ಕಷ್ಟ–ನಷ್ಟಕ್ಕೆ ಇರುವುದು ನಾನೊಬ್ಬನೇ. ಹೀಗಾಗಿ ಅವರಿಗೆ ನನ್ನನ್ನು ದೂರ ಕಳುಹಿಸಲು ಇಷ್ಟವಿಲ್ಲ. ಅರೇ, ಏನೋ ಹೇಳಲು ಹೊರಟು ಏನೇನೋ ಹೇಳುತ್ತಿದ್ದೇನೆ'.

'ಏನಿಲ್ಲ. ನಮ್ಮ ವಿಷಯ ಮತ್ತೊಬ್ಬರ ಹತ್ತಿರ ಹೇಳಿಕೊಂಡಾಗ ಮನಸ್ಸಿಗೆ ಸಮಾಧಾನ ಸಿಗುತ್ತದೆ.'

'ಅಂದ ಮೇಲೆ ನಿಮ್ಮ ವಿಷಯವನ್ನು ನೀವು ನನ್ನ ಬಳಿ ಹೇಳಬಹುದಲ್ಲ'

'ಹೇಳಿಕೊಳ್ಳುವಂಥದ್ದೇನಿಲ್ಲ. ಅಣ್ಣ–ಅತ್ತಿಗೆಯರದ್ದು ಅನಿರೀಕ್ಷಿತ–ಅಕಾಲಿಕ ಮರಣ. ನನ್ನ ತಂದೆ ತಾಯಿಯರೂ ಅವರ ದಾರಿಯನ್ನೇ ಹಿಡಿದರು. ಇದ್ದೊಬ್ಬ ತಮ್ಮನನ್ನು ಓದಿಸಿ, ಕೆಲಸ ಕೊಡಿಸಿದೆ. ಅವನು ಸಿರಿವಂತರ ಮನೆಯ ಅಳಿಯನಾದ. ನಮ್ಮನ್ನೆಲ್ಲಾ ಮರೆತ. ಈಗ ನಾನು ಒಬ್ಬಂಟಿಗಳಾಗಿದ್ದೇನೆ. ಅಣ್ಣನ ಮಕ್ಕಳಲ್ಲಿ ಒಬ್ಬಳನ್ನು ನನ್ನ ಗೆಳತಿ ದತ್ತು ತೆಗೆದು ಕೊಂಡಿದ್ದಾಳೆ. ಇನ್ನೊಬ್ಬನೇ ರವಿ. ಉದರ ಪೋಷಣೆ ಬ್ಯಾಂಕಿನ ಉದ್ಯೋಗ ಹಿಡಿದಿದ್ದೇನೆ'.

ನನ್ನ ಗೋಳ್ಕತೆಯನ್ನು ಸಹನೆಯಿಂದ ಕೇಳಿದ ಜೇಮ್ಸ್ ಹೊರಟು ಹೋದ.

ಆ ನಂತರ ಅವನಿಗೆ ಬಿಡುವಾದಾಗಲೆಲ್ಲಾ ಆ ನಮ್ಮ ಮನೆಗೆ ಬರುತ್ತಿದ್ದ. ಒಮ್ಮೆ ಹೀಗೇ ಬಂದಾಗ ಜೇಮ್ಸ್ ಕೇಳಿದ.

'ಶ್ರುತಿ, ನೀವು ಮದುವೆಯನ್ನೇಕೆ ಮಾಡಿಕೊಂಡಿಲ್ಲ ಎಂದು ಕೇಳಬಹುದೇ?

'ಕಾರಣ ಸ್ಪಷ್ಟವಾಗಿಯೇ ಇದೆಯಲ್ಲ ಜೇಮ್ಸ್ ರವಿಯೇನೋ ಬುದ್ಧಿವಂತ. ಅವನನ್ನು ಬಿ.ಇ. ಓದಿಸ ಬೇಕೆಂದಿದ್ದೇನೆ. ಓದಿಸಲು ಅಣ್ಣನ ಇನ್‌ಷೂರೆನ್ಸ್ ಹಣವೇನೋ ಇದೆ. ಆದರೆ ನನ್ನನ್ನು ಮದುವೆ ಯಾಗುವವ ರವಿಯ ಜವಾಬ್ದಾರಿ ತೆಗೆದುಕೊಳ ಬೇಕಲ್ಲ. ಕಡೇ ಪಕ್ಷ ನಾನು ಅವನ ಹಣವನ್ನು ಅವನಿಗಾಗಿ ಖರ್ಚು ಮಾಡುವುದನ್ನು ತಡೆಯುವಂತಹ ಧೂರ್ತನಾಗಿರಬಾರದಲ್ಲ. ಅಂತಹವನು ಸಿಕ್ಕರೆ ಈಗಲೂ ನಾನು ಮದುವೆಯಾಗುತ್ತೇನೆ'

'ಓಹ್! ನಿಮ್ಮ ತ್ಯಾಗಕ್ಕೆ ಈಡಾಗಬಲ್ಲ ಒಬ್ಬ ವ್ಯಕ್ತಿ ನಿಮಗೆ ಸಿಗುವುದು ಕಷ್ಟವೇ. ಆದರೆ ಮಾನ ವೀಯ ಗುಣಗಳುಳ್ಳ ಒಬ್ಬ ವ್ಯಕ್ತಿ ನಿಮ್ಮಂತಹವರನ್ನು ಮದುವೆಯಾಗಲು ಖಂಡಿತಾ ಬಯಸುತ್ತಾನೆಂಬ ದಂತೂ ನಿಜ. ಅಂತಹವನೊಬ್ಬ ನಿಮಗೆ ಬೇ ಸಿಗಲಿ ಎಂದು ಹಾರೈಸುತ್ತೇನೆ.'

'ನಿಮ್ಮ ಹಾರೈಕೆ ಬರಿಯ ಕನಸಾಗಬಹುದು ಎಂದು ನನ್ನ ಅನಿಸಿಕೆ'

"ಅದೇಕೆ?"

"ನನಗೀಗ ಮೂವತ್ತೆರಡು ವರ್ಷ. ನಾನ ಕೆಲಸಕ್ಕೆ ಸೇರಿಯೇ ಹತ್ತು ವರ್ಷಗಳಾದುವು. ಇಷ್ಟು ವರ್ಷಗಳಲ್ಲಿ ಕಾಣ ಸಿಗದ ಒಬ್ಬ ಉದಾತ್ತ ವ್ಯ ಇನ್ನು ಮುಂದೆ ಸಿಗಬಹುದು ಎಂದು ಹೇ ಆಶಿಸಲಿ?"

"ಹಾಗೆನ್ನಬೇಡಿ, ಈಗ ನೋಡಿ. ನನಗೀ ಅನಿರೀಕ್ಷಿತವಾಗಿ ನಿಮ್ಮಂತಹ ಉತ್ತಮ ಹೆಣ್ಣಿ ಪರಿಚಯವಾಗಿಲ್ಲವೇ? ಮದುವೆಯೇ ಬೇಡ ಎಂದ ದೃಢವಾಗಿ ನಿರ್ಧರಿಸಿದ್ದ ನಾನು ನನ್ನ ನಿರ್ಧಾರವನ್ನು ಸಡಲಿಸಿಲ್ಲವೇ?" ತುಟಿ ಮೀರಿ ಬಂದ ಮಾತು ಪ್ರೀತಿಯ ಹೊನಲನ್ನು ಹಾಸಿದ ಅವನ ಕಣ್ಣುಗಳು ಅವನು ಹೇಳಬೇಕೆಂದಿದ್ದುದನ್ನು ಹೇಳಿದ್ದವು.

ಜೇಮ್ಸ್ ತಾನಾಡಿದುದು ಅತಿಯಾಯಿತೇನೋ ಎಂದೆನಿಸಿ ತುಟಿ ಕಚ್ಚಿದ. ಕಣ್ಣು ತಗ್ಗಿಸಿದ. ನನಗ ಏನು ಮಾತಾಡಬೇಕೆಂದೇ ಹೊಳೆಯಲಿಲ್ಲ. ಅಷ್ಟರ ಜೇಮ್ಸ್ ಹೇಳಿದ "ಶ್ರುತಿ, ಕ್ಷಮಿಸಿ, ನನ್ನ ಮಾ ಅಧಿಕ ಪ್ರಸಂಗವಾಯಿತು. ನಿಮಗೆ ಜಾತಿ ಬಿಟ ವಿವಾಹವಾಗುವುದರಲ್ಲಿ ಅಭ್ಯಂತರವಿಲ್ಲ ಎಂದ ನಾನು ನಿಮ್ಮನ್ನು ಮದುವೆಯಾಗಲು ತುಂಬ ಆಸಕ್ತನಾಗಿದ್ದೇನೆ. ಆದರೆ ನಾನು ದಡ್ಡ. ಸಾಧಾರ ಟ್ಯಾಕ್ಸಿ ಡ್ರೈವರ್. ನಿಮ್ಮ ಯೋಗ್ಯತೆಗೆ ನಾನು ಎಂದ ಸಾಟಿಯಲ್ಲ. ದುಡುಕಬೇಡಿ. ನಿಧಾನವಾಗಿ ಯೋಚ ನಿರ್ಧರಿಸಿ" ಇಷ್ಟು ಹೇಳಿ ಮೇಲೆದ್ದ ಜೇಮ್ಸ್, ನನ ಬೆನ್ನು ಹಾಕಿ ಬಾಗಿಲ ಕಡೆ ನಡೆದ.

–ಸಶೇ

### ಕಂಬಳಿ

ಮೈ ಕೊರಿ–
ಯುವ ಚಳಿಯಲ್ಲಿ
ನಲ್ಲ ಎಷ್ಟು ದಿನ
ಕುಳಿತಿರಲಿ
ನೆನಪಿನ ಕಂಬಳಿ
ಹೊದ್ದು?

ಸುಭದ್ರಾ ಡಿ. ಬಡಿಗೇರ
ಗದಗ – ಬೆಟಗೇರಿ

Edited & Published by B. Viswanatha Reddi for DOLTON PUBLICATIONS, MADRAS-600 026
& Printed by B. V. REDDI at Prasad Process Private Ltd., Madras-600 026